# ನವಕರ್ನಾಟಕ : ಎರಡು ಹೊಸ ಪ್ರಕಟಣೆಗಳು




₹190

**ಅನುವಾದ : ಡಿ. ಜಿ. ಮಲ್ಲಿಕಾರ್ಜುನ**

ರಸ್ಕಿನ್ ಬಾಂಡ್ ಅವರ ಕತೆಗಳು ಬಹು ಬಣ್ಣಗಳು ತುಂಬಿದ ಪ್ರಕೃತಿ – ಪರಿಸರದ ಶಬ್ದಚಿತ್ರಗಳಾಗಿ ಕಣ್ಣಿಗೆ ಬಿಂಬವಾಗುತ್ತವೆ. ಮನಸ್ಸಿಗೆ ಚಲನಚಿತ್ರಗಳಾಗಿ ತೋರುತ್ತವೆ. ಇದಕ್ಕೆ ಅನುರೂಪವಾಗಿ ಅವರು ಭಾಷೆಯನ್ನು ನುಡಿಸುತ್ತಾರೆ. ಇದರಿಂದಾಗಿ ಕತೆಗಳಿಗೆ ಸರಾಗ ಚಲನೆ ದೊರೆತು ನೇರವಾಗಿ ಮನಸ್ಸನ್ನು ಹೊಕ್ಕು ಅರ್ಥಗಳು ಬಿಚ್ಚಿಕೊಳ್ಳುತ್ತವೆ. ಇದಕ್ಕೆ ಇನ್ನೊಂದು ಕಾರಣ ನವಿರಾದ ನಿರೂಪಣೆ. ರಸ್ಕಿನ್ ಅವರ ಕಥನ ಶೈಲಿ ವಿಶಿಷ್ಟವಾದುದು. ಸರಳತೆ ಮತ್ತು ಸ್ಪಷ್ಟತೆ ಇವರ ಕತೆಗಳ ಗುಣ. ಹೆಣಿಗೆಯ ಕ್ರಮದಲ್ಲಿ ಕತೆ ನೆನಪಿನಲ್ಲಿರುವಂತೆ ಮಾಡುತ್ತಾರೆ. ವಸ್ತು – ಜೀವಿ ಸಂಬಂಧಿಯಾದ ವಿವರಣೆಗಳನ್ನು ತರುವಾಗ ವೈಜ್ಞಾನಿಕ ವೈಚಾರಿಕತೆಯನ್ನು ನಿರೂಪಣೆಯಲ್ಲಿಯೇ ಮಿಳಿತಗೊಳಿಸಿ ಒಮ್ಮೊಮ್ಮೆ ವೈಚಾರಿಕತೆಯಿಂದ ಉಂಟಾಗುವ ಗಂಭೀರತೆ ಹಾಗೂ ವಿಚಾರಪರತೆಯುಳ್ಳ ಕತೆಗಳಿಂದ ವಿಮುಖವಾಗದಂತೆ ಮಾಡುವ ಕೌಶಲವನ್ನು ತೋರುತ್ತಾರೆ. ಎಲ್ಲಿಯವರೆಗೆ ಜೀವಾಪಾಯಕ್ಕೆ ಅವಕಾಶ ವಿರುವುದಿಲ್ಲವೋ ಅಲ್ಲಿಯವರೆಗೆ ಮಾನವ – ಪ್ರಾಣಿ – ಪರಿಸರ ಸಂಬಂಧಗಳನ್ನು ಬೆಸುಗೆಯಲ್ಲಿಯೇ ಕೊಂಡೊಯ್ಯುತ್ತಾರೆ.

~ಡಿ. ಜಿ. ಮಲ್ಲಿಕಾರ್ಜುನ




₹275

**ಲೇಖಕ : ಚಿರಂಜೀವಿ ಸಿಂಘ್**

ಜಗತ್ತು ಕಂಡು, ಅದರ ಮೂಲೆ-ಮೂಲೆಗಳಲ್ಲಿ ಬದುಕಿ, ತಮ್ಮ ಲೋಕದೃಷ್ಟಿ ವಿಸ್ತರಿಸಿಕೊಂಡು, ಆಧುನಿಕತೆಯ ಒಳ-ಹೊರಗನ್ನು ಅರಿಯುತ್ತಲೇ ಸಂಪ್ರದಾಯಕ್ಕೆ ವಿಶಾಲತೆಯ ಚಾದರವನ್ನು ಹೊದಿಸಿದ ಸಿಂಘ್ ಸಾಹೇಬರು ನಮ್ಮಲ್ಲಿ ನಮ್ಮವರಾಗಿ ಬದುಕಿದ್ದು ಅವರ ದೊಡ್ಡತನ, ಅವರ ಸಂಸ್ಕಾರಕ್ಕೆ ಹಿಡಿದ ಕನ್ನಡಿ. ಆದರೆ, ನಾವು ಅವರಿಂದ ಕಲಿತದ್ದೇನು? ಅವರ ಶ್ರೀಮಂತಿಕೆಯನ್ನು ನಮ್ಮದಾಗಿಸಿಕೊಂಡದ್ದು ಹೇಗೆ? ಅವರ ಘನತೆ, ಸೂಕ್ಷ್ಮತೆ ಮತ್ತು ಪ್ರಬುದ್ಧತೆಗೆ ನಾವು ಸ್ಪಂದಿಸಿದ್ದು ಹೇಗೆ? ಅವರ ಭಾಷೆ, ಅವರ ಧರ್ಮ, ಅವರ ಸಂಸ್ಕೃತಿಯ ವಿಶೇಷಗಳಿಗೆ ನಾವು ತೆರೆದುಕೊಂಡದ್ದು ಹೇಗೆ? ಇವೆಲ್ಲವನ್ನು ನಾವು ಯೋಚಿಸಬೇಕಿದೆ. ಹೀಗೆ ಯೋಚಿಸುವುದರ ಮೂಲಕ ನಾವು ನಮ್ಮ ಸಂಕುಚಿತತೆ, ಸಣ್ಣತನ, ಅಹಂಕಾರ, ಅಸಹನೆ, ಅಂಧಾಭಿಮಾನವನ್ನು ಮೀರಬೇಕಿದೆ. ನಮಗೆ ಇರಬಹುದಾದ ನಮ್ಮ ಶ್ರೇಷ್ಠತೆಯ ವ್ಯಸನದ ಸೂಚನೆಗಳನ್ನು ಧಿಕ್ಕರಿಸಬೇಕಿದೆ. ಇಲ್ಲಿರುವ ಲೇಖನಗಳು ನಮಗೆ ಈ ದಿಕ್ಕಿನಲ್ಲಿ ಸಾಗುವುದಕ್ಕೆ ಅನುವು ಮಾಡಿಕೊಡಲಿವೆ.

~ಸುಗತ ಶ್ರೀನಿವಾಸರಾಜು

ಮೂರು ವರ್ಷದ 'ಹೊಸತು' ಚಂದಾದಾರರಿಗೆ 20% ಸೋಡಿ. ಇತರರಿಗೆ 10% ಸೋಡಿ. ನಿವ್ವಳ ₹ 250ಕ್ಕಿಂತ ಕಡಿಮೆ ಮೊಬಲಗಿನ ಬೇಡಿಕೆಗಳಿಗೆ ಅಂಚೆವೆಚ್ಚ ₹ 40 ಪ್ರತ್ಯೇಕ

*ಹಣವನ್ನು ಡಿ.ಡಿ., ಎಂ.ಓ. ಮೂಲಕ ಕಳಿಸಿ ಅಥವಾ ನಮ್ಮ ಪುಸ್ತಕ ಮಳಿಗೆಗೆ ಭೇಟಿ ನೀಡಿ*

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂಚೆ ಪೆಟ್ಟಿಗೆ ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001. ಫೋನ್ : 080–22161900/14 ಮೊಬೈಲ್ : 9480686858
e-mail : navakarnataka@gmail.com http://navakarnataka.blogspot.in

ಆನ್‌ಲೈನ್ ಮೂಲಕವೂ ಲಭ್ಯ  Shop Online www.navakarnataka.com

ಶಾಖೆಗಳು : ಬೆಂಗಳೂರು ✆ 22203106 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಕಲಬುರಗಿ ✆ 224302

# ಹೊಸತು

ಒಳಗೇನಿದೆ?

ನೆಮ್ಮದಿಯ ನಾಳೆ ನಮ್ಮದು




**ಚಿತ್ರಗಳು :** ಕಮಲಂ ಅರಸು, ತನು, ಸುನಿಲ್ ಮಿಶ್ರಾ, ಪಿ. ಜಿ. ನಾರಾಯಣ

**ಮುಖಪುಟ :** ಲೆನಿನ್ ೧೫೦

**ವಿನ್ಯಾಸ :** ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ :** ಜಿ. ವಿ. ತೇಜೋವತಿ




## ಈ ತಿಂಗಳು

**ಚೌ**ಕಿದಾರ್' ಪದ ಕನ್ನಡಕ್ಕೆ ಸೇರಿ ಎಷ್ಟು ವರ್ಷವಾಯಿತೋ ತಿಳಿಯದು. ಆದರೆ ಅಂಥವರನ್ನು ನೋಡದೇ ಇರುವವರು ಅಪರೂಪ. ಹಿಂದೆಲ್ಲ ಚೌಕಿದಾರರು ನೇಪಾಳದಿಂದ ಬರುತ್ತಿದ್ದರು. ಭಾರತೀಯ ಸೇನೆಯಲ್ಲಿ ನೇಪಾಳೀಯರ ಒಂದು ದಂಡೇ ಇತ್ತು. ಈಗಲೂ ಇದ್ದಾರೆ ಅನ್ನಿ. ಚೌಕಿದಾರ ಪದದ ಅರ್ಥಮಾತ್ರ ಎಲ್ಲರಿಗೂ ಗೊತ್ತು – ಶ್ರೀಮಂತರ ಮನೆ ಬಾಗಿಲ ಕಾವಲುಗಾರ. ಈಗ ಬಿಡಿ ಬೆಂಗಳೂರಿನಂಥ ನಗರದಲ್ಲಿ ಬಹುಮಹಡಿ ಕಟ್ಟಡಗಳು ಬಂದ ಮೇಲೆ ಚೌಕಿದಾರಿಕೆಯ ದೊಡ್ಡ ಪಡೆಯೇ ಇದೆ. ಈ ಐಷಾರಾಮಿ ಮಹಡಿ ಮನೆಗಳಲ್ಲಿ ವಾಸಿಸುವವರೆಲ್ಲ ಅಧಿಕವಾಗಿ ಐಟಿ–ಬಿಟಿಯವರೇ, ಅಂದರೆ ಅನುಕೂಲಸ್ಥರೆ. ಅವರನ್ನು ಸಂರಕ್ಷಿಸಲು ಇರುವವರೇ ಚೌಕಿದಾರರು. ಹಿಂದಿನ ಕಾಲದಲ್ಲಿ ಬಂಗ್ಲೆ ಮನೆಗಳಲ್ಲಿ ಮಾತ್ರ ಕಾಣಿಸಿಕೊಳ್ಳುತ್ತಿದ್ದರು ಇವರು. ಇವರನ್ನು ಒದಗಿಸುವ ಏಜನ್ಸಿಯೇ ಸಿದ್ಧವಾಗಿದೆ. ಕಟ್ಟಡದ ಮಾಲಿಕರು ಕೊಟ್ಟ ಸಮವಸ್ತ್ರ ಧರಿಸಿ ಮೆರೆಯುವ ಇವರು ಪಡೆಯುವ ಸಂಬಳವೂ ಕಡಿಮೆಯೆ. ಇಷ್ಟೆಲ್ಲ ಪೀಠಿಕೆ ಏಕೆ ಎಂದು ಓದುಗರು ವಿಸ್ಮಿತರಾಗಬಹುದು. ಪ್ರಧಾನಮಂತ್ರಿಯಾಗಿ ಮೋದಿ ಅಧಿಕಾರ ವಹಿಸಿಕೊಂಡ ಮೇಲೆ 'ಚೌಕಿದಾರ್' ಹೆಚ್ಚಾಗಿ ಚಾಲ್ತಿಗೆ ಬಂತು. ಪ್ರಧಾನಿಯಾದ ಮೇಲೆ ಅವರು ತಮ್ಮನ್ನು 'ಪ್ರಧಾನ ಚೌಕಿದಾರ್' ಎಂದು ಕರೆದುಕೊಂಡರು. ಅವರು ಹೇಳಿಕೊಳ್ಳುತ್ತಿದ್ದುದು ನಿಜ. ಕಳೆದ ಐದು ವರ್ಷಗಳ ತಮ್ಮ ಆಡಳಿತದ ಕಾಲದಲ್ಲಿ ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಅಂಬಾನಿ, ಅದಾನಿಗಳ ಕಾರುಬಾರು ಮುಕ್ಕಾಗದಂತೆ ನೋಡಿಕೊಂಡಿದ್ದಾರೆ. ಚೌಕಿದಾರರಲ್ಲಿ ದಲಿತರು ಹಾಗೂ ಇತರ ಹಿಂದುಳಿದವರೇ ಹೆಚ್ಚು. ಈಗ ಮೋದಿ ಸರಕಾರದ ಅವಧಿಯಲ್ಲಿ ನಾನೂ ಚೌಕಿದಾರ ಎಂದು ಕರೆದುಕೊಳ್ಳುವುದು ಒಂದು ಫ್ಯಾಷನ್ ಆಗಿಬಿಟ್ಟಿದೆ. ಭಾಜಪದವರು ಅಂಬಾನಿ ಅದಾನಿಗಳ ಕಾವಲುಗಾರನಾಗಿದ್ದರೆ ಕಾಂಗ್ರೆಸ್ ಅಧಿಕಾರದಲ್ಲಿದ್ದಾಗ ಟಾಟಾ ಬಿರ್ಲಾಗಳ ಪರವಾಗಿದ್ದರು. ಬಡವರ ಬವಣೆ ಮಾತ್ರ ಕೇಳುವವರೇ ಇಲ್ಲ. ತುಟಿಗೆ ತುಪ್ಪ ಸವರಿದಂತೆ ಆಗೀಗ, ಅದೂ ಚುನಾವಣೆಗಳು ಸಮೀಪಿಸುತ್ತಿರುವಾಗ ಕೆಲವು ಜನಪರ ಕಾರ್ಯಗಳನ್ನು ಕೈಗೊಳ್ಳುತ್ತದೆ ಸರಕಾರ. ಆದರೆ 'ಸರಕಾರದ ಕೆಲಸ ದೇವರ ಕೆಲಸ' ಎಂದುಕೊಂಡು ಶ್ರೀಮಂತರನ್ನು ಕಾಯುವುದೇ, ಕಾಪಾಡುವುದೇ ಮುಖ್ಯ ಸರಕಾರಗಳಿಗೆ. ಮೋದಿ ಅದಕ್ಕೆ ಹೊರತೇನಲ್ಲ.

ಚುನಾವಣೆಗಳು ಬಂತೆಂದರೆ ರಾಜಕಾರಣಿಗಳು ನಾಲಿಗೆ ಹರಿಬಿಡುತ್ತಾರೆ. ಎಗ್ಗಿಲ್ಲದೆ ಮಾತನಾಡುತ್ತಾರೆ. ಕಂಡಾಪಟ್ಟೆ ಖರ್ಚು ಮಾಡುತ್ತಾರೆ. ಹೆಂಡ, ಹಣದ ಹೊಳೆ ಹರಿಸುತ್ತಾರೆ. ಸೀರೆ, ಬಟ್ಟೆ, ಗೃಹೋಪಯೋಗಿ ವಸ್ತುಗಳನ್ನು ಹಂಚುತ್ತಾರೆ. ಇದು ಪ್ರತಿ ಚುನಾವಣೆಯಲ್ಲೂ ನಡೆಯುತ್ತಿರುವ ಸಂಗತಿ. ಚುನಾವಣಾ ಆಯೋಗಕ್ಕೆ ಇಂಥ ನಡಾವಳಿಗಳನ್ನು ತಡೆಯಲಾಗುತ್ತಿಲ್ಲ. ಅಧಿಕಾರವಿದ್ದಾಗ್ಯೂ ಚಲಾಯಿಸಲು ಮುಜುಗರ. ಯಾರು ಬರುತ್ತಾರೋ ಅಧಿಕಾರಕ್ಕೆ ಎನ್ನುವ ಭಯ ಬೇರೆ! ಚುನಾವಣೆಯ ಸಮಯದಲ್ಲಿ ರಸ್ತೆ ರಸ್ತೆಯಲ್ಲಿ ಚೆಕ್‌ಪೋಸ್ಟ್‌ಗಳನ್ನು ಸ್ಥಾಪಿಸಿರುತ್ತಾರೆ. ಅನುಮಾನಾಸ್ಪದ ವಾಹನಗಳನ್ನು ತಪಾಸಣೆ ಮಾಡುತ್ತಾರೆ. ಕೆಲವೊಮ್ಮೆ ನೂರಾರು ಕೋಟಿ ರೂ. ನಗದು, ವಸ್ತುಗಳನ್ನು ವಶಪಡಿಸಿಕೊಳ್ಳುತ್ತಾರೆ. ಮಾಧ್ಯಮಗಳಲ್ಲಿ ಅದು ವರದಿಯೂ ಆಗುತ್ತದೆ. ನಂತರ ಏನಾಯಿತು ಎಂಬುದು ಗೊತ್ತಾಗುವುದಿಲ್ಲ. ಎನ್‌ಫೋರ್ಸ್‌ಮೆಂಟ್ ಡೈರೆಕ್ಟರೇಟ್ ಸರಕಾರಿ ಅಧಿಕಾರಿಗಳು, ಶ್ರೀಮಂತರ ಮನೆ ಮೇಲೆ ದಾಳಿ ನಡೆಸಿ ಸಾವಿರಾರು ಕೋಟಿ ವಶಪಡಿಸಿಕೊಂಡಾಗಲೂ ಹಾಗೆಯೆ? ದಾಳಿ ಸುದ್ದಿಯಾಗುತ್ತೆ, ಮತ್ತೆಲ್ಲ ಮಾಮೂಲಾಗಿ ನಡೆಯುತ್ತೆ. ಇದು ವಾಸ್ತವ ಸಂಗತಿ.

ಸುಪ್ರೀಂ ಕೋರ್ಟ್ ತರಾಟೆಗೆ ತೆಗೆದುಕೊಂಡ ಮೇಲೆ ಈ ಬಾರಿ ಚುನಾವಣಾ ಆಯೋಗ ಕ್ರಮ ತೆಗೆದುಕೊಂಡಿದೆ. ಈ ಸಲದ ಚುನಾವಣೆ ಪ್ರಚಾರದ ಭಾಷಣಗಳು ತೀರಾ ಕಳಪೆಯಾಗಿವೆ. ಪ್ರತಿ ಸಲ ಚುನಾವಣೆ

**(೬ನೇ ಪುಟಕ್ಕೆ)**




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೨೦ ಸಂಚಿಕೆ-೧೦ ಮೇ ೨೦೧೯

■ **ಗೌರವ ಸಂಪಾದಕ**

ಜಿ. ರಾಮಕೃಷ್ಣ

■ **ಸಂಪಾದಕ-ಮುದ್ರಕ-ಪ್ರಕಾಶಕ**

ಸಿದ್ದನಗೌಡ ಪಾಟೀಲ

■ **ಸಹಸಂಪಾದಕರು**

ಎಂ. ಅಬ್ದುಲ್ ರೆಹಮಾನ್ ಪಾಷ

ಇಂದಿರಾ ಕುಮಾರಿ

ಸಿ. ಆರ್. ಕೃಷ್ಣರಾವ್

ಎನ್. ಗಾಯತ್ರಿ

ಎಸ್. ಸುರೇಂದ್ರ

■ **ವ್ಯವಸ್ಥಾಪಕ**

ಎ. ರಮೇಶ ಉಡುಪ

■ **ಮುದ್ರಣ**

**ಶ್ರೀ ವಿನಾಯಕ ಪ್ರಿಂಟರ್ಸ್**

೭೩೮/೧೦, ೬೦ನೇ ಅಡ್ಡರಸ್ತೆ

೫ನೇ ಬ್ಲಾಕ್, ರಾಜಾಜಿನಗರ

ಬೆಂಗಳೂರು - ೫೬೦ ೦೧೦

■ **ಹೊಸತು ಕಚೇರಿಯ ವಿಳಾಸ**




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**

೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ , ಅಂ. ಪೆ. ೫೧೯೮

ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧

ದೂರವಾಣಿ : ೨೨೧೬೧೯೧೧, ೨೨೧೬೧೯೧೨

**e-mail : navakarnataka@gmail.com**

**hosathu@gmail.com**

**hosathu.nkp@gmail.com**

**URL : www.navakarnataka.com**

**http : //navakarnataka.blogspot.in**

**http : //hosathumonthly.blogspot.in**




# ಸಂಪಾದಕೀಯ

## ಕಾರ್ಮಿಕರಿಲ್ಲದ ಕೈಗಾರಿಕೆ, ರೈತರಿಲ್ಲದ ಕೃಷಿ

ದೇಶದ, ವಿಶ್ವದ ದುಡಿವ ಜನತೆಗೆ 'ಹೊಸತು' ಬಳಗದಿಂದ ಮೇ ದಿನಾಚರಣೆಯ ಶುಭಾಶಯಗಳು.

೧೮೮೬ ಮೇ ಒಂದನೇ ದಿನವನ್ನು ವಿಶ್ವ ಕಾರ್ಮಿಕ ದಿನಾಚರಣೆಯನ್ನಾಗಿ ಆಚರಿಸಲಾಗುತ್ತಿದೆ. ಇದು ಕೇವಲ ಸ್ಮರಣೆಗಾಗಿ ನಡೆವ ದಿನಾಚರಣೆಯಲ್ಲ, ದುಡಿವ ವರ್ಗ ತಮ್ಮ ಮೂಲಭೂತ ಹಕ್ಕಿಗಾಗಿ ಚಿಕ್ಯಾಗೋ ನಗರದಲ್ಲಿ ನಡೆಸಿದ ಸಮರ ಧೀರ ಹೋರಾಟದ ಸ್ಮರಣೆಯ ದಿನ. ದುಡಿವ ವರ್ಗದ ಪ್ರತಿರೋಧದ, ತ್ಯಾಗ, ಬಲಿದಾನದ ಮಾದರಿಯನ್ನು ವಿಶ್ವದ ದುಡಿವ ವರ್ಗಕ್ಕೆ ತೋರಿಸಿಕೊಟ್ಟ ದಿನ. ಅದೇ ಸಂದರ್ಭದಲ್ಲಿ ಬಂಡವಾಳಶಾಹಿ ವರ್ಗ, ಪ್ರಭುತ್ವ ಮತ್ತು ನ್ಯಾಯಾಂಗ ಒಂದಾಗಿ ದುಡಿವ ವರ್ಗದ ಮೇಲೆ ನಡೆಸಿದ ದಮನಕಾರಿ ನೀತಿಗೂ ಸಾಕ್ಷಿಯಾದ ದಿನ. ದಮನಕಾರಿ ನೀತಿಗಳಿಗೆ ಎದುರಾಗಿ ದುಡಿವ ವರ್ಗ ಒಗ್ಗಟ್ಟಾಗಿ ಹೋರಾಡಿದ ಈ ಘಟನೆ ವಿಶ್ವದ ದುಡಿವ ವರ್ಗಕ್ಕೆ ಮಾದರಿಯಾಗಿ, ವಿಶ್ವದ ಶ್ರಮಿಕರು ತಮ್ಮ ಹಕ್ಕುಗಳನ್ನು ಪಡೆಯಲು, ಘನತೆಯ ಜೀವನ ನಡೆಸಲು ಸಾಧ್ಯವಾಯಿತು. ಮುಂದುವರೆದು ದುಡಿವ ವರ್ಗ ಉತ್ಪಾದನಾ ವ್ಯವಸ್ಥೆಯಲ್ಲಿ ತನ್ನ ಅಸ್ತಿತ್ವವನ್ನು, ಅವಶ್ಯಕತೆಯನ್ನು, ಅನಿವಾರ್ಯತೆಯನ್ನು ಬಂಡವಾಳಗಾರ ವರ್ಗಕ್ಕೆ ಮತ್ತು ಪ್ರಭುತ್ವಗಳಿಗೆ ಸಾಬೀತುಪಡಿಸಿತು. ಮಾತ್ರವಲ್ಲ, ೧೮೭೧ರಲ್ಲಿ ಪ್ಯಾರಿಸ್‌ನಲ್ಲಿ ನಡೆದ ಕಾರ್ಮಿಕರ ಹೋರಾಟ, ದುಡಿವ ವರ್ಗ ಶೋಷಕ ವ್ಯವಸ್ಥೆಯನ್ನು, ಆ ವ್ಯವಸ್ಥೆಯ ರಕ್ಷಣೆಗೆ ನಿಂತ ಪ್ರಭುತ್ವವನ್ನು ಕಿತ್ತೆಸೆದು ಪ್ರಭುತ್ವವನ್ನೇ ವಶಪಡಿಸಿಕೊಳ್ಳುವ ಪ್ರಯತ್ನ ಮಾಡಿ ಸುಮಾರು ೭೦ ದಿನಗಳ ಆಡಳಿತ ನಡೆಸಿತು. ದುಡಿವ ವರ್ಗದ ಸಿದ್ಧಾಂತಿ ಕಾರ್ಲ್ ಮಾರ್ಕ್ಸ್ ಕಣ್ಣ ಮುಂದೆಯೇ ನಡೆದ ಈ ಕಾರ್ಮಿಕ ವರ್ಗದ ಕ್ರಾಂತಿ 'ಸಮಾಜವಾದಿ' ಸಿದ್ಧಾಂತವನ್ನು ಇನ್ನೂ ಸಶಕ್ತಗೊಳಿಸಲು ಸಾಧ್ಯವಾಯಿತು. ಮುಂದೆ ಲೆನಿನ್ ನಾಯಕತ್ವದಲ್ಲಿ ರಶಿಯಾದಲ್ಲಿ ನಡೆದ ಅಕ್ಟೋಬರ್ ಕ್ರಾಂತಿ ಬಂಡವಾಳಶಾಹಿ ವ್ಯವಸ್ಥೆಯನ್ನೂ ಅದರ ರಕ್ಷಣೆಗೆ ನಿಂತ ಪ್ರಭುತ್ವವನ್ನೂ ಕಿತ್ತೆಸೆದು ಸಮಾಜವಾದಿ ಪ್ರಭುತ್ವವನ್ನು ಸ್ಥಾಪಿಸಿ ೭೦ ವರ್ಷಗಳ ಕಾಲ ದುಡಿವ ವರ್ಗದ ನಾಯಕತ್ವದಲ್ಲಿ ಬಂಡವಾಳಶಾಹಿ ವರ್ಗವಿಲ್ಲದೇ ಆಡಳಿತ ನಡೆಸಿ, ಉತ್ಪಾದನಾ ವ್ಯವಸ್ಥೆಯನ್ನು ಸುವ್ಯವಸ್ಥಿತಗೊಳಿಸಿ – 'ಸರ್ವರಿಗೂ ಸಮಪಾಲು, ಸರ್ವರಿಗೂ ಸಮಬಾಳು' ಎಂಬ ನೀತಿಯನ್ನು ಜಗತ್ತಿಗೆ ಸಾರಿತು. ಇದರ ಪರಿಣಾಮ ವಿಶ್ವದ ಬಹುತೇಕ ದೇಶಗಳಲ್ಲಾಗಿ, ದುಡಿವ ವರ್ಗದ ಹೋರಾಟದ ಗುರಿ ಕೇವಲ ಹಕ್ಕುಗಳನ್ನು ಕೇಳುವುದು, ಪಡೆಯುವುದಲ್ಲ, ದುಡಿವ ವರ್ಗ ಪ್ರಭುತ್ವವನ್ನೇ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡು ಸಮಗ್ರ ಜನತೆಯ ಪರವಾಗಿ ವ್ಯವಸ್ಥೆಯನ್ನು ರೂಪಿಸುವುದು ಎಂದಾಯಿತು. ಈ ಗುರಿ ಪೂರ್ವ ಯುರೋಪ್, ಚೀನಾ, ಕ್ಯೂಬಾ, ವಿಯೆಟ್ನಾಂ ಮುಂತಾದ ದೇಶಗಳಲ್ಲಿ ಜಾರಿಗೆ ಬಂದಿತು. ಬಂಡವಾಳಶಾಹಿ ವರ್ಗವಿಲ್ಲದ, ಅವರ ಶೋಷಣೆಯಿಲ್ಲದ, ಸಮಗ್ರ ಜನತೆ ಪ್ರಭುತ್ವದ ಭಾಗವಾಗಿ ಸಮಾಜವಾದಿ ವ್ಯವಸ್ಥೆ ದುಡಿವ ವರ್ಗದ ಜನಸಾಮಾನ್ಯರ ಮೂಲಭೂತ ಸಮಸ್ಯೆಗಳನ್ನು ನಿವಾರಿಸುವಲ್ಲಿ ಯಶಸ್ವಿಯಾಯಿತು.

ಸಮಾಜವಾದಿ ವ್ಯವಸ್ಥೆಯ ಸ್ಥಾಪನೆ, ವಿಸ್ತರಣೆಯಿಂದ ದಿಗಿಲುಗೊಂಡ ಬಂಡವಾಳಶಾಹಿ ವರ್ಗ ಅಮೆರಿಕ ಸಾಮ್ರಾಜ್ಯಶಾಹಿಯ ನೇತೃತ್ವದಲ್ಲಿ ಒಂದಾಗಿ ಸಮಾಜವಾದಿ ವ್ಯವಸ್ಥೆಯ ಮೇಲೆ ಪರೋಕ್ಷ ದಾಳಿ ನಡೆಸಿ ಮುನ್ನಡೆ ಸಾಧಿಸಿತು. ಅದರ ಪರಿಣಾಮವಾಗಿ ಸೋವಿಯತ್ ಯೂನಿಯನ್ ಹಾಗೂ ಪೂರ್ವ ಯುರೋಪಿನ ಸಮಾಜವಾದಿ ವ್ಯವಸ್ಥೆ ಕುಸಿಯಿತು. ಸಾಮ್ರಾಜ್ಯಶಾಹಿಗಳು ಇದನ್ನು ಕಮ್ಯುನಿಸಂನ ಪತನ ಎಂದರು. ಮಾರ್ಕ್ಸ್‌ವಾದ ಅಪ್ರಸ್ತುತ ಎಂದರು. ಕಾರ್ಪೊರೇಟ್ ಕಂಪನಿಗಳ ಮೂಲಕ ಜಾಗತೀಕರಣ, ಉದಾರೀಕರಣ, ಖಾಸಗೀಕರಣದ ನೀತಿಗಳನ್ನು ವಿಶ್ವದ ಬಡ, ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಹೇರಿದರು. ಈ ತ್ರಿಕರಣಗಳು ಕಾರ್ಪೊರೇಟ್ ಕಂಪನಿಗಳಿಗೆ ಸುಲಿಗೆ ಮಾಡಲು, ವಿಶ್ವದ, ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳ ಶೋಷಣೆಗೆ, ಲೂಟಿಗೆ ಸಾಧನಗಳಾದವು ಮತ್ತು ಸಂಪತ್ತಿನ ಕ್ರೋಡೀಕರಣಕ್ಕೆ ಕಾರಣವಾದವು. ೧೮೮೬ರಲ್ಲಿ ಬಂಡವಾಳಶಾಹಿ ವರ್ಗ ಹೇಗೆ ಪ್ರಭುತ್ವವನ್ನು ತನ್ನ ಅಡಿಯಾಳಾಗಿಟ್ಟುಕೊಂಡಿತ್ತೋ ಅದೇರೀತಿ ಇಂದು ವಿಶ್ವದ ಮತ್ತು ಭಾರತದ ಬಹುತೇಕ ಪ್ರಭುತ್ವಗಳನ್ನು ಕಾರ್ಪೊರೇಟ್ ಕಂಪನಿಗಳು ತಮ್ಮ ಅಡಿಯಾಳಾಗಿರಿಸಿಕೊಂಡಿವೆ. ಇದರ ಪರಿಣಾಮವಾಗಿ ಇಂದು ಭಾರತದ ಶೇ. ೭೩ರಷ್ಟು ಸಂಪತ್ತು ಕೇವಲ ಶೇ. ೧ರಷ್ಟು ಸಿರಿವಂತರ ಮಾಲಿಕತ್ವದಲ್ಲಿದೆ. ೧೯೯೧ರಿಂದ ಆರಂಭವಾದ ಈ ಉದಾರೀಕರಣದ, ಕಾರ್ಪೊರೇಟ್ ಪರ ನೀತಿಗೆ ಭಾರತದ ಪ್ರಭುತ್ವ ನಮ್ರ ಸೇವಕನಾಗಿ, ದುಡಿವ ವರ್ಗದ ಮತ್ತು ಜನಸಾಮಾನ್ಯರ ವರ್ಗ ಶತ್ರುವಾಗಿ ಕೆಲಸ ಮಾಡಿದೆ.

ಇಂದು ಭಾರತದ ಪ್ರಭುತ್ವ ಸಂಪೂರ್ಣವಾಗಿ ಕಾರ್ಪೊರೇಟ್ ಕಂಪನಿಗಳ ಆಡಳಿತ ವಿಭಾಗವಾಗಿ ಮಾರ್ಪಟ್ಟಿದೆ. ದುಡಿವ ವರ್ಗ ಮತ್ತು ಜನಸಾಮಾನ್ಯರ ಹಕ್ಕುಗಳನ್ನು ದಮನ ಮಾಡಲಾಗುತ್ತಿದೆ. ೧೯೨೦ರಿಂದ, ಬ್ರಿಟಿಷರ ಕಾಲದಿಂದ ಹೋರಾಟ ನಡೆಸಿ ತನ್ನ ಹಕ್ಕುಗಳನ್ನು ಪಡೆದ ಭಾರತದ ಕಾರ್ಮಿಕ ವರ್ಗ ಈಗ ತಾನೇ ಗಳಿಸಿದ ಹಕ್ಕುಗಳನ್ನು ಕಳೆದುಕೊಳ್ಳುತ್ತಿದೆ. ಕಾರ್ಮಿಕರ ಪರವಾಗಿರುವ ೪೪ ಕೇಂದ್ರ ಕಾರ್ಮಿಕ ಕಾನೂನುಗಳನ್ನು ತೆಗೆದುಹಾಕಿ ಕೇವಲ ೪ ಕಾರ್ಮಿಕ ಸಂಹಿತೆಗಳಲ್ಲಿ ಸೇರಿಸಲಾಗಿದೆ. ಖಾಯಂ ಕೆಲಸ ಎನ್ನುವುದು ಈಗ ಕಾರ್ಮಿಕರ ಹಕ್ಕಾಗಿ ಉಳಿದಿಲ್ಲ. 'ಬೇಕಾದಾಗ

ಬಳಸಿ ಬೇಡವಾದಾಗ ಬಿಸಾಕುವ' ಸ್ಥಿತಿಗೆ ಕಾರ್ಮಿಕ ವರ್ಗ ತಲುಪಿದೆ. 'ನಿಗದಿತ ಕಾಲಾವಧಿಯ ಕಾರ್ಮಿಕ' ಎನ್ನುವುದು ಕಾನೂನುಬದ್ಧವಾಗಿಯೇ ಜಾರಿಗೆ ಬಂದಿದೆ. ನೀಮ್ (ರಾಷ್ಟ್ರೀಯ ಉದ್ಯೋಗ ಉತ್ತೇಜನ ಧ್ಯೇಯ) ಹೆಸರಿನಲ್ಲಿ, ತರಬೇತಿ ಕಾರ್ಯಕ್ರಮದ ಹೆಸರಿನಲ್ಲಿ ದುಡಿಮೆಗೆ, ದುಡಿಮೆಗಾರರಿಗೆ ಸಾಮಾಜಿಕ ಭದ್ರತೆಯನ್ನೇ ನಿರಾಕರಿಸಲಾಗಿದೆ. ಇವೆಲ್ಲವು ಕಾರ್ಪೊರೇಟ್ ಕಂಪನಿಗಳ ಹಿತಾಸಕ್ತಿಗೆ ಪೂರಕವಾಗಿ ತರಲಾದ ಮಾರ್ಪಾಡುಗಳು. ಇನ್ನೊಂದೆಡೆ ಕಾರ್ಮಿಕರ ಹಕ್ಕುಗಳನ್ನು ಜಾರಿ ಮಾಡುತ್ತಿದ್ದ ಸಾರ್ವಜನಿಕ ವಲಯದ ಕೈಗಾರಿಕೆಗಳನ್ನು ಖಾಸಗೀಕರಣಗೊಳಿಸಲಾಗುತ್ತಿದೆ. ಸಾರ್ವಜನಿಕ ರಕ್ಷಣಾ ಉತ್ಪಾದನಾ ಕ್ಷೇತ್ರಗಳನ್ನೂ ಒಳಗೊಂಡು ಇಂಧನ, ಪೆಟ್ರೋಲಿಯಂ, ದೂರ ಸಂಪರ್ಕ, ಉಕ್ಕು, ವಿಮಾನಯಾನ, ಬಂದರು ಮುಂತಾದ ಬೃಹತ್ ಉತ್ಪಾದನಾ, ಸೇವಾವಲಯಗಳನ್ನ ಖಾಸಗಿಯವರಿಗೆ ವಹಿಸಲಾಗುತ್ತಿದೆ. ಈಗಾಗಲೇ ದೇಶದ ೬೦೦ ರೈಲು ನಿಲ್ದಾಣಗಳನ್ನು ಖಾಸಗಿಯವರಿಗೆ ವಹಿಸಲಾಗುತ್ತಿದೆ. ಒಟ್ಟಾರೆ ಉತ್ಪಾದನಾ ಕ್ಷೇತ್ರವನ್ನು ಸಾರ್ವಜನಿಕ ವಲಯದಿಂದ ಖಾಸಗಿ ವಲಯಕ್ಕೆ, ಅಂದರೆ ಕಾರ್ಪೊರೇಟ್ ವಲಯಕ್ಕೆ ಹಸ್ತಾಂತರಿಸಲಾಗುತ್ತಿದೆ. ಖಾಸಗಿ ವಲಯದಲ್ಲಿ ಕಾರ್ಮಿಕ ವರ್ಗ ತನ್ನ ಮೂಲಭೂತ ಹಕ್ಕುಗಳನ್ನು ಕಳೆದುಕೊಳ್ಳುವುದು ಮಾತ್ರವಲ್ಲ ಭಾರತದ ಸಾಮಾಜಿಕ ಸ್ಥಿತಿಗತಿಯ ಹಿನ್ನೆಲೆಯಲ್ಲಿ ಸಂವಿಧಾನಬದ್ಧವಾಗಿ ಪಡೆದ ಮೀಸಲಾತಿಯ ಹಕ್ಕನ್ನೂ ಕಳೆದುಕೊಳ್ಳುತ್ತಿದೆ. ಒಟ್ಟಾರೆ ಭಾರತದ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲವನ್ನು ಕಾರ್ಪೊರೇಟ್ ಕಂಪನಿಗಳ ಲೂಟಿಗೆ ಅನುಕೂಲ ಮಾಡಿಕೊಡುವಲ್ಲಿ ಇಂದಿನ ಪ್ರಭುತ್ವ ದಲ್ಲಾಳಿಯಾಗಿ ನಿಂತಿದೆ.

ಭಾರತದ ಇಂದಿನ ದುಡಿವ ವರ್ಗ ಗಮನಿಸಬೇಕಾದ ಇನ್ನೊಂದು ಅಪಾಯವೆಂದರೆ ಕಾರ್ಮಿಕ ವರ್ಗವನ್ನು ಉತ್ಪಾದನಾ ವಲಯದಿಂದ ದೂರವಿಡುತ್ತಿರುವುದು. ಯಂತ್ರಜ್ಞಾನ ಮತ್ತು ತಂತ್ರಜ್ಞಾನಗಳ ವಿಕಾಸ ಒಟ್ಟಾರೆ ಮಾನವನ ಸಾಮಾಜಿಕ ವಿಕಾಸಕ್ಕೆ ಸಾಧನವಾಗಬೇಕು. ಆದರೆ ಇಂದು ಈ ಜ್ಞಾನ ಶಾಖೆಗಳು ಕಾರ್ಪೊರೇಟ್ ಕಂಪನಿಗಳ ಲೂಟಿಗೆ ಸಾಧನವಾಗಿವೆ. ಪರಿಣಾಮವಾಗಿ ಉತ್ಪಾದನಾ ಹಾಗೂ ಸೇವಾ ವಲಯದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನಗಳು ಮಾನವ ಶಕ್ತಿಗೆ ಬದಲಿಯಾಗಿ ಅನಾವರಣಗೊಳ್ಳುತ್ತಿವೆ. ಚಾಲಕನಿಲ್ಲದ ವಾಹನಗಳು ಜಾರಿಗೆ ಬರುತ್ತಿರುವಂತೆ ಕಾರ್ಮಿಕನಿಲ್ಲದ ಕೈಗಾರಿಕೆಗಳು ಆವರಿಸಿಕೊಳ್ಳುತ್ತಿವೆ. ಸಾವಿರಾರು ಜನ ಕೆಲಸ ಮಾಡುವ ಕ್ಷೇತ್ರದಲ್ಲಿ ಹತ್ತಾರು ತಂತ್ರಜ್ಞರಿದ್ದರೆ ಸಾಕು ಎನ್ನುವ ಸ್ಥಿತಿ ನಿರ್ಮಾಣವಾಗಿದೆ. ಈ ಸ್ಥಿತಿ ಕೇವಲ ಕೈಗಾರಿಕೆಗಳಿಗೆ ಮಾತ್ರವಲ್ಲ, ಕೃಷಿಯನ್ನೂ ಕಾರ್ಪೊರೇಟ್ ಹಿತಾಸಕ್ತಿಗೆ ಪೂರಕವಾಗಿ ಕೈಗಾರಿಕೀಕರಣಗೊಳಿಸುತ್ತಿರುವ ಅಪಾಯ ಎದುರಾಗುತ್ತಿದೆ. ಕೇಂದ್ರದ ಮೋದಿಯವರ ಸರಕಾರ ೨೦೧೭ರಲ್ಲಿ ತಂದಿರುವ ಎ.ಪಿ.ಎಲ್.ಎಂ.ಸಿ. ಮಾದರಿ  ಕಾನೂನಿನ ಪ್ರಕಾರ 'ಫಾರ್ಮರ್ ಪ್ರೊಡ್ಯೂಸರ್ ಕಂಪನಿ'ಗಳು ದೇಶದ ಕೃಷಿ ವ್ಯವಸ್ಥೆಯನ್ನು ಕಬಳಿಸುತ್ತವೆ. ಅಲ್ಲಿಗೆ ದೇಶದ ಕೃಷಿ ಕಾರ್ಮಿಕರು, ಶೇ. ೮೫ರಷ್ಟಿರುವ ಸಣ್ಣ, ಅತಿ ಸಣ್ಣ ರೈತರು ಕಾರ್ಪೊರೇಟ್ ಕೃಷಿಗೆ ಬಲಿಯಾಗುತ್ತಾರೆ. ಬಹುತೇಕ ಕೃಷಿ ಅವಲಂಬಿತ ಕೃಷಿ ಕೂಲಿಕಾರರು ವಲಸೆ ಕಾರ್ಮಿಕರಾಗಿ ಈಗಾಗಲೇ ಪರಿವರ್ತನೆಯಾಗಿದ್ದಾರೆ. ಬರಲಿರುವ ಕಾರ್ಪೊರೇಟ್ ಕೃಷಿಯ ದಾಳಿಗೆ ಆರಂಭದಲ್ಲಿ ಸಣ್ಣ, ಮಧ್ಯಮ ರೈತರೂ ಭೂಮಿಯನ್ನು ಕಳೆದುಕೊಂಡು ಬೀದಿಗೆ ಬೀಳುತ್ತಾರೆ. ಅಲ್ಲಿಗೆ ಭಾರತ 'ಕಾರ್ಮಿಕರಿಲ್ಲದ ಕೈಗಾರಿಕೆಗಳ, ರೈತರಿಲ್ಲದ ಕೃಷಿ'ಯ ದೇಶವಾಗುತ್ತದೆ. ಉತ್ಪಾದನಾ ಕ್ಷೇತ್ರದಿಂದ ಹೊರಬೀಳುವ ರೈತರು, ಕೃಷಿ ಕಾರ್ಮಿಕರು ಉದ್ಯೋಗ ರಹಿತ ಪ್ರಜೆಗಳಾಗುತ್ತಾರೆ. ದೇಶದ ಸುಮಾರು ಶೇ. ೮೦ರಷ್ಟು ಜನತೆಯ ಬದುಕು ಅನಿಶ್ಚಿತತೆಗೆ, ಅತಂತ್ರಕ್ಕೆ ದೂಡಲ್ಪಡುತ್ತದೆ. ಆಗ ಭುಗಿಲೇಳುವ ಆಕ್ರೋಶವನ್ನು ತಣಿಸಲು ನಮ್ಮ ಪ್ರಭುತ್ವಗಳು ವಿವಿಧ ರೀತಿಯ ಮಾಸಿಕ, ವಾರ್ಷಿಕ ಅನುದಾನ, ಪಿಂಚಣಿಗಳನ್ನು ಘೋಷಿಸುತ್ತವೆ. ಈ ಅನುದಾನಗಳು ಸಹ ದೇಶದ ಸಂಪನ್ಮೂಲಗಳನ್ನು ಲೂಟಿ ಹೊಡೆದ ಕಾರ್ಪೊರೇಟ್ ಕಂಪನಿಗಳು ನೀಡುವ ಭಿಕ್ಷೆಗಳಾಗಿರುತ್ತವೆ. ಇದು ಇಂದು ಭಾರತದ ಸಾಮಾಜಿಕ ಜೀವನ ಸ್ಥಿತ್ಯಂತರಗೊಳ್ಳುತ್ತಿರುವ ಚಿತ್ರ.

ಮೇ ದಿನಾಚರಣೆಯ ಈ ಸಂದರ್ಭದಲ್ಲಿ ದೇಶದಲ್ಲಿರುವ ಕಾರ್ಮಿಕವರ್ಗ ಕೇವಲ ಅಂದಿನ ಕಾರ್ಮಿಕರ ತ್ಯಾಗ, ಬಲಿದಾನಗಳ ಕುರಿತು ಮಾತನಾಡಿ ಮುಗಿಸದೇ, ದೇಶದ ಇಂದಿನ ಸಂದರ್ಭದಲ್ಲಿ ತಾನು ವಹಿಸಬೇಕಾದ ಪಾತ್ರದ ಕುರಿತು ಚಿಂತಿಸಬೇಕಿದೆ. ದೇಶದಲ್ಲಿ ಇಷ್ಟೆಲ್ಲ ಅವಾಂತರಗಳು ನಡೆಯುತ್ತಿರುವಾಗ ನಮ್ಮ ದೇಶದ ಕಾರ್ಮಿಕವರ್ಗ ಮೌನವಾಗಿದೆ ಎಂದೇನಲ್ಲ. ವಿವಿಧ ಕೇಂದ್ರೀಯ ಕಾರ್ಮಿಕ ಸಂಘಟನೆಗಳು ಒಟ್ಟಾಗಿ ಸೇರಿ ಕಳೆದ ಇಪ್ಪತ್ತು ವರ್ಷಗಳಲ್ಲಿ ೧೮ ಬಾರಿ ರಾಷ್ಟ್ರವ್ಯಾಪಿ ಮುಷ್ಕರಗಳನ್ನು ಮಾಡಿದ್ದಾರೆ. ಕೋಟ್ಯಂತರ ಕಾರ್ಮಿಕರು ಬೀದಿಗಿಳಿದು ಹೋರಾಡಿದ್ದಾರೆ. ಆದರೆ ದೇಶದ ಆಳುವ ವರ್ಗ ಈ ಹೋರಾಟಗಳಿಗೆ ಅಳುಕದೇ ಕಾರ್ಪೊರೇಟ್ ಕಂಪನಿಗಳ ಜೊತೆ ಕದಲದೆ ನಿಂತಿದೆ. ಇದರರ್ಥ ಕೇವಲ ಒಂದು ದಿನ, ಎರಡು ದಿನದ ಮುಷ್ಕರಗಳಿಂದ ಸರಕಾರಗಳು ಎಚ್ಚೆತ್ತುಕೊಳ್ಳುವುದಿಲ್ಲ. ಅದಕ್ಕೆ ದೇಶದ ಜನಸಂಖ್ಯೆಯಲ್ಲಿ ಬಹುಪಾಲು ಸ್ಥಾನ ಪಡೆದಿರುವ ದುಡಿವ ವರ್ಗ ರಾಜಕೀಯವಾಗಿ ಪ್ರತಿಕ್ರಿಯಿಸಬೇಕಾಗಿದೆ. ಈಗ ಕಾರ್ಮಿಕವರ್ಗ ಕೇವಲ ತನ್ನ ಬೇಡಿಕೆಗೆ ಸೀಮಿತವಾಗದೇ 'ಪ್ರಭುತ್ವವನ್ನೇ ಬದಲಾಯಿಸುವ, ಪ್ರಭುತ್ವದ ಮೇಲೆ ರಾಜಕೀಯ ನಿಯಂತ್ರಣ ಸಾಧಿಸುವ' ಕಾರ್ಯಕ್ರಮ ಹಮ್ಮಿಕೊಳ್ಳಬೇಕಿದೆ. ಕಾರ್ಪೊರೇಟ್ ಕಂಪನಿಗಳ ಕಪಿಮುಷ್ಟಿಯಿಂದ ಪ್ರಜೆಗಳ ಕೈಗೆ ಪ್ರಭುತ್ವ ದೊರೆಯಬೇಕಾದರೆ, ದೇಶದ ದುಡಿವ ವರ್ಗ, ಸಾಮಾಜಿಕ ಕ್ರಾಂತಿಯ ಇತರ ಜನವರ್ಗದೊಡನೆ ಸೇರಿ ಮುನ್ನಡೆಯಬೇಕಿದೆ. ಇದು ಇಂದಿನ ಮೇ ದಿನಾಚರಣೆಯ ಸ್ಮರಣೆಗೆ ಪ್ರಮುಖ ವಿಷಯವಾಗಬೇಕಿದೆ. ಮತ್ತೊಮ್ಮೆ ದುಡಿವವರ್ಗ ಸಾಮಾಜಿಕ ಬದಲಾವಣೆಯ ಸಾಧನವಾಗಲಿ ಎಂದು ಹಾರೈಸೋಣ.

ಸಿದ್ಧನಗೌಡ ಪಾಟೀಲ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**■ ಚಂದಾ ವಿವರಗಳು**

| | |
|---|---|
| **ಬಿಡಿ ಸಂಚಿಕೆ** | ₹ ೨೫/- |
| **ವಾರ್ಷಿಕ ಚಂದಾ** | ₹ ೩೦೦/- |
| **ಮೂರು ವರ್ಷಕ್ಕೆ** | ₹ ೬೦೦/- |

**■ ನವಕರ್ನಾಟಕ ಶಾಖೆಗಳು**

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೦೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

*(೩ನೇ ಪುಟದಿಂದ ಈ ತಿಂಗಳು)*

ಬಂದಾಗಲು ಇದೇ ಮಾತನ್ನು ಹೇಳುತ್ತಿರುತ್ತೇವೆ. ಬರಬರುತ್ತ ಕತೆ ಅನ್ನುವ ಹಾಗೆ ಆಗಿದೆ ಚುನಾವಣೆ ಪ್ರಚಾರ. ಚುನಾವಣಾ ಆಯೋಗ ನ್ಯಾಯಾಲಯದ ಮುಂದೆ ತನಗೆ ಕ್ರಮ ಕೈಗೊಳ್ಳಲು ಅಧಿಕಾರವೇ ಇಲ್ಲ ಎನ್ನುವ ವಾದ ಮಂಡಿಸಿತ್ತು. ಆದರೆ ನಂತರ ಅನಿವಾರ್ಯವಾಗಿ ಕ್ರಮ ತೆಗೆದುಕೊಂಡಿತ್ತು. ಉತ್ತರ ಪ್ರದೇಶದ ಮುಖ್ಯಮಂತ್ರಿ ಯೋಗಿ ಆದಿತ್ಯನಾಥ್, ಬಹುಜನ ಸಮಾಜವಾದಿ ಪಾರ್ಟಿಯ ನಾಯಕಿ ಮಾಯಾವತಿ, ಮೋದಿ ಸಂಪುಟದ ಸಚಿವೆ ಮೇನಕಾ ಗಾಂಧಿ, ಸಮಾಜವಾದಿ ಪಕ್ಷದ ನಾಯಕ ಅಜಿಮ್ ಖಾನ್ ಇವರುಗಳು ಎರಡು ಮೂರು ದಿನ ಚುನಾವಣಾ ಪ್ರಚಾರದಲ್ಲಿ ಭಾಷಣ ಮಾಡಕೂಡದೆಂದು ಚುನಾವಣಾ ಆಯೋಗ ತಾಕೀತು ಮಾಡಿದೆ. ಇಷ್ಟಾದರೂ ಆಯಿತಲ್ಲ ಎಂದು ಸಮಾಧಾನ.

* * *

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಜಲಿಯನ್ ವಾಲಾಬಾಗ್ ಹತ್ಯಾಕಾಂಡ ಒಂದು ಪ್ರಮುಖ ಘಟನೆ. ಅದು ಸಂಭವಿಸಿ ಒಂದು ಶತಮಾನವಾಗಿದೆ. ಅಂದು ಬ್ರಿಟಿಷರ ಗುಂಡಿಗೆ ಬಲಿಯಾದ ಹುತಾತ್ಮರಿಗೆ ಭಾರತದ ಜನತೆ ಶ್ರದ್ಧಾಂಜಲಿ ಅರ್ಪಿಸಿದ್ದಾರೆ. ಅಂದು ನಡೆದದ್ದೇನು? ಆ ದಿನ ನಿಜಕ್ಕೂ ಕರಾಳ ದಿನ. ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಭಾರತದ ಜನತೆಯ ಮೇಲೆ ನಡೆಸುತ್ತಿದ್ದ ದೌರ್ಜನ್ಯದ ಪರಮಾವಧಿ. ಪಂಜಾಬ್ ಪ್ರಾಂತದಲ್ಲಿರುವ ಜಲಿಯನ್ ವಾಲಾಬಾಗ್‌ನಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಸಭೆಯಲ್ಲಿ ಭಾಗವಹಿಸಿದ್ದ ನಿರಾಯುಧ, ಅಮಾಯಕ ಜನರ ಮೇಲೆ ಯಾವ ಮುನ್ಸೂಚನೆಯನ್ನೂ ನೀಡದೆ ಬ್ರಿಟಿಷ್ ಪೊಲೀಸ್ ಅಧಿಕಾರಿ ಗುಂಡು ಹಾರಿಸಿ ನೂರಾರು ಮಂದಿಯನ್ನು ಕೊಂದು ಹಾಕಿದ. ಆತನ ಹೆಸರು ಜನರಲ್ ಡೈಯರ್. ಹೆಂಗಸರು, ಮಕ್ಕಳು, ಮುದಿಯರನ್ನು ಲೆಕ್ಕಿಸದೆ ಅಮಾನುಷವಾಗಿ ಗುಂಡು ಹಾರಿಸಿದ. ಶಾಂತಿಯುತವಾಗಿ ಪ್ರತಿಭಟನೆ ನಡೆಸಲು ಮುಂದಾಗಿದ್ದ ಜನ ಕಂಗಾಲಾಗಿ ಓಡಿಹೋಗಲು ಸಾಧ್ಯವಾಗದ ಹಾಗೆ ದ್ವಾರದಲ್ಲಿ ಫಿರಂಗಿ ಇರಿಸಿ ದಾಳಿ ನಡೆಸಿದ. ಸ್ವಾತಂತ್ರ್ಯ ಹೋರಾಟಗಾರರನ್ನು ಬೆದರಿಸುವ ಕ್ರಮ ಇದಾಗಿತ್ತು. ಅಧಿಕಾರದಲ್ಲಿದ್ದ ಬ್ರಿಟಿಷ್ ಸರಕಾರ ಜಲಿಯನ್‌ವಾಲಾಬಾಗ್ ಹತ್ಯಾಕಾಂಡವನ್ನು ಸಮರ್ಥಿಸಿಕೊಂಡು ಜನರಲ್ ಡೈಯರ್‌ನನ್ನು ಶ್ಲಾಘಿಸಿತು. ಬ್ರಿಟಿಷ್ ಪಾರ್ಲಿಮೆಂಟ್ ಆತನನ್ನು ಕೊಂಡಾಡಿ ಗೌರವಿಸಿತು. ಈಗ ನೂರು ವರ್ಷಗಳಾದ ಮೇಲೆ ಅದೇ ಪಾರ್ಲಿಮೆಂಟ್‌ನಲ್ಲಿ ಮಾತನಾಡಿದ ಬ್ರಿಟಿಷ್ ಪ್ರಧಾನಿ ಥೆರೆಸಾ ಮೇ ಜಲಿಯನ್‌ವಾಲಾಬಾಗ್ ದುರಂತವನ್ನು ಸ್ಮರಿಸಿಕೊಂಡು ವಿಷಾದ ವ್ಯಕ್ತಗೊಳಿಸಿದ್ದಾರೆ. ಬ್ರಿಟಿಷ್ ಸರಕಾರದ ಕಾಪಟ್ಯವನ್ನು ಅದು ಎತ್ತಿ ತೋರಿಸುತ್ತದೆ. ಬ್ರಿಟಿಷ್ ಪ್ರಧಾನಿ ಸಜ್ಜನಿಕೆಯಿಂದ ಭಾರತದ ಜನರ ಕ್ಷಮೆ ಕೋರಬೇಕಾಗಿತ್ತು.

* * *

ಕರ್ನಾಟಕದಲ್ಲಿ ಮೊದಲ ಹಂತದ ಚುನಾವಣೆ ಮುಗಿದಿದೆ. ಇರುವ ೨೮ ಪಾರ್ಲಿಮೆಂಟ್ ಸ್ಥಾನಗಳಿಗೂ ಭಾಜಪ ಮತ್ತು ಮೈತ್ರಿ ಸರಕಾರದ ಪಾಲುದಾರರ ಮಧ್ಯೆ ತೀವ್ರ ಪೈಪೋಟಿ ಇದೆ. ೧೪ ಸ್ಥಾನಗಳಿಗೆ ನಡೆದಿರುವ ಚುನಾವಣೆಗಳಲ್ಲಿ ಹೆಚ್ಚು ಕಡಿಮೆ ಎಲ್ಲ ಪ್ರತಿಷ್ಠಿತ ಕಣಗಳೆ. ಎರಡೂ ಕಡೆಯ ಘಟಾನುಘಟಿಗಳು ಸ್ಪರ್ಧೆಯಲ್ಲಿದ್ದಾರೆ. ಪೈಪೋಟಿಯಲ್ಲಿ ಜನ ಯಾರಿಗೆ ಮತ ನೀಡಿ ಜಯಮಾಲೆ ಹಾಕುತ್ತಾರೋ ಇನ್ನೂ ಒಂದು ತಿಂಗಳು ಕಾಯಬೇಕು. ದೇವೇಗೌಡರು, ಮೊಮ್ಮಕ್ಕಳು ಎಲ್ಲಾ ಸ್ಪರ್ಧೆಯಲ್ಲಿದ್ದಾರೆ. ಯಾವಾಗಿನಂತೆ ಈ ಸಲವೂ ಬೆಂಗಳೂರು ಮಟ್ಟಿಗೆ ಮತದಾನದ ಪ್ರಮಾಣ ಶೇ. ೫೦ರಷ್ಟು ಮೀರಿಲ್ಲ. ಉಳಿದ ಕಡೆಗಳಲ್ಲಿ ಮತದಾನ ಸರಾಸರಿ ಶೇ. ೭೦ಕ್ಕೂ ಹೆಚ್ಚಾಗಿದೆ. ಪಕ್ಷಗಳ ಪ್ರಣಾಳಿಕೆಯನ್ನು ಕೇಳುವವರೇ ಇಲ್ಲ. ಮೋದಿ, ಅಮಿತ್ ಷಾ, ರಾಜೀವ್ ಗಾಂಧಿ ಎಲ್ಲ ಪ್ರಚಾರ ಮಾಡಿ ಹೋಗಿದ್ದಾರೆ. ಸಮಾವೇಶಗಳನ್ನು ನಡೆಸಿದ್ದಾರೆ. ಮಂಡ್ಯ, ಮೈಸೂರು, ಬೆಂಗಳೂರು ಉತ್ತರ, ದಕ್ಷಿಣ, ತುಮಕೂರು, ಹಾಸನ ಇವೆಲ್ಲ ಎರಡೂ ಕಡೆಯವರಿಗೆ ಪ್ರತಿಷ್ಠೆಯ ಕಣ. ಹಾಗೆ ನೋಡಿದರೆ ಎಲ್ಲ ಸ್ಥಾನಗಳೂ ಸ್ಪರ್ಧಾತ್ಮಕವಾಗಿವೆ ಎಂದೇ ಹೇಳಬೇಕು. ಮಂಡ್ಯದಲ್ಲಿ ಕಾಂಗ್ರೆಸ್ ಟಿಕೇಟ್ ವಂಚಿತೆ ಸುಮಲತಾ ಮತ್ತು ಕುಮಾರಸ್ವಾಮಿ ಪುತ್ರ ನಿಖಿಲ್ ಕುಮಾರಸ್ವಾಮಿ ಮಧ್ಯೆ ಯಾರು ಜಯ ಸಾಧಿಸುತ್ತಾರೆ ನೋಡಬೇಕು. ತುಮಕೂರಿನಲ್ಲಿ ದೇವೇಗೌಡರಿಗೂ ಕಷ್ಟವೇ. ಬೆಂಗಳೂರು ನಾಲ್ಕು ಕ್ಷೇತ್ರಗಳನ್ನು ಹೊಂದಿರುವ ಜಿಲ್ಲೆ. ಭಾಜಪ ಯಾವತ್ತೂ ಇಲ್ಲಿ ಮೇಲುಗೈ ಹೊಂದಿದೆ. ಈ ಬಾರಿ ಏನಾಗುವುದೋ ನೋಡಬೇಕು. ಪೈಪೋಟಿಯಲ್ಲಿರುವ ಪಕ್ಷಗಳ ನೀತಿಗಿಂತ ಜಾತಿ ಲೆಕ್ಕಾಚಾರವೇ ಜಾಸ್ತಿ. ಲಂಗುಲಗಾಮಿಲ್ಲದೆ ನಾಲಿಗೆ ಹರಿಬಿಟ್ಟಿರುವುದು ಈ ಸಲ ಚುನಾವಣಾ ಪ್ರಚಾರದ ವೈಶಿಷ್ಟ್ಯ. ಪ್ರತಿ ಸಲ ಚುನಾವಣೆ ನಡೆದಾಗ ಇದು ನಡೆದದ್ದೇ. ಆದರೆ ದಿನೇದಿನೇ ಪ್ರಚಾರದ ಮಟ್ಟ ಇಳಿಯುತ್ತಿರುವುದು ಆತಂಕಕಾರಿ. ಪ್ರಜಾಪ್ರಭುತ್ವಕ್ಕೆ ಆಪತ್ತು. ಪ್ರಮುಖ ರಾಜಕೀಯ ಪಕ್ಷಗಳೇ ಜಾತಿವಾರು ವಿಂಗಡಣೆಯಲ್ಲಿ ತೊಡಗಿಕೊಂಡಿರುವಾಗ ಪರಿಣಾಮ ಏನಾಗುತ್ತದೆ ಎನ್ನುವುದಕ್ಕೆ ಸಾಕ್ಷಿಯಾಗುತ್ತದೆ ಈ ಸಲದ ಚುನಾವಣೆಗಳು. ಚುನಾವಣಾಧಿಕಾರಿಗಳು ಮಾಧ್ಯಮಗಳ ಮೂಲಕ ಏನೇ ಪ್ರಚಾರ ನಡೆಸಿದರೂ ಮತದಾನದ ಶೇಕಡಾವಾರು ಪ್ರಮಾಣ ಹೆಚ್ಚಿಲ್ಲ.

ಈ ಸಲದ ಪಾರ್ಲಿಮೆಂಟ್ ಚುನಾವಣೆಗಳು ಇಡೀ ಜಗತ್ತಿನ ಗಮನ ಸೆಳೆದಿವೆ. ಮೋದಿ ಮತ್ತೆ ಅಧಿಕಾರಕ್ಕೆ ಬರುತ್ತಾರೋ ಇಲ್ಲವೋ ಅದು ಬೇರೆಯೇ ವಿಚಾರ. ಮೇ ೨೩ ಫಲಿತಾಂಶ ಹೊರಬೀಳುವವರೆಗೆ ಹೇಳುವಂತಿಲ್ಲ. ಕಾಂಗ್ರೆಸ್ ಎಂದಿನಂತೆ ಬಹುತೇಕ ಒಂಟಿಯಾಗಿಯೇ ಇದ್ದು ಕೆಲವೆಡೆ ಮಾತ್ರ ಹೊಂದಾಣಿಕೆಯಾಗಿದೆ. ಉಳಿದಂತೆ ಪ್ರಾದೇಶಿಕ ಪಕ್ಷಗಳದ್ದೇ ಅವಾಂತರ. ಮಹಾಘಟ್ ಬಂಧನ್ ಎಲ್ಲ ಮುರಿದು ಬಿದ್ದಿದೆ. ಹಾಗೆಂದ ಮಾತ್ರಕ್ಕೆ ಭಾಜಪಗೆ ಸುಲಭದ ಜಯ ಎಂದೇನಲ್ಲ. ೨೦೧೪ರಲ್ಲಿ ಬಂದಷ್ಟು ಸ್ಥಾನಗಳು ಖಂಡಿತ ದೊರಕದು. ಸಮೀಕ್ಷೆಗಳ ಪ್ರಕಾರ ಯಾವ ಪಕ್ಷಕ್ಕೂ ಬಹುಮತ ದೊರೆಯುವುದಿಲ್ಲ. ಬಹು ದೊಡ್ಡ ಪಕ್ಷವಾಗಿ ಹೊಮ್ಮುವ ಪಕ್ಷ ಸರಕಾರ ಸ್ಥಾಪನೆಗೆ ಮುಂದಾದೀತು. ಅದು ರಾಷ್ಟ್ರಪತಿಯವರ ಮರ್ಜಿಗೆ ಬಿಟ್ಟದ್ದು. ಭಾಜಪದ ಕೃಪೆಯಿಂದ ರಾಷ್ಟ್ರಪತಿ ಸ್ಥಾನದಲ್ಲಿರುವವರೆಗೆ ಭಾಜಪಗೆ ಭಯವಿಲ್ಲ. ಚುನಾವಣೆಗಳ ನಂತರದ ಹೊಂದಾಣಿಕೆಗಳಿಗೆ ಏನಾದೀತು? ಕಾದು ನೋಡೋಣ.

* * *

ಎಲ್ಲದಕ್ಕೂ ಹಿಂದಿ ಹೆಸರಿಟ್ಟು ಅಧ್ವಾನ ಮಾಡುವ ಕೇಂದ್ರ ಸರ್ಕಾರವು ದೂರವಾಣಿ ಸಂಪರ್ಕ ಇಲಾಖೆಯನ್ನು ಅರಬ್ಬೀ ಸಮುದ್ರಕ್ಕೆಸೆದು ಅದರ ಅಪಾರ ಆಸ್ತಿಯನ್ನು ಖಾಸಗಿ ತಿಮಿಂಗಿಲಗಳಿಗೆ ಒಪ್ಪಿಸುವ ನಿಕೃಷ್ಟ ಕೆಲಸದಲ್ಲಿ ನಿರತವಾಗಿದೆ. ಸಂಸ್ಥೆಯು ಖಾಸಗಿ ಕಂಪನಿಗಳ ಜೊತೆ ಸ್ಪರ್ಧಿಸಲು ಸಾಧ್ಯವಾಗದಂತೆ ಮಾಡಲು ಕೇಂದ್ರವು ಅದರ ಕಾರ್ಯ ವಿಸ್ತರಣೆಗೆ ಅವಕಾಶ ನೀಡಲಿಲ್ಲ ಮತ್ತು ಸರ್ಕಾರಿ ವಲಯವನ್ನು ಬೆಂಕಿಗೊಡ್ಡಿತು. ಬಿಎಸ್‌ಎನ್‌ಎಲ್‌ನ ನೌಕರರು ತಮ್ಮ ಸಾರ್ವಜನಿಕ ವಲಯದ ಕಂಪನಿಯನ್ನು ಉಳಿಸಿಕೊಳ್ಳಲು ಏನು ಕ್ರಮ ತೆಗೆದುಕೊಂಡರೋ ತಿಳಿಯದು, ಆದರೆ ಈಚೆಗೆ ೫೦,೦೦೦ಕ್ಕೂ ಹೆಚ್ಚು ಮಂದಿ ನೌಕರರನ್ನು ಸೇವೆಯಿಂದ ತೆಗೆಯುವುದಾಗಿ ಸರ್ಕಾರವು ಹೇಳಿದಾಗ ಪ್ರತಿಭಟನೆ ನಡೆಸಿದರು. ತಮಗೆ ಸೇವಾ ವಿಸ್ತರಣೆಗೆ ಅವಕಾಶ ನೀಡದಿದ್ದಾಗ ಅವರು ಪ್ರತಿಭಟಿಸಿ ಪರವಾನಗಿ ಪಡೆಯಬೇಕಿತ್ತೆಂದು ಒಂದು ಅಭಿಪ್ರಾಯವಿದೆ. ಇಲಾಖೆಯ ನೌಕರರಿಗೆ ವೇತನ ಕೊಡಲು ಹಣವಿಲ್ಲವೆಂದು ಹೇಳಿ ಸರ್ಕಾರವು ಫೆಬ್ರವರಿ ತಿಂಗಳ ಸಂಬಳವನ್ನು ಎರಡು ವಾರ ತಡವಾಗಿ ನೀಡಿತು. ಸಾರ್ವಜನಿಕರಿಗೆ ಸರ್ಕಾರ ಹೇಳಬಯಸಿದ್ದು, ಇದು ತನ್ನ ಕಾಲ ಮೇಲೆ ನಿಲ್ಲುತ್ತಿಲ್ಲ; ಆದ್ದರಿಂದ ಖಾಸಗಿ ಲೂಟಿಕೋರರಿಗೆ ಇದನ್ನು ಹಸ್ತಾಂತರಿಸಲಿದ್ದೇವೆ, ಎಂದು. ಈ ಇಲಾಖೆಯ ಆಸ್ತಿಯ ಒಟ್ಟು ಮೊತ್ತವನ್ನು ಲೆಕ್ಕ ಹಾಕಲು ಸಾಧ್ಯವಾಗದಷ್ಟು ವಿಪುಲ ಆಸ್ತಿ ಇಲ್ಲಿದೆ; ಅದನ್ನು ಬೇಕಾಬಿಟ್ಟಿ ಖಾಸಗಿಯವರಿಗೆ ಹಂಚುವ ದರಿದ್ರ ಯೋಜನೆ ಕೇಂದ್ರ ಸರ್ಕಾರದ್ದು. ನರೇಂದ್ರ ಮೋದಿಯವರ ಪಕ್ಷ ಚುನಾವಣೆಯಲ್ಲಿ ಗೆದ್ದರೆ ಹತ್ತಾರು ಲಕ್ಷ ಕೋಟಿಗಳ ಮೌಲ್ಯದ ಆಸ್ತಿ ಕಡಲೆಪುರಿ ಬೆಲೆಗೆ ಖಾಸಗಿಯವರಿಗೆ ಹಸ್ತಾಂತರಿಸಲಾಗುವುದು ಬಹುಮಟ್ಟಿಗೆ ಖಚಿತವಾಗಿದೆ. ಖಾಸಗಿವಲಯವು ಲಾಭದಾಯಕವಾಗಿ ಮತ್ತು ಹೆಚ್ಚು ಮುತುವರ್ಜಿಯಿಂದ ನಡೆಸಲಾಗುತ್ತದೆಂಬ ಐತಿಹ್ಯವನ್ನು ಜನರಿಗೆ ಹೇಳುವುದು ಒಂದು ಕಡೆ, ಖಾಸಗಿಯವರು ಬ್ಯಾಂಕ್ ಸಾಲಗಳನ್ನು ಹಿಂದಿರುಗಿಸದೆ ಬ್ಯಾಂಕುಗಳು ದಿವಾಳಿಯಾಗುವುದು ಇನ್ನೊಂದು ಕಡೆ. ತೆರಿಗೆಗಳನ್ನು ಪಾವತಿಸದ ಖಾಸಗಿ ಕಂಪನಿಗಳು ನಮ್ಮ ದೇಶದಲ್ಲಿ ಸಾವಿರಾರು ಇವೆ. ಆದರೂ ಅವುಗಳ ಕಾರ್ಯಕ್ಷಮತೆಯನ್ನು ಹೊಗಳುವುದೇನೂ ಕಡಿಮೆಯಾಗಿಲ್ಲ. ದೂರವಾಣಿ ಸಂಪರ್ಕ ಇಲಾಖೆ, ಅದರ ಕಾರ್ಯಕ್ಷೇತ್ರ, ಅದರ ಆಸ್ತಿ, ಎಲ್ಲವನ್ನೂ

ಉಳಿಸಿ, ಬೆಳೆಸಲು ನೌಕರರು ಮತ್ತು ಜನತೆ ಸರ್ಕಾರವನ್ನು ಒತ್ತಾಯಿಸಬೇಕು ಮತ್ತು ಹೋರಾಟಕ್ಕಿಳಿದು ದೇಶದ ಸಂಪತ್ತನ್ನು ರಕ್ಷಿಸಬೇಕು. ವೋಡಫೋನ್‌ನಂತಹ ಕಂಪನಿಯು ಪರವಾನಗಿ ಇಲ್ಲದೆ ತನ್ನ ಕ್ಷೇತ್ರವನ್ನು ಹಿಗ್ಗಿಸಿಕೊಂಡಿದೆಯೆಂಬ ಆಪಾದನೆ ಇದೆ. ಆ ಕಂಪನಿಯು ತೆರಿಗೆ ಪಾವತಿಸಿಲ್ಲವೆಂಬ ಆಪಾದನೆ ಇದೆ. ಇನ್ನು ಅಂಬಾನಿಯ ಜೀಯೋಗೆ ಕೇಂದ್ರ ಸರ್ಕಾರದ ಸಂಪೂರ್ಣ ಬೆಂಬಲವಿರುವುದು ಜಗಜ್ಜಾಹೀರಾಗಿದೆ. ಇಂಥವೆಲ್ಲಾ ಒಟ್ಟಾಗಿ ಕೇಂದ್ರ ಸರ್ಕಾರವನ್ನು ತಮ್ಮ ಹಿಡಿತಕ್ಕೆ ತಂದುಕೊಂಡಿವೆ. ಅದಕ್ಕೆ ಕೇಂದ್ರ ಸಚಿವರನೇಕರ ಬೆಂಬಲವಿದೆ. ದೇಶದ ಬೆಳವಣಿಗೆ ಎಂದರೆ ದೇಶದ ಸಂಪತ್ತನ್ನು ಖಾಸಗಿಯವರು ಲೂಟಿ ಮಾಡುವುದು ಎಂಬಂತಾಗಿದೆ. ದೂರವಾಣಿ ಇಲಾಖೆಯ ನೌಕರರು ಮತ್ತು ಸಾರ್ವಜನಿಕರು ಎಚ್ಚೆತ್ತು ದೇಶದ ಜನತೆಯ ಸಂಪತ್ತನ್ನು ರಕ್ಷಿಸಲು ಒಂದಾಗುವುದು ತುರ್ತಿನ ಕೆಲಸ.

✶ ✶ ✶

ಈ ತಿಂಗಳ ಒಂದು ಖಂಡನೀಯ ಬೆಳವಣಿಗೆ ಯೆಂದರೆ ಕೇಂದ್ರ ಸಚಿವಾಲಯಗಳಲ್ಲಿ ಜಂಟಿ ಕಾರ್ಯದರ್ಶಿ ಹುದ್ದೆಗೆ ಹೊರಗಿನ ಅಭ್ಯರ್ಥಿಗಳನ್ನು ನೇರವಾಗಿ ಆಯ್ಕೆ ಮಾಡಿಕೊಂಡು ಅವರಿಗೆ ಜವಾಬ್ದಾರಿ ಕೊಟ್ಟಿರುವುದು. ನಮ್ಮ ಐ.ಎ.ಎಸ್. ಅಧಿಕಾರಿಗಳು ಮತ್ತು ಅವರ ವೃಂದ ಈ ಬಗ್ಗೆ ಬಾಯಿ ಬಿಟ್ಟಿಲ್ಲ. ತಾವು ಸರ್ವಜ್ಞರು, ಎಲ್ಲ ಖಾತೆ ಗಳಲ್ಲೂ ನಿಷ್ಣಾತರು ಎಂದು ಹೇಳಿ ಕೊಳ್ಳುವ ಐ.ಎ.ಎಸ್. ವಲಯ ಬಾಯಿ ಬಿಟ್ಟಿಲ್ಲದಿರುವುದರ ಹುನ್ನಾರವೇನೋ ತಿಳಿಯದು. ನೇರವಾಗಿ ಸ್ವರ್ಗದಿಂದ ಧರೆಗಿಳಿದು ಜಂಟಿ ಕಾರ್ಯದರ್ಶಿಗಳಾಗಿ ಆರಂಭದಲ್ಲೇ ಉನ್ನತ ಹುದ್ದೆ ಪಡೆದಿರು ವವರು ಖಾಸಗಿವಲಯದ ಪ್ರತಿನಿಧಿ ಗಳಂತಿರುತ್ತಾರೆ, ಸರ್ಕಾರದ ಸರ್ವಸ್ವ ವನ್ನೂ ಖಾಸಗಿಗೆ ಒತ್ತೆಯಿಡಲು ಸಿದ್ಧರಿರುತ್ತಾರೆ, ಎಂಬ ಆಕ್ಷೇಪವೊಂದಿದೆ. ಕೇಂದ್ರ ಸರ್ಕಾರದ ಜಂಟಿ ಕಾರ್ಯದರ್ಶಿಗಳು ಈ ನೂತನ ಮಾದರಿಯ ನೇಮಕಾತಿಯನ್ನು ಖಂಡಿಸಿಲ್ಲದಿರುವುದು ಅವರ ಬೆನ್ನುಹುರಿ ಸವೆದಿದೆಯೆಂಬ ಕಾರಣಕ್ಕೆ. ಸರ್ಕಾರದ ಖಾಸಗೀಕರಣಕ್ಕೆ ಈಗಿನ ನೇಮಕಾತಿಯು ಹೊಸ ತಿರುವೊಂದನ್ನು ನೀಡಿದೆ. ನಮ್ಮ ಐ.ಎ.ಎಸ್. ಅಧಿಕಾರಿಗಳ ಸಂಘ ಬಾಯಿಮುಚ್ಚಿಕೊಂಡಿರುವುದರ ಮರ್ಮ ಅರ್ಥವಾಗುತ್ತಿಲ್ಲ. ಆದರೆ ಇದೆಷ್ಟು ಹೊಲಸು ಪ್ರಕ್ರಿಯೆಯೆಂಬುದು ಮುಂದಿನ ದಿನಗಳಲ್ಲಿ ಗೋಚರವಾಗಲಿದೆ.

✶ ✶ ✶

ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸೇವೆಯಿಂದ ನಿವೃತ್ತರಾದವರು ಬಹುಮಂದಿ ಇತ್ತೀಚೆಗೆ ರಾಜಕೀಯ ಧುರೀಣರಾಗಿ ಹೊಳೆಯಲು ಹಾದಿ ಹುಡುಕಿಕೊಳ್ಳುತ್ತಿದ್ದಾರೆ. ನಮ್ಮ ರಾಜ್ಯದ ನಿವೃತ್ತ ಮುಖ್ಯ ಕಾರ್ಯದರ್ಶಿ ಶ್ರೀಮತಿ ರತ್ನಪ್ರಭಾ ಲೋಕಸಭಾ ಚುನಾವಣೆಗೆ ಅಭ್ಯರ್ಥಿಯಾಗಿದ್ದಾರೆ. ಸೇವಾ ಅವಧಿಯಲ್ಲಿ ಯಾವ ಪಕ್ಷದ ಪರವಾಗಿ ಅವರು ಕೆಲಸ ನಿರ್ವಹಿಸಿದರೆಂದು ಅವರ ಇಂದಿನ ಹೆಜ್ಜೆಗಳು ಸೂಚಿಸುತ್ತವೆ. ಭಾರತೀಯ ಸೇನಾ ಪಡೆಗಳ ನಿವೃತ್ತ ಅಧಿಕಾರಿಗಳನೇಕರು ಇದೇ ಪದ್ಧತಿಗೆ ಮಾದರಿಗಳಾಗಿಬಿಟ್ಟಿದ್ದಾರೆ. ಸರ್ಕಾರದ ಕೆಲಸ ಏಕೆ ಜನಪರವಾಗಿಲ್ಲವೆಂಬುದಕ್ಕೆ ಇದೊಂದು ಪುರಾವೆಯಾಗಿದೆ. ಸೇವಾ ನಿಯಮಗಳ ಪ್ರಕಾರ ಹಿರಿಯ ಸರ್ಕಾರಿ ಅಧಿಕಾರಿಗಳು ರಾಜಕೀಯ ದೃಷ್ಟಿಗೆ ಬದ್ಧರಾಗಿ ಕೆಲಸ ಮಾಡಬಾರದೆಂದಿದೆ. ಆದರೆ ನಮ್ಮ ಇಂದಿನ ಚುನಾವಣಾ ಕಣ ನೋಡಿದರೆ ಮಾಜಿ ಅಧಿಕಾರಿಗಳ ಒಂದು ದೊಡ್ಡ ದಂಡೇ ಇದೆ. ಇಂಥವರು ಪ್ರಜಾಪೀಡಕರಾಗಿರದೆ ಕೆಲಸ ಮಾಡಿದ್ದರೇ ಎಂಬ ಸಂಶಯ ಬರುತ್ತಿದೆ. ಸರ್ಕಾರದಲ್ಲಿ ಖಾಸಗಿ ವಲಯದ ಪ್ರತಿನಿಧಿಗಳಾಗಿ, ಕೆಲವು ರಾಜಕೀಯ ಧೋರಣೆಗಳ ವಕ್ತಾರರಾಗಿ ಇವರು ಎಷ್ಟೆಲ್ಲಾ ಯೋಜನೆಗಳನ್ನು ಹಾಳುಗೆಡವಿ ಜನಪರ ನೀತಿಗಳನ್ನು ಮಣ್ಣುಪಾಲಾಗಿಸಿರಬಹುದು ಎಂಬುದನ್ನು ಊಹಿಸುವುದೇ ಭಯಾನಕವಾಗಿದೆ. ನಮ್ಮ ಮುಂದಿನ ಹಾದಿ ಇನ್ನೂ ಕಠಿಣ, ಏಕೆಂದರೆ ಈ ಅಧಿಕಾರಿಗಳು ಜನಪರ ಯೋಜನೆಗಳ ಮಾರಕರಾಗಿ ಪರಿವರ್ತನೆ ಹೊಂದಿದ್ದಾರೇನೋ ಎಂಬ ಗುಮಾನಿ ಇದೆ.

✶ ✶ ✶

ಹಿಂದೆ ಭಾರತೀಯ ಜನತಾ ಪಕ್ಷದ ಪ್ರಭಾವಿ ನಾಯಕರಾಗಿದ್ದ ಪ್ರಮೋದ್ ಮಹಾಜನ್‌ರ ಗರಡಿಯಲ್ಲಿ ತಯಾರಾದ ಧೀಮಂತ ನಾಯಕಿ ಶ್ರೀಮತಿ ಸ್ಮೃತಿ ಇರಾನಿ. ಆಕೆ ಶ್ರೀ ಗೋಪಿನಾಥ ಮುಂಡೆಯವರ ನಾಯಕತ್ವದಲ್ಲಿಯೂ ತರಬೇತಿ ಪಡೆದವರೆಂದು ಹೇಳುತ್ತಾರೆ. ಅವರ ಮಾತಿನ ಓಘ ಬಿಟ್ಟರೆ ಅವರಿಗೆ ಬೇರಿನ್ನಾವ ಸಾಮರ್ಥ್ಯವಿದೆಯೋ ತಿಳಿಯದು. ಯೇಲ್ ವಿಶ್ವವಿದ್ಯಾನಿಲಯವು ಅವರಿಗೆ 'ನಾಯಕತ್ವ ಧೀಮಂತೆ' ಎಂಬ ಅರ್ಹತಾ ಪತ್ರ ಕೊಟ್ಟಿದೆಯಂತೆ. ಅದೇ ಅವರಿಗೆ ವಿಶ್ವವಿದ್ಯಾನಿಲಯ ನೀಡಿರುವ ಶೈಕ್ಷಣಿಕ ಅರ್ಹತಾ ಪತ್ರವೆಂಬ ಮೋಹಕ್ಕೆ ಆಕೆ ಸಿಲುಕಿದ್ದಾರೆ. ಎಲ್ಲರೂ ಪಿ.ಯು. ಪಾಸ್ ಮಾಡಿ ಡಿಗ್ರಿ ತರಗತಿಗೆ ಹೋಗುತ್ತಾರೆ; ಆದರೆ ಈಕೆ ಡಿಗ್ರಿ ಪಡೆದ ಐದು ವರ್ಷಗಳ ನಂತರ ಪಿ.ಯು.ಗೆ ದಾಖಲಾಗಿದ್ದಾರೆ. ಕಳೆದ ಚುನಾವಣೆಯ ಸಂದರ್ಭದಲ್ಲಿ ತಾವು ಬಿ.ಕಾಂ. ಪದವೀಧರೆಯೆಂದು ಸಮರ್ಥಿಸಿಕೊಂಡಿದ್ದ ಸ್ಮೃತಿ ಭಾಭಿ ಈ ವರ್ಷದ ಚುನಾವಣೆಯಲ್ಲಿ ೧೨ನೆಯ ಇಯತ್ತೆ ಮುಗಿಸಿರು ವುದಾಗಿ ಹೇಳಿಕೊಂಡಿದ್ದಾರೆ. ಎಲ್ಲರೂ ಮುಂದಕ್ಕೆ ಪಾಸಾದರೆ ಈಕೆ ಹಿಂದಕ್ಕೆ ಪಾಸಾಗುವ ಪ್ರವೀಣೆ ಆಗಿಬಿಟ್ಟಿದ್ದಾರೆ. ಭಾಜಪ ಸರ್ಕಾರದಲ್ಲಿ ಸಾಮಾನ್ಯ ಸಚಿವರಿಗೇನೂ ಕೆಲಸವಿಲ್ಲವೆಂಬ ಪ್ರತೀತಿ ಇದೆಯೆಂದು ಹೇಳುತ್ತಾರೆ. ಈಕೆ ಅದನ್ನು ಬಹುವಾಗಿ ಸಮರ್ಥಿಸಿರುವ ಸಚಿವೆ. ಈಗ ಲೋಕಸಭೆಗೆ ಚುನಾಯಿತರಾಗಲು ಅಭ್ಯರ್ಥಿ. ಅವರು ಮತ್ತು ಅವರ ಪಕ್ಷ ಗೆದ್ದರೆ ಈಕೆ ಸಚಿವೆ; ಇಲ್ಲದಿದ್ದರೆ ಶ್ರೀ ಶ್ರೀ ರವಿಶಂಕರನೆಂಬ ಮಹಾನ್ ಸಾಧು ಪುರುಷನಿಗೆ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುವ ಸೌಭಾಗ್ಯ ಇವರದಾಗುತ್ತದೆ. ದೇಶಕ್ಕೆ ಒಳಿತನ್ನೇ ಬಯಸೋಣ..



## ಲೆನಿನ್ ೧೫೦ರ ನೆನಪು



**ಧ**ಮನಿಯಲಿ ಬಿಸಿನೆತ್ತರುಕ್ಕದೆ ನೆನೆಯಲಾರೆ
ನಿನ್ನಂ, ಲೆನಿನ್ ! ನಿನ್ನ ಹೆಸರದು ಸಿಡಿಲ್ ಸದ್ದು
ದೊರೆಗಿವಿಗೆ; ನಿನ್ನ ಸಮತಾಬೋಧೆ ಸಿಡಿಮದ್ದು
ನರನ ಸಂಗ್ರಹ ಬುದ್ಧಿ ಸ್ವಾರ್ಥತೆಯನುರಿದೋರೆ
ದಹಿಸಿ, ನಿಃಸ್ವಾರ್ಥತೆಯ ಬೆಂಕಿಯಿಂ ಹೃತ್ಕುಂಡ
ಸರ್ವದಾ ಪ್ರಜ್ವಲಿಸುವಂತೆಸಗೆ. ಜಮದಗ್ನಿ
ಸುತನಂತೆ ನೀನು ಪಾರ್ಥಿವ ಕುಲಕೆ ಬಡವಾಗ್ನಿ !
ದುಡಿವ ದೀನರ ದೈವವನ್ಯರ್ಗೆ ಯಮದಂಡ !
ಗೆಯ್ಯುವರ್ಗೇನಿಲ್ಲ, ಕುಳಿತುಂಬರಿಗೆ ಬೆಲ್ಲ ;
ಮುಳ್ಳುನೋವಾಳಂಗೆ, ಕಂಪು ಹೂವೊಡೆಯಂಗೆ;
ಗೋವಳಗೆ, ಸೊಂಪಿವಗೆ. ಈ ತರತಮವನೆಲ್ಲ
ಮುರಿಯೆ ಬಹನಲ್ಲಲ್ಲಿ ಕಲ್ಕಿ. ರಕ್ತದ ಗಂಗೆ
ಸಿರಿ ನಾಳದಿಂ ಮರಳ ಬಡತನದೊಣಗು ಮೈಗೆ
ಹರಿದಕ್ಕೆ ದೊರೆಗಳಸಿ ಕೂಲಿರೈತರ ಕೈಗೆ

– ಕುವೆಂಪು




**ಯೋಜನೆಗಳ ಯಶಸ್ಸಿಗೆ ಬದ್ಧತೆ ಮುಖ್ಯ...**

✉ ಏಪ್ರಿಲ್ ೨೦೧೮ರ ಹೊಸತು ಸಂಚಿಕೆಯ ಶ್ರೀ. ಕಾಂಬಳೆಯವರ ಲೇಖನ ಒಂದು ರೀತಿಯಲ್ಲಿ ಇಂದಿನ ರಾಜಕಾರಣಕ್ಕೆ, ಅಭಿವೃದ್ಧಿಯ ಹೆಸರಿನಲ್ಲಿ ತಾಂಡವವಾಡುತ್ತಿರುವ ಭ್ರಷ್ಟಾಚಾರದ ಬಗ್ಗೆ ಪರೋಕ್ಷ ಮಾತ್ರವಲ್ಲ 'ಉತ್ತಮ' ವಿಶ್ಲೇಷಣೆ ಎಂದೇ ಪರಿಗಣಿಸಬಹುದು. ಕಾಂಬಳೆಯವರ ವಿವರಣೆಗೆ ಮೆಚ್ಚುಗೆ ವ್ಯಕ್ತಪಡಿಸುವುದು ಆದ್ಯ ಕರ್ತವ್ಯವಾದರೂ ಸಹ ವಸ್ತುಸ್ಥಿತಿಯ ಬಗ್ಗೆ ನೀಡಲೇಬೇಕಾದ ಟೀಕೆ-ಟಿಪ್ಪಣಿಗಳು ಓದುಗರ ಜವಾಬ್ದಾರಿ ಎಂಬ ಹಿನ್ನೆಲೆಯಲ್ಲಿ ಈ ವಾದವನ್ನು ಮಂಡಿಸುವುದು ಅನಿವಾರ್ಯವಾಗಿದೆ.

ಬಾಬಾಸಾಹೇಬ್ ಅಂಬೇಡ್ಕರ್ ಅವರು ಕಾಲವಾಗಿ ಸುಮಾರು ಆರು ದಶಕಗಳು ಮೀರಿದ್ದು ಅವರ ಚಿಂತನೆಗಳು ಇಂದಿಗೂ ಪ್ರಸ್ತುತವಾದರೂ ಸಹ ಆ ಮಹಾನ್ ಚಿಂತಕನ ಉದ್ದೇಶಗಳನ್ನು ಸಮಯ ಸಾಧನೆಗಾಗಿ ಬಳಸುತ್ತಿರುವುದು ವಿಷಾದನೀಯವೇ ಸರಿ. ಯೋಜನಾ ನಿರಾಶ್ರಿತರ ಪುನರ್ವಸತಿಯ ಬಗ್ಗೆ ಅವಲೋಕಿಸಿದರೆ ಸಾಧಿಸಿರುವುದು ಅಲ್ಪ. ಇತ್ತೀಚಿಗಿನ ಘಟನೆಯನ್ನು ಅವಲೋಕಿಸಿದರೆ ಎತ್ತಿನಹೊಳೆ ಯೋಜನೆಗೆ ಭೂಮಿ ನೀಡಿದ ವ್ಯವಸಾಯಗಾರರಿಗೆ "ಸಮಯೋಚಿತ"ವಾಗಿ ದಕ್ಕದ ಆರ್ಥಿಕ ಪರಿಹಾರ; ಈ ಸಂದರ್ಭದಲ್ಲಿ ಮಹಾರಾಷ್ಟ್ರದ ಕೋಯ್ನಾ ಯೋಜನೆಯಲ್ಲಿ ಭೂಮಿ ಕಳೆದುಕೊಂಡವರ ಪಾಡಿನ ಉದಾಹರಣೆ ಪೂರಕವಾಗುತ್ತೆ. ಈ ದುರ್ಗತಿಗೆ ಮೂಲ ಕಾರಣ ಪ್ರಜಾಪ್ರಭುತ್ವದ ಹೆಸರಿನಲ್ಲಿ ಚುನಾವಣಾ ಸಮಯದ ಅವಕಾಶವಾದಿ ರಾಜಕೀಯ ಎಂದರೆ ತಪ್ಪಾಗದು.

ಇನ್ನು ಕೃಷಿ ವಲಯದ ಬಗ್ಗೆ ಗಮನಿಸಿದರೆ ಆರು ದಶಕಗಳ ಹಿಂದಿನ ಪರಿಸ್ಥಿತಿಗೂ ಇಂದಿನ ಆಧುನಿಕ ಸಮಾಜದ ವಾತಾವರಣಕ್ಕೂ ಕಾಣಬಹುದಾದ ಸಹಜ ಅಂತರ ಊಹೆಗೂ ಮೀರಿದ್ದು. ಲಾಭದಾಯಕವಲ್ಲ ಎಂದೇ ಪರಿಗಣಿಸಲಾಗಿರುವ ರೈತಾಪಿ ವರ್ಗದ ಜೀವನ ಶೈಲಿಯಲ್ಲಿಯೂ ಸಹ ಗಮನಾರ್ಹವಾದ ಬದಲಾವಣೆಗಳಾಗಿರುವಾಗ ರಾಜಕೀಯ ಕ್ಷೇತ್ರದಲ್ಲಿ ಬದಲಾವಣೆಗಳನ್ನು ಬಯಸದೇ ಇರಲು ಸಾಧ್ಯವೇ? ಅಶಿಕ್ಷಿತ ವರ್ಗವೆಂದೇ ಪರಿಗಣಿಸಲಾಗಿರುವ ವ್ಯವಸಾಯಗಾರನ ಗ್ರಹಿಕಾ ಶಕ್ತಿ, ಆಲೋಚನಾ ಸಾಮರ್ಥ್ಯ ಕೂಡ ಅನೇಕ ಪಟ್ಟು ಬದಲಾಗಿದೆ. ಕೃಷಿ ಕಸುಬಾಗಿ ಉಳಿದಿಲ್ಲ, ಹೊರತಾಗಿ ವೃತ್ತಿಯಾಗಿದೆ! ಕೃಷಿಯೂ ಸೇರಿದಂತೆ ಯಾವುದೇ ಕಸುಬು ವೃತ್ತಿಯಾದಾಗ ಗುರಿ ಬದಲಾಗುತ್ತದೆ, ಆದ್ಯತೆಗಳು ಬದಲಾಗುತ್ತದೆ, ಬೇಕುಗಳು, ಆಸೆಗಳು ಹೆಚ್ಚಾಗುತ್ತವೆ, ನಿರಾಶೆಗಳು ಇಮ್ಮಡಿಯಾಗುತ್ತವೆ, ದುಡಿಮೆ ಕುಂಠಿತವಾಗುತ್ತೆ, ಸಕಲ ಕಾಯಕವನ್ನು ಆರ್ಥಿಕತೆಯ ದೃಷ್ಟಿಯಿಂದ, ಲಾಭ-ನಷ್ಟದ ದೃಷ್ಟಿಯಿಂದ ಅಳತೆ ಮಾಡಲಾಗುತ್ತೆ, ಪರಿಸ್ಥಿತಿ ಹದಗೆಡುವವರೆಗೂ ಅತ್ತ ಗಮನ ಹರಿಯದೇ ಎಚ್ಚರಗೊಳ್ಳುವ ಪ್ರಯತ್ನಗಳಾಗದೇ ಸಮಸ್ಯೆಗಳು ಉಲ್ಬಣಗೊಂಡಾಗ ಮಾನಸಿಕ ಒತ್ತಡಗಳಿಗೆ ಶರಣಾಗುವ ಮಟ್ಟಕ್ಕೆ ತಲುಪುತ್ತೆ ರೈತಾಪಿ ವರ್ಗದ ಮನಸ್ಥಿತಿ. ಅಲ್ಲಗಳೆಯಬಹುದಾದ ಈ ವಾಸ್ತವವನ್ನು ಚರ್ಚೆಗೆ ಒಳಪಡಿಸಿದಾಗ ಮಾತ್ರ ಸತ್ಯಾಂಶ ಹೊರಬರುತ್ತೆ, ಸಮಸ್ಯೆಗೆ ಪರಿಹಾರ ಕಂಡುಹಿಡಿಯುವತ್ತ ಕನಿಷ್ಠ ಪ್ರಯತ್ನಗಳಾದರೂ ಜರುಗುತ್ತೆ!

ಕೃಷಿಯು ನಿಸರ್ಗವನ್ನು ಅವಲಂಬಿತ ಬದುಕು




ಎಂಬುದು ವಾಸ್ತವವಾದರೂ ಸಹ, ಇಂದಿನ ಆಧುನಿಕ, ತಾಂತ್ರಿಕ ಜಗತ್ತಿನಲ್ಲಿ ಈ ವಾದವನ್ನು ಸಂಪೂರ್ಣವಾಗಿ ಒಪ್ಪಲೇಬೇಕೆಂದಿಲ್ಲ. ಉಳುಮೆಯಲ್ಲಿ ಯಾಂತ್ರೀಕರಣ, ಬಿತ್ತನೆಯಲ್ಲಿ ಯಾಂತ್ರೀಕರಣ, ಬೀಜೋತ್ಪಾದನೆಯಲ್ಲಿ ಆಧುನಿಕತೆ, ನೀರಾವರಿಯಲ್ಲಿ ಆಧುನಿಕತೆ, ಭೂಮಿಯ ಫಲವತ್ತತೆ ಕಾಯ್ದುಕೊಳ್ಳುವಲ್ಲಿ ಯಾಂತ್ರೀಕರಣ, ಫಸಲಿನ ಕಟಾವು, ಸಂಸ್ಕರಣೆಯಲ್ಲಿ ಆಧುನಿಕ ತಂತ್ರಜ್ಞಾನದ ಬಳಕೆ ಮಾತ್ರವಲ್ಲ ಆಹಾರ ಪದಾರ್ಥಗಳ ಮಾರಾಟದಲ್ಲಿಯೂ ಸಹ ಆಧುನಿಕ ತಂತ್ರಜ್ಞಾನದ ಬಳಕೆ ಅನಿವಾರ್ಯವಾಗಿದ್ದು ಸೂರ್ಯನ ಸಾಕ್ಷಿಯಲ್ಲಿ ದುಡಿಮೆಯಲ್ಲಿ ನಿರತನಾಗಿದ್ದ ರೈತಾಪಿ ವರ್ಗ ಇಂದು ಬಾಹ್ಯ ಜಗತ್ತಿನ ಸೌಕರ್ಯಗಳನ್ನು ಹೆಚ್ಚಾಗಿ ಬಯಸುತ್ತಿದ್ದಾನೆ, ಗ್ರಾಮೀಣ ಪ್ರದೇಶಗಳಿಂದ ನಗರಗಳತ್ತ ವಲಸೆ ಹೋಗುತ್ತಿದ್ದಾನೆ, ಶ್ರಮ ಜೀವನಕ್ಕೆ ವಿದಾಯ ಹೇಳುತ್ತಿದ್ದಾನೆ, ಕುಟುಂಬದ ಹಿರಿಯ ತಲೆಗಳನ್ನು ಮರೆತು ಕೌಟುಂಬಿಕ ಮೌಲ್ಯಗಳನ್ನು ಧಿಕ್ಕರಿಸುತ್ತಿದ್ದಾನೆ, ಹಿಂದೆಂದೂ ಕಾಣದಂತಹ ಅನಾರೋಗ್ಯಕ್ಕೆ ತುತ್ತಾಗುತ್ತಿದ್ದಾನೆ... ಹಿಂದೆಂದೂ ಕೇಳರಿಯದ ವಿವಿಧ-ವಿಭಿನ್ನ ಸಮಸ್ಯೆಗಳಿಗೆ ತುತ್ತಾಗುತ್ತಿದ್ದಾನೆ. ಅಂದ ಮಾತ್ರಕ್ಕೆ ರೈತಾಪಿ ವರ್ಗ ಆಧುನಿಕ ಸವಲತ್ತುಗಳನ್ನು ಬಯಸಕೂಡದು ಎಂದು ಖಂಡಿತವಾಗಿ ಹೇಳಲಾಗದು. ಆದರೆ, ಈ ಮಾದರಿಯ ತ್ವರಿತಗತಿಯ ಬದಲಾವಣೆಗಳಿಂದ ಉಂಟಾಗಬಹುದಾದ ಘೋರ, ಅಡ್ಡ ಪರಿಣಾಮಗಳ ಬಗ್ಗೆ ಚಿಂತಿಸುವಷ್ಟು ಪ್ರಬುದ್ಧನಲ್ಲ ಒಕ್ಕಲುತನ ಮಾಡುವಾತ! ಈ ಕಾರಣಕ್ಕೇ ಅಲ್ಲವೇ ಗ್ರಾಮೀಣಾಭಿವೃದ್ಧಿ ಎಂಬ ನೂತನ ಆವಿಷ್ಕಾರ ಎದುರಾಗಿದ್ದು? ಆದರೆ ವಾಸ್ತವದಲ್ಲಿ ಗ್ರಾಮೀಣಾಭಿವೃದ್ಧಿಯ ಹೆಸರಿನಲ್ಲಿ ತೊಡಗಿಸಿರುವ ಯೋಜನಾ ವೆಚ್ಚಕ್ಕೂ ಅಭಿವೃದ್ಧಿಯ ಪ್ರಮಾಣಕ್ಕೂ ಅಜಗಜಾಂತರವಿರುವುದು ಮಾತ್ರ ಕಟುಸತ್ಯ, ವಾಸ್ತವ. ದಿನದಿಂದ ದಿನಕ್ಕೆ ಈ ಸಮಸ್ಯೆ ಉಲ್ಬಣಗೊಳ್ಳುತ್ತಿದ್ದು ಜನಪ್ರತಿನಿಧಿಗಳಿಗೆ ಗ್ರಾಮಗಳ ಅಭಿವೃದ್ಧಿ ಕೇವಲ ಚುನಾವಣಾ ಸಂಗತಿಯಾಗಿದ್ದು ಜನಸಾಮಾನ್ಯರ ನಂಬಿಕೆ ಕಳೆದುಕೊಳ್ಳುತ್ತಿದ್ದಾರೆ, ಮೂಲ ಕಸುಬು ಕೃಷಿಯನ್ನು ತ್ಯಜಿಸಿ ಉದ್ಯೋಗದತ್ತ ಮುಖ ಮಾಡುತ್ತಿದ್ದು ಸರ್ಕಾರಗಳು ಕೃಷಿ ವಲಯಕ್ಕೆ ಘೋಷಿಸುತ್ತಿರುವ 'ಆಮಿಷ'ಗಳಿಗೆ ಫಲಾನುಭವಿಗಳಾಗುವ ನೆಪಕ್ಕೆ ಮಾತ್ರ ಕೃಷಿಕರ ಹಣೆಪಟ್ಟಿ ಕಟ್ಟಿಕೊಂಡಿದ್ದಾರೆ ಎಂದರೆ ಅತಿಶಯೋಕ್ತಿಯಾಗದು. ಈ ವಾಸ್ತವಿಕ ಕಾರಣಕ್ಕೆ ಪ್ರಾಮಾಣಿಕವಾಗಿ ದುಡಿಯುವ ಮಂದಿಯಲ್ಲಿ ದ್ವಂದ್ವ ಹೆಚ್ಚಾಗುತ್ತಿದ್ದು ಮುಂದಿನ ದಿನಗಳಲ್ಲಿ ಕೃಷಿ ವಲಯ ಎದುರಿಸಬಹುದಾದ ಸವಾಲುಗಳು ಯಾವ ಪರಿಯಾಗಿರಬಹುದು ಎಂಬುದು ಊಹೆಗೆ ನಿಲುಕದ ಸಂಗತಿಯಾಗಿದೆ. ದೇಶದ ಸರ್ವತೋಮುಖ ಅಭಿವೃದ್ಧಿಯ ಕನಸು ಹೊತ್ತಿದ್ದ ಹರಿಕಾರ 'ಅಂಬೇಡ್ಕರ್' ಅವರ ಕನಸುಗಳ ಬಗ್ಗೆ ನಮ್ಮನ್ನಾಳುವ ಜನಪ್ರತಿನಿಧಿಗಳಿಗೆ ಕಿಂಚಿತ್ತಾದರೂ ಪ್ರಾಮಾಣಿಕ ಕಾಳಜಿ ಇದ್ದಿದ್ದೇ ಆದರೆ ರಾಜ್ಯದ ಜನಗಳ ಮನದಲ್ಲಿ ಹಚ್ಚ ಹಸಿರಾಗಿರುವ ಗಂಗಾ ಕಲ್ಯಾಣ ಯೋಜನೆಯಂತಹ 'ಗೋಲ್-ಮಾಲ್'ಗಳಿಗೆ ಅವಕಾಶವಿರುತ್ತಿರಲಿಲ್ಲ, ಜಾತಿ ರಾಜಕೀಯಕ್ಕೆ ಕುಮ್ಮಕ್ಕು ನೀಡಿ ಆಡಳಿತ ನಡೆಸುವ ಅವಶ್ಯಕತೆ ಇರುತ್ತಿರಲಿಲ್ಲ! ಒಟ್ಟಿನಲ್ಲಿ ರೈತಾಪಿ ವರ್ಗದ ಹೆಸರಿನಲ್ಲಿ, ಜಾತಿ-ಧರ್ಮದ ಹೆಸರಿನಲ್ಲಿ, ಬಡತನ ನಿರ್ಮೂಲನೆಯ ಹೆಸರಿನಲ್ಲಿ, ಶಿಕ್ಷಣ ನೀಡುವ ನೆಪದಲ್ಲಿ, ಸಾಲ ಮನ್ನಾ (ಇತ್ಯಾದಿ) ಎಂಬ ತಾತ್ಕಾಲಿಕ ಪರಿಹಾರ ನೀಡುವಲ್ಲಿ ಭ್ರಷ್ಟಾಚಾರ, ಅವ್ಯವಹಾರ ಎಗ್ಗಿಲ್ಲದೇ ಸಾಗುತ್ತಿರುವುದು ಬಹಿರಂಗ ಗುಟ್ಟಾಗಿದ್ದು ಈ ದುರುದ್ದೇಶದ ಅರಿವು ಸಮಾಜದ ಅಶಿಕ್ಷಿತ ಹಾಗೂ ರೈತಾಪಿ ವರ್ಗವನ್ನು ತಲುಪಿದಾಗಲೇ ನೈಜ, ಸುವ್ಯಕ್ತ ಬದಲಾವಣೆಗಳನ್ನು ನಿರೀಕ್ಷಿಸಲು ಸಾಧ್ಯ! ಸಾಲ ಮನ್ನಾ ಎಂಬ ರಾಜಕೀಯ ಪ್ರೇರಿತ ಆಮಿಷದ ಸಾಧಕ-ಬಾಧಕಗಳ ಬಗ್ಗೆ ವೈಜ್ಞಾನಿಕ, ವಿವೇಕದ ವಿಶ್ಲೇಷಣೆ ಅತ್ಯಗತ್ಯವಾದ ಸಂಗತಿಯಾಗಿದೆ! ಒಟ್ಟಿನಲ್ಲಿ ಸಂವಿಧಾನ ಶಿಲ್ಪಿ 'ಅಂಬೇಡ್ಕರ್' ಅವರನ್ನು ಆಧರಿಸಿದ ಶ್ರೀ ಕಾಂಬಳೆಯವರ ಕಿರು ಲೇಖನ ಕಣ್ಣು ತೆರೆಸುವದಾಗಿದ್ದು ಲೇಖಕರಿಗೆ ಕೇವಲ ಅಭಿನಂದನೆಗಿಂತ ಬದಲಾವಣೆಯತ್ತ ಪ್ರಯತ್ನಗಳು ಆದಾಗಲೇ ಮಾತ್ರ ಅರ್ಥವತ್ತಾದ ಲೇಖನದ ಸಂದೇಶಗಳ ಸಾಕ್ಷಾತ್ಕಾರ ಸಾಧ್ಯ ಎಂದು ಹೇಳಬೇಕಾಗಿದೆ.

ಹಾಸನ ಜಿಲ್ಲೆ **ರಾಜೀವ್ ಎನ್. ಮಾಗಲ್**

## ಸಂವಿಧಾನವನ್ನು ಸಾಮಾನ್ಯರಿಗೆ ಒಯ್ಯುವುದನ್ನು ಕುರಿತು

ಭಾರತದಲ್ಲಿ ಹಿಂದೆಂದಿಗಿಂತಲೂ ಕಳೆದ ಐದು ವರ್ಷಗಳಲ್ಲಿ ಜನರ ಮನಸ್ಸಿನಲ್ಲಿ ಪ್ರಮುಖವಾಗಿ ಮತ್ತು ಸಾರ್ವಜನಿಕ ವಲಯದಲ್ಲಿ ಸಾಮಾನ್ಯವಾಗಿ ಸೃಷ್ಟಿಸಲಾದ ಅನೇಕ ರೀತಿಯ ತಲ್ಲಣಗಳಲ್ಲಿ ಮುಖ್ಯವಾಗಿ ಒಂದು ಫ್ಯಾಸಿಸ್ಟ್ ಪರಿಸರ ನಿರ್ಮಾಣ ಮತ್ತು ಸಂವಿಧಾನವನ್ನು ವ್ಯವಸ್ಥಿತವಾಗಿ ಮೂಲೆಗುಂಪು ಮಾಡುವುದೇ ಏಕಪಕ್ಷೀಯ ಸರ್ಕಾರದ ಆದ್ಯತೆಯಾಗಿತ್ತು ಮತ್ತದನ್ನು ಮುಂದುವರೆಸುವ ನಿಟ್ಟಿನಲ್ಲಿ ಹೆಚ್ಚು ಕಾರ್ಯಪ್ರವೃತ್ತವಾಗಿದೆ. ಬಾಯಿಮಾತಲ್ಲಿ 'ಎಲ್ಲರ ಜೊತೆ ಎಲ್ಲರ ವಿಕಾಸ' ಎಂಬ ಬಣ್ಣದ ಉಕ್ತಿ ಆದರೆ ಮನಸ್ಸಿನಲ್ಲಿ ಮನುಸ್ಮೃತಿ ಕಾಲದ ಸಮಾಜ ರಚನೆಯ ಮಹದಾಶಯಗಳು. ಈ ಕಾಲಘಟ್ಟದಲ್ಲಿ ನಮ್ಮೆಲ್ಲರಿಗೂ ಅಂಬೇಡ್ಕರ್‌ರ ಚಿಂತನೆಗಳನ್ನು ಮುನ್ನೆಲೆಗೆ ತರುವಲ್ಲಿ ಹಾಗೂ ಸಂವಿಧಾನದ ಆಶಯಗಳನ್ನು ಸಾಮಾನ್ಯರಿಗೆ ಅರ್ಥಮಾಡಿಸುವಲ್ಲಿ ನಮ್ಮ ರಾಜ್ಯದ ಹಾಗೂ ದೇಶದ ಕೆಲ ಪತ್ರಿಕೆಗಳು ಮುಂದಾಗಿದ್ದು ಅದರಲ್ಲಿ 'ಹೊಸತು' ಮುಂಚೂಣಿಯಲ್ಲಿದೆ. ಸಮಕಾಲೀನ ಸನ್ನಿವೇಶಗಳ ದ್ವಂದ್ವಗಳಿಗೆ ಚಾರಿತ್ರಿಕವಾಗಿ ವಿಶ್ಲೇಷಿಸುವ ಅಗತ್ಯಗಳು ಅತ್ಯವಶ್ಯಕ.

ಸಂವಿಧಾನದ ಮೂಲ ಆಶಯವೇ ಸಮಾನತೆಯನ್ನು ಸಾಧಿಸಿ ಸಾಮರಸ್ಯವನ್ನು ಸಮಾಜದಲ್ಲಿ ಸ್ಥಾಪಿಸುವುದು. ಆದರೆ ಅದನ್ನು ಆಗುಮಾಡುವ ಸಾಧ್ಯತೆಯನ್ನು ಸದಾ ಮನಗಂಡು ಮತ್ತು ನೇರವಾಗಿ ಕಾರ್ಯಪ್ರವೃತ್ತರಾದವರಲ್ಲಿ ಅಂಬೇಡ್ಕರ್‌ರವರು ಪ್ರಮುಖರು. ಮತ್ತದನ್ನು ನಾನಾ (ಧಾರ್ಮಿಕ, ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ) ಮಗ್ಗಲುಗಳಿಂದ ವಿಶ್ಲೇಷಿಸಿ ಚಳವಳಿಗಳ ಮೂಲಕ ಸಾಮಾನ್ಯ ಜನರಲ್ಲಿ ಅರಿವು ಮೂಡಿಸುವ ಪ್ರಯತ್ನವನ್ನು ಅವರು ಮಾಡುತ್ತಲೇ ಬಂದರು, ಅದಕ್ಕೆ 'ಖೋತಿ ಚಳವಳಿ'ಯೇ ಐತಿಹಾಸಿಕ ಸಾಕ್ಷಿ.

ಭಾರತವು ತನ್ನ ಕಳೆದ ಎಪ್ಪತ್ತೆರಡು ವರ್ಷಗಳ ನಂತರವೂ ಸ್ವಾತಂತ್ರ್ಯ, ಸಮಾನತೆಯ ಆಶಯಗಳನ್ನು ಸಂವಿಧಾನದ ಮೂಲಕ ಸಾಮಾನ್ಯ ಜನರೆಡೆ ಒಯ್ಯುವುದರಲ್ಲಿ ಅನೇಕ ತೊಡರುಗಳನ್ನು ಎದುರಿಸುತ್ತಲೇ ಬಂದಿದೆ. ಮಾನವನ ಶೋಷಣೆಯೆಂಬ ವಿಕೃತಿಯು ಎಲ್ಲ ಎಲ್ಲೆಗಳನ್ನು ಮೀರಿ ನಿಲ್ಲುವ ಶಕ್ತಿಯನ್ನು ಪಡೆದಿದ್ದು ಅದು ವ್ಯವಸ್ಥೆಯಲ್ಲಿಯೇ ಅವ್ಯವಸ್ಥೆಯ ಲಕ್ಷಣವಾಗಿರುತ್ತದೆ. ಪ್ರಸ್ತುತ ಶೋಷಿತ (ದಲಿತ) ಸಮುದಾಯವು ನಾನಾ ಬಗೆಯ ಶೋಷಣೆಗೆ ಒಳಪಟ್ಟಿರುವುದೇ ಇದಕ್ಕೆ ಉದಾಹರಣೆ. ಅಂದಿನ ಯುರೋಪಿನಲ್ಲಿ ಕಾರ್ಲ್ ಮಾರ್ಕ್ಸ್, ಅಮೆರಿಕಾದ ಮಾರ್ಟಿನ್ ಲೂಥರ್ ಕಿಂಗ್, ಆಫ್ರಿಕಾದಲ್ಲಿ ಮಂಡೇಲಾ, ಭಾರತದಲ್ಲಿ ಅಂಬೇಡ್ಕರ್ ಮಾನವನ ಶೋಷಣೆಯ ವಿವಿಧ ಬಗೆಯ ಕೆಟ್ಟ ಲಕ್ಷಣಗಳ ವಿರುದ್ಧ ಹೋರಾಡಿದರು ಮತ್ತವರ ಗೈರುಹಾಜರಿಯಲ್ಲೂ ಇಂದು ಹೋರಾಟಗಳು ಮುಂದುವರೆಯುತ್ತಿವೆ.

ಭಾರತದಲ್ಲಿ ಇನ್ನೂ ಅನೇಕ ಜನ ಸಮುದಾಯಗಳಿಗೆ ದೇಶವು ಒಂದು ಲಿಖಿತ ಸಂವಿಧಾನವನ್ನು ಹೊಂದಿದೆ ಎಂಬುದರ ಕುರಿತು ಮಾಹಿತಿಯೂ ಇಲ್ಲವೆಂಬ ಮಾತಿದೆ. ಚಿಂತೆಯಿಲ್ಲ ಅದನ್ನು ಅವರ ಬಳಿಗೇ ಒಯ್ಯುವುದು ಇಂದಿನ ತುರ್ತು. ಅದನ್ನು ಕರ್ನಾಟಕ ಉಚ್ಚನ್ಯಾಯಾಲಯದ ನಿವೃತ್ತ ನ್ಯಾಯಾಧೀಶ ನಾಗಮೋಹನದಾಸ್ ನಿರಂತರವಾಗಿ ಮಾಡುತ್ತಿದ್ದಾರೆ. ಇಂದು ಇದೇ ರೀತಿಯಾಗಿ ದೇಶದ ಇನ್ನಿತರ ನಿವೃತ್ತ ನ್ಯಾಯಾಧೀಶರು ಕಾರ್ಯಪ್ರವೃತ್ತರಾದರೆ ಸಂವಿಧಾನದ ಆಶಯಗಳನ್ನು ಮತ್ತು ಮಾನವಹಕ್ಕುಗಳನ್ನು ಎತ್ತಿಹಿಡಿದಂತಾಗುತ್ತದೆ, ಮತ್ತದಕ್ಕೆ ನಿರ್ಮಲವಾದ ಮನಸ್ಥಿತಿಯೂ ಅವಶ್ಯಕ. ಅದನ್ನು ಬಿಟ್ಟು ತೆರೆಮರೆಯಲ್ಲಿ ಯಾವುದೊ ಪಕ್ಷದ ನಾಯಕನನ್ನು ಹೊಗಳುವುದೊ ಅಥವಾ ಲೇವಡಿ ಮಾಡುವುದೊ ಕಾಲಹರಣ ಮತ್ತು ಶುದ್ಧ ಅಪ್ರಯೋಜಕ ಕೆಲಸವಾಗುತ್ತದೆ. ಅದರಂತೆ, ಸಂಧಾನದ ಮೂಲಕ ಅನೇಕ ಸವಲತ್ತುಗಳನ್ನು ತಮ್ಮದಾಗಿಸಿಕೊಂಡ ಒಂದು ಹಂತಕ್ಕೆ ಮೇಲೇರಿದ ಶೋಷಿತ ಸಮುದಾಯವು ಇನ್ನೊಂದು ರೀತಿಯಲ್ಲಿ ಶೋಷಣೆಗೆ ಗುರಿಯಾಗಿದೆ. 'ಎಲ್ಲರೂ ಸಮಾನರು, ಆದರೆ ಕೆಲವರು ಕಡಿಮೆ ಸಮಾನರು' ಎಂಬ ಪರಿಸರದಲ್ಲಿ ಜೀವಿಸುತ್ತಿರುವುದು ಸ್ಪಷ್ಟವಾಗಿ ಕಾಣತೊಡಗಿದೆ. ಇದನ್ನು ಹಂತ ಹಂತವಾಗಿ ಮೂಲೋತ್ಪಾಟನೆ ಮಾಡಬೇಕಿದೆ. ಈ ನಿಟ್ಟಿನಲ್ಲಿ ಸಮಾಜಮುಖಿಯಾದ ಸಾಹಿತ್ಯದ ಪ್ರಕಾರಗಳು ಹಾಗೂ ಸಾಂಸ್ಕೃತಿಕ ಚಟುವಟಿಗಳು ಸಹಕಾರಿಯಾಗಬಲ್ಲವು.

ಅಂಬೇಡ್ಕರ್‌ರವರು ತಮ್ಮ ಕಠಿಣ ಪರಿಶ್ರಮದಿಂದ ಅನನ್ಯ ಸಾಧನೆ ಮಾಡಿದರೆಂಬುದರಲ್ಲಿ ಎರಡು ಮಾತಿಲ್ಲ ಹಾಗೂ ಅಂದಿನ ಕಾಲಘಟ್ಟದಲ್ಲಿ ಅವರು ತಮ್ಮ ಜ್ಞಾನವನ್ನು ಹೆಚ್ಚು ವಿಸ್ತಾರಗೊಳಿಸಿಕೊಳ್ಳಲು ಭಾರತದಲ್ಲಿ ಉನ್ನತ ಮಟ್ಟದ ಶೈಕ್ಷಣಿಕ ಸಂಸ್ಥೆಗಳ ಕೊರತೆ ಒಂದು ಕಾರಣ ಆದುದರಿಂದ ಅವರಿಗೆ ವಿದೇಶ ಅಧ್ಯಯನವು ಅಗತ್ಯವಿತ್ತು. ಅಂದಿನ ಪಾಶ್ಚಿಮಾತ್ಯ ಹಾಗೂ ಯೂರೋಪ್ ದೇಶಗಳಲ್ಲಿ ಅಧ್ಯಯನ ಕೈಗೊಂಡ ವಿಶ್ವವಿದ್ಯಾಲಯಗಳ ಹಾಗೂ ತಂಗಿದ ತಾಣಗಳಿಗೆ ಭೇಟಿ ನೀಡಿ ಭಾವನಾತ್ಮಕವಾದ ಹಾಗೂ ರೋಮಾಂಚನಗಳನ್ನು ಹೆಚ್ಚು ಹಿಗ್ಗಿಸದೆ, ಅವರ ಮುಂದಾಳತ್ವದಲ್ಲಿ ರಚಿಸಲಾದ ಸಂವಿಧಾನವನ್ನು ಮನನ ಮಾಡುವುದರೊಂದಿಗೆ ಪ್ರಸ್ತುತ ಸಮಾಜದ ಸಮಸ್ಯೆಗಳಿಗೆ ಅದು ಜನರ ಮೂಲಕ ಮಧ್ಯಪ್ರವೇಶವು ಅವಶ್ಯಕ ಎಂಬುದನ್ನು ದೇಶದ ಎಲ್ಲರೂ ಮನಗಾಣಬೇಕಿದೆ. ಹೊಸ ಲೋಕಸಭೆಯು ನಮ್ಮ ಸಂವಿಧಾನದ ಮೂಲ ಆಶಯಗಳನ್ನು ಸಾಕಾರಗೊಳಿಸುವಲ್ಲಿ ಕಾರ್ಯಪ್ರವೃತ್ತವಾಗಬೇಕಿದೆ ಹಾಗೂ ಅದು ಅದರ ಆದ್ಯಕರ್ತವ್ಯವೂ ಹೌದು. ಇಲ್ಲದಿದ್ದಲ್ಲಿ ಮನುಷ್ಯತ್ವವನ್ನೇ ಪ್ರಶ್ನಿಸುವ ಮತ್ತು ಮನುಸ್ಮೃತಿಯು ಮನಸೋಇಚ್ಛೆ ಸ್ಮೃತಿಯಾಗಿ ಬಿಡುವ ಅಪಾಯವನ್ನು ಮತ್ತೆ ನಾವೆಲ್ಲರೂ ಎದುರಿಸಬೇಕಾಗುತ್ತದೆ!

*ಬೆಂಗಳೂರು* ***ಬಿ. ಎನ್. ವೇಣುಗೋಪಾಲ್***

## ನನಗೇಕೆ ಪತ್ನಿ ಬೇಕು? ಲೇಖಕಿ–ಪ್ರಿಯದರ್ಶಿನಿ ಶೆಟ್ಟರ

ಈ ಲೇಖನವನ್ನು ಅಮೆರಿಕಾದ ಲೇಖಕಿಯೊಬ್ಬರು ಬರೆದಿರುವುದು ಎಂದರೆ ನಂಬುವುದು ಕಷ್ಟವಾಗುತ್ತದೆ. ಕಾರಣ, ಇದು ಭಾರತೀಯ ಸಮಾಜದಲ್ಲಿ ನೋವುಂಡ ಲೇಖಕಿಯೊಬ್ಬರು ಬರೆದ ಲೇಖನದಂತಿದೆ. ಈ ಲೇಖನದಲ್ಲಿ, ಲೇಖಕಿ ಸೂಕ್ಷ್ಮ ವಿವರಗಳೊಂದಿಗೆ ಹೆಂಡತಿಯ ಕರ್ತವ್ಯಗಳನ್ನು ಪಟ್ಟಿ ಮಾಡಿರುವುದನ್ನು ನೋಡಿದರೆ, ನಮಗೆ ಮನುಧರ್ಮಶಾಸ್ತ್ರ ಜ್ಞಾಪಕಕ್ಕೆ ಬರುತ್ತದೆ. ಹೆಣ್ಣಿನ ಗೋಳು ಕೇವಲ ಭಾರತೀಯ ಹೆಣ್ಣಿಗೆ ಮಾತ್ರ ಸಂಬಂಧಿಸಿದ್ದು ಎಂಬ ನಂಬಿಕೆ ಸುಳ್ಳಾಗಿ ಹೋಗುತ್ತದೆ. ಇದೊಂದು ಜಾಗತಿಕ ರೋಗ ಎಂದು ಮನದಟ್ಟಾಗುತ್ತದೆ. ಅಮೆರಿಕಾ ಮತ್ತು ಇತರ ಯೂರೋಪಿನ ದೇಶಗಳು ಬಹಳ ಮುಂದುವರಿದಿವೆ, ಅಲ್ಲಿ ಮಹಿಳೆಯರು ಪುರುಷರಿಗೆ ಸಮಾನವಾಗಿ ಸ್ವತಂತ್ರಜೀವನ ನಡೆಸುತ್ತಿದ್ದಾರೆ ಎಂದು ತಿಳಿದಿದ್ದ ನಮಗೆ ಪ್ರಸ್ತುತ ಲೇಖನ, ಅದು ಹಾಗಲ್ಲ, ವಸ್ತುಸ್ಥಿತಿ ಇರುವುದು ಹೀಗೆ ಎಂದು ವಿವರಿಸುತ್ತದೆ.

ಆದರೂ, ಈ ಸಮಾಜ ನಿಂತ ನೀರಲ್ಲ. ೧೯೭೦ರ ಸಮಾಜದ ಚಿತ್ರಣವನ್ನು ಲೇಖಕಿ ಜೂಡಿ ಬ್ರಾಡಿಯವರು ಕಟ್ಟಿಕೊಟ್ಟಿದ್ದಾರೆಯೇ ವಿನಾ ಇಂದಿನದನ್ನಲ್ಲ. ಇಂದು ಭಾರತವನ್ನೂ ಒಳಗೊಂಡಂತೆ ಜಗತ್ತಿನಾದ್ಯಂತ ಮಹಿಳೆಯರ ಸ್ಥಾನ–ಮಾನದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಆಕೆ ಗಂಡಿಗೆ ಸಮನಾಗಿ, ಶಿಕ್ಷಕಿಯಿಂದ ಪ್ರಾರಂಭಿಸಿ ಸೈನಿಕಳಾಗುವವರೆಗೆ, ಸೈಕಲ್ ತುಳಿಯುವುದರಿಂದ ಹಿಡಿದು ವಿಮಾನದ ಪೈಲೆಟ್ ಆಗುವವರೆಗೆ ಎಲ್ಲ ಕ್ಷೇತ್ರಗಳಲ್ಲೂ ತನ್ನನ್ನು ತೊಡಗಿಸಿಕೊಂಡಿದ್ದಾಳೆ. ಹಾಗಾಗಿ, ಇಂದು ಅವಳು ಕೇವಲ ಗಂಡನ ಬೇಕು–ಬೇಡಗಳನ್ನು ಪೂರೈಸುವ ಆಳಾಗಿ ಉಳಿದಿಲ್ಲ.

ಲೇಖಕಿ ಪ್ರಿಯದರ್ಶಿನಿ ಶೆಟ್ಟರ ಅವರು ಲೇಖನದ ಪ್ರಾರಂಭದಲ್ಲಿ "ಹೆಣ್ಣು ಸಿಗುವುದೇ ಅಪರೂಪವಾದ ಕಾಲವೊಂದಿತ್ತಂತೆ. ಹೆಣ್ಣು ಸಿಗಬೇಕಾದರೆ ತೆರವು / ಕನ್ಯಾ ಶುಲ್ಕ ಕೊಟ್ಟು ತರಬೇಕಾದ ಸ್ಥಿತಿಯಿತ್ತಂತೆ" ಎಂದು ಹೇಳಿದ್ದಾರೆ. ಇಂಥ ಸ್ಥಿತಿ ೬೦–೭೦ ವರ್ಷಗಳ ಹಿಂದೆ ಇದ್ದದ್ದು ನಿಜ. ಕಾಲ ಸರಿದಂತೆ, ಒಂದು ಕಾಲಘಟ್ಟದಲ್ಲಿ ಗಂಡಿಗೆ ಬೇಡಿಕೆ ಹೆಚ್ಚಾಯಿತು. ಇತ್ತೀಚಿನ ವರ್ಷಗಳಲ್ಲಿ ಹೆಣ್ಣು ಭ್ರೂಣಹತ್ಯೆಯ ಕಾರಣದಿಂದ ಹೆಣ್ಣುಗಳ ಸಂಖ್ಯೆ ಕ್ಷೀಣಿಸಿ ಹೆಣ್ಣಿಗೆ ಬೇಡಿಕೆ ಹೆಚ್ಚಾಗಿ, ಮದುವೆಗೆ ಹೆಣ್ಣು ಸಿಗುವುದೇ ಅಪರೂಪವಾಗಿದೆ. ಗಂಡಿಗೆ ಬೇಡಿಕೆ ಇದ್ದ ಕಾಲಘಟ್ಟದಲ್ಲಿ ವರದಕ್ಷಿಣೆ, ವರೋಪಚಾರ, ವರದಕ್ಷಿಣೆ ತಾರದ ಹೆಣ್ಣುಗಳನ್ನು ಸುಡುವುದು ಇವೆಲ್ಲ ನಡೆಯುತ್ತಿತ್ತು. ಆದರೆ ಈಗ ಈ ಅನಿಷ್ಟ ಪದ್ಧತಿಗಳು ಇಲ್ಲವೆಂದೇ ಹೇಳಬೇಕು. ಜೊತೆಗೆ ಹೆಣ್ಣು ಶಿಕ್ಷಿತಳಾಗಿ ಸ್ವಾವಲಂಬಿ ಬದುಕು ಪ್ರಾರಂಭಿಸಿರುವುದರಿಂದಲೂ ಕೂಡ ಅವಳು ಗಂಡನಿಂದ ಮತ್ತು ಗಂಡನ ಮನೆಯವರಿಂದ ಆಗುತ್ತಿದ್ದ ಶೋಷಣೆಯಿಂದ ಬಿಡುಗಡೆ ಪಡೆದಿದ್ದಾಳೆ.

*ಬೆಂಗಳೂರು* ***ಸಿ. ಚಿಕ್ಕತಿಮ್ಮಯ್ಯ***




# ಮನುಸ್ಮೃತಿಯ ಪರಿಚಯ – ೫

ಮನುಸ್ಮೃತಿಯ ೯ನೆಯ ಅಧ್ಯಾಯದ ಮೊದಲ ಭಾಗವನ್ನು ಮಹಿಳೆಯ ಮೇಲಿನ ಕಟ್ಟುನಿಟ್ಟು ವಿಧಿಗಳು ಹಾಗೂ ಅವಹೇಳನ ಮತ್ತು ಅಧೀನತೆಗಳನ್ನು ಪರಿಚಯಿಸಿಕೊಳ್ಳುವ ಮುಂಚಿನ ಒಂದು ಕಂತಿನಲ್ಲಿ ಚರ್ಚಿಸಿದ್ದೇವೆ. ಅದರ ಇನ್ನುಳಿದ ಭಾಗದಲ್ಲಿ ಆಸ್ತಿ ಹಂಚಿಕೆ (ದಾಯಭಾಗ), ಜೂಜಾಟದ ರೀತಿನೀತಿಗಳು, ಕಳ್ಳರನ್ನು ಹಿಡಿದು ಶಿಕ್ಷಿಸುವುದು, ಬ್ರಾಹ್ಮಣರ ಸ್ಥಾನಮಾನ, ಮುಂತಾದವನ್ನು ಪ್ರಸ್ತಾಪಿಸಲಾಗಿದೆ. ಪುರುಷಪ್ರಧಾನ ಸಮಾಜದ ಸಂರಚನೆ ಮತ್ತು ಕುತ್ಸಿತ ಮೌಲ್ಯಗಳು ಎಷ್ಟು ಪ್ರತಿಗಾಮಿಯಾಗಿರಬಲ್ಲವೆಂಬುದಕ್ಕೆ ಪುರಾವೆಗಳು ಇಲ್ಲಿ ಹೇರಳವಾಗಿ ದೊರೆಯುತ್ತವೆ.

ಮಹಿಳೆಯ ಬಗ್ಗೆ ಮನುಸ್ಮೃತಿಯು ಗೌರವದ ಮಾತುಗಳನ್ನಾಡುವುದು ವಿರಳ. ಆದರೆ ಸ್ತ್ರೀ–ಆಪದ್ಧರ್ಮಗಳನ್ನು ಹೇಳಿದ ನಂತರ ಏನೋ ದೊಡ್ಡ ರಿಯಾಯಿತಿ ತೋರಿಸುವಂತೆ ‘ಪತಿಯು ಸಾಧ್ವಿಯಾದ ತನ್ನ ಪತ್ನಿಯನ್ನು ದೇವತೆಗಳಿಗೆ ಸಂತೋಷವಾಗುವಂತೆ ನೋಡಿಕೊಳ್ಳಬೇಕೆಂಬ’ ಸಲಹೆಯನ್ನು ನೀಡುತ್ತದೆ; ಅದಕ್ಕೂ ಪ್ರೀತಿ–ಪ್ರೇಮಗಳ ಕಾರಣವನ್ನೇನೂ ಹೇಳಿಲ್ಲ. ಬದಲಾಗಿ, ಹೆಂಡತಿಯು ಪುರುಷನಿಗೆ ದೈವನಿರ್ಣಯದಿಂದ ಲಭಿಸಿದ್ದಾಳಲ್ಲದೆ ಪುರುಷನ ಇಚ್ಛೆಯಿಂದಲ್ಲವಾದ್ದರಿಂದ ಅವಳನ್ನು ಚೆನ್ನಾಗಿ ಸಲಹಬೇಕು (೯.೯೫ : ದೇವದತ್ತಾಂ ಪತಿರ್ಭಾರ್ಯಾಂ ವಿಂದತೇ ನೇಚ್ಛಯಾತ್ಮನಃ। ತಾಂ ಸಾಧ್ವೀಂ ಬಿಭೃಯಾನ್ನಿತ್ಯಂ ದೇವಾನಾಂ ಪ್ರಿಯಮಾಚರನ್). ಪುರುಷನು ಹೆಂಡತಿಯೊಡನೆ ಸಂತಾನ ಪ್ರಾಪ್ತಿಗಾಗಿ ದಾಂಪತ್ಯ ಧರ್ಮವನ್ನು ಆಚರಿಸಬೇಕು; ಏಕೆಂದರೆ ಸ್ತ್ರೀಯರು ಸೃಷ್ಟಿಯಾಗಿರುವುದೇ ಸಂತಾನೋತ್ಪಾದನೆಗಾಗಿ ಮತ್ತು ಪುರುಷರು ಸೃಷ್ಟಿಯಾಗಿರುವುದು ಗರ್ಭ ನೀಡಲೆಂದು (೯.೯೬).

ಕನ್ಯಾದಾನ ಮಾಡುವಾಗ ಶೂದ್ರರು ಸಹ ವರನಿಂದ ಹಣ ಪಡೆಯಬಾರದು; ಹಾಗೆ ಹಣ ಪಡೆದರೆ ಅದು ಕನ್ಯೆಯನ್ನು ಮಾರಿದಂತಾಗುತ್ತದೆ ಎನ್ನುತ್ತಾನೆ ಮನು (೯.೯೮). ಸಂಪ್ರದಾಯವು ಹೀಗೇನಾದರೂ ಇದ್ದಿದ್ದರೆ ಅದು ತರುವಾಯದಲ್ಲಿ ವರದಕ್ಷಿಣೆ ಪದ್ಧತಿಯನ್ನು ಹೇಗೆ ಮತ್ತು ಯಾವ ಹಂತದಲ್ಲಿ ಅಳವಡಿಸಿಕೊಂಡಿತು ಎಂಬುದು ಕುತೂಹಲದ ವಿಷಯ.

ಮುಂದೆ ಕುಟುಂಬಗಳ ಅಣ್ಣ–ತಮ್ಮಂದಿರಲ್ಲಿ ಆಸ್ತಿಯ ಹಂಚಿಕೆಯ ಬಗೆಗಿನ ವಿವರಗಳಿವೆ. ಯೂರೋಪಿನಲ್ಲಿ ಊಳಿಗಮಾನ್ಯ ಪದ್ಧತಿಯು ಜಾರಿಯಲ್ಲಿದ್ದಾಗ ಕುಟುಂಬಗಳ ಆಸ್ತಿಯ ಹಂಚಿಕೆಯಾಗುತ್ತಿರಲಿಲ್ಲ; ಬದಲಾಗಿ ಎಲ್ಲ ಆಸ್ತಿಯೂ ಹಿರಿಯ ಮಗನಿಗೆ ಸೇರುತ್ತಿತ್ತು. ಅದನ್ನು ‘ಪ್ರೈಮೋ ಜೆನಿಚರ್’ ಎಂದು ಕರೆಯಲಾಗಿತ್ತು. ಅವನ ತಮ್ಮಂದಿರಿಗೆ ಆಸ್ತಿಯ ಭಾಗವಿಲ್ಲದಿದ್ದರೂ ವಿರಾಮ ಮತ್ತು ಸುಖಕ್ಕೇನೂ ಕೊರತೆ ಇರುತ್ತಿರಲಿಲ್ಲ. ಹೆಚ್ಚಿನ ಜವಾಬ್ದಾರಿಗಳಿಲ್ಲದಿದ್ದುದರಿಂದ ಅವರು ಪೋಕರಿಗಳಾಗಿ ಅಲೆಯುವುದು ಮತ್ತು ಬೇರೆ ಕುಟುಂಬಗಳವರಿಗೆ ಅಲ್ಪಸ್ವಲ್ಪ ಸಹಾಯ ಮಾಡುವುದು, ಬೇಟೆಯಾಡುವುದು, ಮೀನು ಹಿಡಿಯುವುದು, ಇಂತಹ ಚಟುವಟಿಕೆಗಳಲ್ಲಿ ಕಾಲ ಕಳೆಯುತ್ತಿದ್ದರೆಂದು ೧೮ನೆಯ ಶತಮಾನದ ಇಂಗ್ಲಿಷ್ ಸಾಹಿತ್ಯದಲ್ಲಿ ವಿಪುಲವಾಗಿ ಚಿತ್ರಿಸಲಾಗಿದೆ. ಮನುವಿನ ಸಂಯೋಜನೆಯಲ್ಲಿ ಸಹ ಹಿರಿಯ ಮಗನಿಗೆ ಎಲ್ಲ ಆಸ್ತಿಯೂ ಸೇರಬೇಕೆಂಬ ಸೂಚನೆಯಿದೆ; ತಮ್ಮಂದಿರು ಅವನನ್ನೇ ತಂದೆಯೆಂದು ಭಾವಿಸಿ ಜೀವಿಸಬೇಕು (೯.೧೦೫). ಮೊದಲ ಮಗನು ಹುಟ್ಟಿದಾಗ ತಂದೆಯು ತನ್ನ ಪಿತೃಋಣವನ್ನು ತೀರಿಸಿದ್ದಾಗಿ ತೃಪ್ತನಾಗುತ್ತಾನೆ ಮತ್ತು ತನ್ನ ಮೋಕ್ಷಕ್ಕೆ ಹಾದಿ ಸುಗಮವಾಯಿತೆಂದು ಹರ್ಷಿಸುತ್ತಾನೆ. ನಂತರದ ಮಕ್ಕಳು ಕಾಮದ ಫಲವಾಗಿ ಹುಟ್ಟಿದವರು, ಅಷ್ಟೇ (೯.೧೦೬). ಹಿರಿಯ ಅಣ್ಣನು ತಂದೆಯಿಂದ ಪಡೆದ ಆಸ್ತಿಯನ್ನು ಪಾಲುಮಾಡಲು ಹೊರಟರೆ ವಂಶವನ್ನು ಹಾಳು ಮಾಡಿದಂತೆಯೇ ಸರಿ (೯.೧೦೯). ಇದು ಮನುವಿನ ಆದರ್ಶ ಸಂಯೋಜನೆ ಇರಬೇಕು. ಏಕೆಂದರೆ, ಮುಂದಿನ ಭಾಗದಲ್ಲಿ ಆಸ್ತಿಯ ಹಂಚಿಕೆಯನ್ನು ಸಮರ್ಥಿಸುತ್ತಾನೆ ಮತ್ತು ಅದರ ವಿಧಾನವನ್ನು ಸೂಚಿಸುತ್ತಾನೆ. ಅದರಂತೆ ಎಲ್ಲರಿಗಿಂತಲೂ ಹಿರಿಯನಿಗೆ ೧/೨೦ರಷ್ಟು, ಅದರರ್ಧದಷ್ಟು

**ಜಿ. ರಾಮಕೃಷ್ಣ**

ಮಧ್ಯಮನಿಗೆ, ಮೂರನೆಯವನಿಗೆ ಅದರ ಕಾಲು ಭಾಗ; ಉಳಿದಿದ್ದನ್ನು ಎಲ್ಲರೂ ಸಮನಾಗಿ ಹಂಚಿಕೊಳ್ಳಬೇಕು (೯.೧೧೨). ಮೂರು ಮಕ್ಕಳಿಗಿಂತಲೂ ಜಾಸ್ತಿ ಇದ್ದರೆ ಅವರಿಗೆಷ್ಟು ಪಾಲು ದೊರೆಯುತ್ತದೆ? ಮೂರು ಮಕ್ಕಳ ಪಾಲಿನ ನಂತರ ಉಳಿದುದರಲ್ಲಿ ಸಮಭಾಗ, ಅಷ್ಟೆ. ಹೀಗೆ ನಿರ್ಣಯಿಸಿದ ನಂತರ ಮುಂದಿನ ಶ್ಲೋಕದಲ್ಲಿ ಮನು ಹೇಳುತ್ತಾನೆ, "ಎಲ್ಲರಿಗಿಂತಲೂ ಹಿರಿಯ ಮತ್ತು ಕಿರಿಯ ಇಬ್ಬರೂ ತಮ್ಮ ಪಾಲಿನದನ್ನು ಪಡೆದ ನಂತರ ಉಳಿದುದರಲ್ಲಿ ಹಿರಿಯನು ಪಡೆದುದರ ಅರ್ಧ ಭಾಗ ಸಲ್ಲುತ್ತದೆ" ಎಂದು (೯.೧೧೩). ಸಾಮಾನ್ಯವಾಗಿ ಎಲ್ಲ ಆಸ್ತಿಯಲ್ಲೂ (ಭೂಮಿ, ದನ, ಆಭರಣ, ಇತ್ಯಾದಿ) ಉತ್ತಮವಾದ ಭಾಗವು ಹಿರಿಯನದೇ. ಈ ರೀತಿಯ ಪಾಲನ್ನು 'ಉದ್ಧಾರ ದ್ರವ್ಯ' ಎನ್ನಲಾಗಿದೆ. ಎಲ್ಲರ 'ಉದ್ಧಾರ ದ್ರವ್ಯ' ವಿಲೇವಾರಿಯಾದ ನಂತರ ಉಳಿದ ಆಸ್ತಿಯನ್ನು ಎಲ್ಲ ಸೋದರರೂ ಸಮವಾಗಿ ಹಂಚಿಕೊಳ್ಳಬೇಕು (೯.೧೧೬). 'ಉದ್ಧಾರ ದ್ರವ್ಯ'ವನ್ನು ತೆಗೆದಿರಿಸದಿದ್ದಲ್ಲಿ ಹಂಚಿಕೆಯು ಬೇರೆ ರೀತಿ ಇರುತ್ತದೆ. ಆಗ ಹಿರಿಯವನಿಗೆ ಎರಡು ಭಾಗ, ಎರಡನೆಯವನಿಗೆ ಒಂದೂವರೆ ಭಾಗ ಮತ್ತು ಉಳಿದವರಿಗೆ ಒಂದೊಂದು ಭಾಗ (೯.೧೧೭). ವಿಶೇಷವೆಂದರೆ ಸೋದರರೆಲ್ಲಾ ತಾವು ಪಡೆದ ಭಾಗದ ನಾಲ್ಕನೆಯ ಒಂದು ಭಾಗವನ್ನು ಸೋದರಿ ಕನ್ಯೆಯರಿಗೆ ಕೊಡಬೇಕು (೯.೧೧೮). ಅಣ್ಣನ ಪತ್ನಿಯಲ್ಲಿ ತಮ್ಮನು ನಿಯೋಗ ವಿಧಿಯಿಂದ ಪುತ್ರನನ್ನು ಪಡೆದಿದ್ದರೆ ಆ ಪುತ್ರನಿಗೂ ತನಗೂ ಸಮಪಾಲು ಪಡೆಯಬೇಕು (೯.೧೨೦). ಕುಟುಂಬದ ಪಶುಗಳ ಹಂಚಿಕೆಯೂ ಇದೆ; ಅದು ಮಾತ್ರ ಸಮಾನವಾಗಿಯೇ ಹಂಚಲ್ಪಡುತ್ತದೆ. ಹಾಗೆ ಹಂಚಿ ಉಳಿದದ್ದು ಹಿರಿಯ ಮಗನ ಪಾಲಾಗುತ್ತದೆ (೯.೧೧೯).

ಮೊದಲ ಹೆಂಡತಿ ಮಕ್ಕಳು, ಕಿರಿಯ ಹೆಂಡತಿ ಮಕ್ಕಳು ಆಸ್ತಿ ವಿಭಾಗ ಮಾಡಿಕೊಳ್ಳುವಾಗ ವಿಧಾನವು ಬದಲಾಗುತ್ತದೆ. ಅಂತೆಯೇ ಸ್ವಜಾತಿಯ ಪತ್ನಿಯ ಮತ್ತು ಬೇರೆ ಜಾತಿಯ ಪತ್ನಿಯ ಸಂತಾನ ಎಂಬುದು ಆಸ್ತಿ ಹಂಚಿಕೆಗೆ ಮತ್ತೊಂದು ವಿಧಾನವನ್ನು ಅವಲಂಬಿಸುತ್ತದೆ. ಬೇರೆಯಂತೆ, ಗಂಡು ಸಂತಾನವಿಲ್ಲದಿದ್ದರೆ ತನ್ನ ಮಗಳನ್ನೇ 'ಪುತ್ರಿಕಾ' ಎಂದು ಸ್ವೀಕರಿಸಿ ಅವಳ ಮಕ್ಕಳಿಗೆ ತಾತನ ಶ್ರಾದ್ಧ ಕರ್ಮ ಮಾಡುವ ಹಕ್ಕನ್ನು ನೀಡಬಹುದು (೯.೧೨೭). ಆ 'ಪುತ್ರಿಕೆ'ಯಲ್ಲದೆ ಬೇರೆ ಪುತ್ರಿಯರಿಗೆ ಆಸ್ತಿಯ ಹಕ್ಕುಂಟೇ, ಇದ್ದರೆ ಎಷ್ಟು, ಎಂಬುದು ಮನುಸ್ಮೃತಿಯಲ್ಲಿ ಉಕ್ತವಾಗಿಲ್ಲ; ಆದರೆ 'ಪುತ್ರಿಕೆ'ಗೆ ತಂದೆಯ ಆಸ್ತಿಯೆಲ್ಲಾ ದೊರೆಯುತ್ತದೆ (೯.೧೩೦). ಪುತ್ರಿಯನ್ನು 'ಪುತ್ರಿಕೆ' ಎಂದು ಸ್ವೀಕರಿಸಿದ ನಂತರ ಮಗನ ಜನನವಾದರೆ ಇಬ್ಬರಿಗೂ ಸಮಾನವಾಗಿ ಆಸ್ತಿಯ ಹಕ್ಕಿರುತ್ತದೆ (೯.೧೩೪).

ಗಂಡನ ಮರಣಾನಂತರದಲ್ಲಿ ಆಸ್ತಿಯನ್ನು ನಿಭಾಯಿಸಲು ಪತ್ನಿಯು ಅಸಮರ್ಥಳಾದರೆ ಜವಾಬ್ದಾರಿಯನ್ನು ತನ್ನ ಮೈದುನನಿಗೆ ಒಪ್ಪಿಸಬಹುದು; ಮೈದುನನು ನಿಯೋಗ ಧರ್ಮದಿಂದ ಅವಳಿಗೆ ಸಂತಾನವನ್ನಿತ್ತು ಆಸ್ತಿಯನ್ನು ಆ ಮಗುವಿಗೆ ವರ್ಗಾಯಿಸಬೇಕು (೯.೧೪೬). ನಿಯೋಗ ಪದ್ಧತಿಯನ್ನು ಅನುಸರಿಸದೆ ಕಾಮಾತುರಳಾಗಿ ಮೈದುನನಿಂದಾಗಲಿ, ಅನ್ಯರಿಂದಾಗಲಿ, ಪುತ್ರಸಂತಾನವಾದರೆ ಆ ಮಗನು ಪಾಲಕ ಪಿತೃವಿನ ಆಸ್ತಿಯ ಹಕ್ಕನ್ನು ಪಡೆಯುವುದಿಲ್ಲ (೯.೧೪೭).

ಬ್ರಾಹ್ಮಣನಿಗೆ ನಾಲ್ಕೂ ವರ್ಣದವರನ್ನು ಪತ್ನಿಯರನ್ನಾಗಿ ಹೊಂದುವ ಸೌಭಾಗ್ಯವಿದೆ. ಅಂತಹ ನಾಲ್ಕು ಪತ್ನಿಯರ ಮಕ್ಕಳಿಗೆ ಆಸ್ತಿಯಲ್ಲಿ ಸಮಾನ ಹಕ್ಕಿರುವುದಿಲ್ಲ. ಬ್ರಾಹ್ಮಣ ಸ್ತ್ರೀಯ ಸಂತಾನಕ್ಕೆ ಆಸ್ತಿಯ ಶ್ರೇಷ್ಠವಾದ ಭಾಗವು ಸೇರುತ್ತದೆ. ಮಿಕ್ಕಿದ್ದು ವಿಭಜನೆಯಾಗುವಾಗ ವರ್ಣದ ಪ್ರಕಾರ ಕಡಿಮೆ ಪ್ರಮಾಣದಲ್ಲಿ ಹಂಚಿಕೆಯಾಗುತ್ತದೆ (೯.೧೫೦). ಶೂದ್ರ ಸ್ತ್ರೀಯ ಮಕ್ಕಳಿಗೆ ಆಸ್ತಿಯ ಹತ್ತನೆಯ ಒಂದು ಭಾಗ ಮಾತ್ರ ಕೊಡಬೇಕು, ಹೆಚ್ಚು ಕೊಡಬಾರದು (೯.೧೫೪). ಅದಕ್ಕೆ ಅಪವಾದವೂ ಇದೆ : ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯ ಪುರುಷರು ಶೂದ್ರ ಸ್ತ್ರೀಯಲ್ಲಿ ಸಂತಾನ ಪಡೆದಾಗ ಮಕ್ಕಳಿಗೆ ಆಸ್ತಿಯ ಪಾಲು ಕೊಡಬೇಕಾಗಿಲ್ಲ; ತಂದೆಯು ಎಷ್ಟು ಕೊಟ್ಟರೆ ಅಷ್ಟನ್ನು ಮಾತ್ರ ಪಡೆದು ಪುತ್ರನು ಸುಮ್ಮನಾಗಬೇಕು (೯.೧೫೫). ಶೂದ್ರನು ಹೇಗಿದ್ದರೂ ತನ್ನ ವರ್ಣದ ಸ್ತ್ರೀಯನ್ನು ಮಾತ್ರ ಮದುವೆಯಾಗಬೇಕಾದ್ದರಿಂದ ಅವನ ಸಂತಾನಕ್ಕೆ ಆಸ್ತಿಯ ಸಮಪಾಲು ದೊರೆಯುತ್ತದೆ (೯.೧೫೭). ಈ ನಿಯಮವು ಬಹುಮಟ್ಟಿಗೆ ಗಗನ ಕುಸುಮವೇ ಸರಿ, ಏಕೆಂದರೆ ಮನುಸ್ಮೃತಿಯು ಬೇರೆ ಸಂದರ್ಭಗಳಲ್ಲಿ ಖಚಿತವಾಗಿ ಹೇಳಿರುವಂತೆ ಶೂದ್ರನಿಗೆ ಆಸ್ತಿಯ ಹಂಗೇ ಇರಕೂಡದು; ಅವನಿಗೆ ಆಸ್ತಿ ಇಲ್ಲದಿರುವಾಗ ಅದರ ಹಂಚಿಕೆಯ ಪ್ರಶ್ನೆಯು ಪ್ರಸ್ತುತವಲ್ಲ.

ಸಾರ್ವತ್ರಿಕವಾಗಿ ಮತ್ತು ಸಾರ್ವಕಾಲಿಕವಾಗಿ ಶೂದ್ರನಿಗೆ ಆಸ್ತಿಯ ಹಕ್ಕನ್ನು ನಿರಾಕರಿಸಲು ಸಾಧ್ಯವಿರಲಿಲ್ಲ; ಇತಿಹಾಸದ ಒಂದು ಹಂತದಲ್ಲಿ ಅಂತಹ ನಿರಾಕರಣೆ ಸಾಧ್ಯವಿದ್ದಿರಬಹುದು. ಸಮಾಜದ ವಿಕಾಸದ ಹಾದಿಯಲ್ಲಿ ಶೂದ್ರರು ಆಸ್ತಿಯನ್ನು ಹೊಂದುವುದು ಮಾತ್ರವಲ್ಲ, ಯಜ್ಞಗಳನ್ನು ಸಹ ಮಾಡಬಹುದೆಂಬ 'ಸವಲತ್ತು' ಪಡೆದರು. ಗುಪ್ತರ ಕಾಲದಲ್ಲಿ (ಸುಮಾರು ಕ್ರಿ.ಶ. ನಾಲ್ಕನೆಯ ಶತಮಾನ) ಶೂದ್ರರು ಆಸ್ತಿಯ ಒಡೆಯರಾಗಿದ್ದರು. ಅವರು ಯಜ್ಞಗಳನ್ನು ಮಾಡುವಾಗ ಬ್ರಾಹ್ಮಣ ಪುರೋಹಿತರು ಯಾವ ಸಂಕೋಚವೂ ಇಲ್ಲದೆ ಪಾಲ್ಗೊಂಡು ಭೂರಿ ದಕ್ಷಿಣೆ ಪಡೆಯುತ್ತಿದ್ದರು. ಗುಪ್ತರ ಕಾಲದ ಧರ್ಮಶಾಸ್ತ್ರ ಗ್ರಂಥಗಳೂ ಇದಕ್ಕೆ ಪೂರಕವಾದ ವಿಧಿಗಳನ್ನು ನಮೂದಿಸಿವೆ. ಡಾ॥ ಆರ್. ಎಸ್. ಶರ್ಮ ತಮ್ಮ "ಪ್ರಾಚೀನ ಭಾರತದಲ್ಲಿ ಶೂದ್ರರು" ಎಂಬ ಗ್ರಂಥದಲ್ಲಿ ಈ ವಿದ್ಯಮಾನಗಳು ಬದಲಾಗುತ್ತಾ ಹೋದ ಸಂದರ್ಭಗಳನ್ನು ವಿವರವಾಗಿ ದಾಖಲಿಸಿದ್ದಾರೆ ಮತ್ತು ಧರ್ಮಶಾಸ್ತ್ರಗಳು ತಮ್ಮ ಬದಲಾದ ನಿಲುವುಗಳನ್ನು ಗ್ರಂಥಸ್ಥ ಮಾಡಿರುವುದನ್ನೂ ಸೋದಾಹರಣವಾಗಿ ನಿರೂಪಿಸಿದ್ದಾರೆ. ಮನುಸ್ಮೃತಿಯ ಕಾಲಕ್ಕಿನ್ನೂ ಶೂದ್ರರ ಸ್ಥಾನವು ಬಹುಮಟ್ಟಿಗೆ ಸಾಕಷ್ಟು ನಿಕೃಷ್ಟವಾಗಿಯೇ ಇತ್ತೆಂಬುದು ವಾಸ್ತವ.

ಮನುಸ್ಮೃತಿಯ ಪರಿಧಿಯನ್ನು ಕುರಿತು ಹೇಳುವುದಾದರೆ "ಸ್ವಾಯಂಭುವ" ಮನುವು ಹನ್ನೆರಡು ವಿಧದ ಪುತ್ರರನ್ನು ವಿಂಗಡಿಸಿದ್ದಾನೆ. ಆ ಪೈಕಿ ಆರು ವಿಧದ ಪುತ್ರರು ತಂದೆಯ ಆಸ್ತಿಯ ಪಾಲಿಗೆ ಭಾಜನರಾಗಲು ಅರ್ಹರು. ಅವರನ್ನು 'ದಾಯ ಬಂಧುಗಳು' ಎನ್ನಬಹುದು. ಹಾಗೆ ಆಸ್ತಿ ಪಡೆಯುವ ಹಕ್ಕಿಲ್ಲದವರು ಬೇರೆ ಆರು ವಿಧದ ಮಕ್ಕಳು. ಅವರು 'ಅ–ದಾಯ ಬಂಧುಗಳು.' ಆಸ್ತಿಯ ಪಾಲು ಪಡೆಯುವ ಹಕ್ಕುಳ್ಳವರನ್ನು ಔರಸ, ಕ್ಷೇತ್ರಜ, ದತ್ತ, ಕೃತ್ರಿಮ, ಗೂಢೋತ್ಪನ್ನ ಮತ್ತು ಅಪವಿದ್ಧ ಎಂದು ಹೆಸರಿಸಲಾಗಿದೆ. ಆಸ್ತಿಯ ಹಕ್ಕಿಲ್ಲದವರನ್ನು ಕಾನೀನ, ಸಹೋಢ, ಕ್ರೀತ, ಪೌನರ್ಭವ, ಸ್ವಯಂದತ್ತ ಮತ್ತು ಶೌದ್ರ ಎಂದು ಹೆಸರಿಸಲಾಗಿದೆ (೯.೧೫೯–೧೬೦). ಈ ಹೆಸರುಗಳು ಯಾವ ಮತ್ತು ಎಂತಹ ಮಕ್ಕಳಿಗೆ ಅನ್ವಯವಾಗುತ್ತದೆಂಬುದನ್ನು ವಿಶದವಾಗಿ ಹೇಳಲಾಗಿದೆ (೯.೧೬೧–೧೭೯). ಅವನ್ನಿಲ್ಲಿ ವಿವರಿಸುವ ಪ್ರಮೇಯವಿಲ್ಲ. ಕೆಲವು ಸಂದರ್ಭಗಳಲ್ಲಿ ಮುಂದಿನ ಹೆಸರಿಗೆ ಭಾಜನವಾಗಿದ್ದರೂ ಹಿಂದಿನ ಹೆಸರಿನವರ ಆಸ್ತಿಯನ್ನು ಪಡೆಯಲು ಅರ್ಹರಾಗುತ್ತಾರೆ. ಅದು ಮರಣ, ಇತ್ಯಾದಿಗಳಿಂದ ಸಂಭವಿಸುವ ಬದಲಾವಣೆ. ಮೃತ ಬ್ರಾಹ್ಮಣನೊಬ್ಬನ ಆಸ್ತಿಗೆ ಉತ್ತರಾಧಿಕಾರ ಉಳ್ಳವರು ಯಾರೂ ಇಲ್ಲದಿದ್ದರೆ ಅದು ವೇದ ವಿದ್ವಾಂಸರಾದ ಆಚಾರವಂತ ಬ್ರಾಹ್ಮಣರಿಗೆ ಸೇರುತ್ತದೆ; ಆ ಬ್ರಾಹ್ಮಣನು ಮೃತನ ಶ್ರಾದ್ಧಾದಿಗಳನ್ನು ನೆರವೇರಿಸುತ್ತಿರುತ್ತಾನೆ. ಅಂತಹ ಆಸ್ತಿಯನ್ನು ರಾಜನು ತನ್ನದನ್ನಾಗಿ ಮಾಡಿಕೊಳ್ಳುವಂತಿಲ್ಲ. ಬೇರೆ ವರ್ಣದವರು ಮೃತರಾಗಿ ಅವರಿಗೆ ಉತ್ತರಾಧಿಕಾರ ಉಳ್ಳವರು ಇಲ್ಲದಿದ್ದರೆ ಅಂಥವರ ಆಸ್ತಿಯು ರಾಜನಿಗೆ ಸೇರುತ್ತದೆ (೯.೧೮೯ : ಅಹಾರ್ಯಂ ಬ್ರಾಹ್ಮಣದ್ರವ್ಯಂ ರಾಜ್ಞಾ ನಿತ್ಯಮಿತಿ ಸ್ಥಿತಿಃ। ಇತರೇಷಾಂ ತು ವರ್ಣಾನಾಂ ಸರ್ವಾಭಾವೇ ಹರೇತ್ ನೃಪಃ॥).

ವಿಧವಾ ವಿವಾಹವನ್ನು ಕುರಿತಂತೆ ವಿಭಿನ್ನ ಅಭಿಪ್ರಾಯಗಳನ್ನು ಪ್ರಕಟಿಸುವುದು ನಮ್ಮ ವಿದ್ವಾಂಸರಲ್ಲಿ ಕಂಡುಬರುತ್ತದೆ. ಅವರು ಯಾವ ಪುರಾವೆಗಳನ್ನಿರಿಸಿಕೊಂಡು ವಾದ ಹೂಡುತ್ತಾರೋ ತಿಳಿಯದು. ಋಗ್ವೇದದ ಕಾಲದಿಂದಲೂ ನಮ್ಮ ದೇಶದಲ್ಲಿ ವಿಧವಾ ವಿವಾಹವು ಚಾಲ್ತಿಯಲ್ಲಿತ್ತು. ಪ್ರಸ್ತುತ ಲೇಖಕನ 'ಋಗ್ವೇದ ಪ್ರವೇಶಿಕೆ' ಯಲ್ಲಿ ಅದನ್ನು ಪ್ರಸ್ತುತಪಡಿಸಲಾಗಿದೆ (ಅಧ್ಯಾಯ ೧೩). ಮನುಸ್ಮೃತಿಯ ಪುರಾವೆಯು ಏನಿಲ್ಲವೆಂದರೂ ಋಗ್ವೇದದ ಒಂದು ಸಾವಿರ ವರ್ಷಗಳ ನಂತರದ್ದು. ಅದು ಆಸ್ತಿ ವಿಭಜನೆಯ ವಿಚಾರದಲ್ಲಿ ಸಾಂದರ್ಭಿಕವಾಗಿ ಬಂದಿದೆಯಾದರೂ ಗಮನಾರ್ಹವಾದ ಅಂಶವೇ. ಒಬ್ಬಾಕೆಯ ಗಂಡನು ಮಗನನ್ನು

**ಬಾಷ್ಪಾಂಜಲಿ....**

ಎಂ.ಎ. (ಸಾಹಿತ್ಯ) ಪದವಿ ಮತ್ತು ದೆಹಲಿಯ ರಾಷ್ಟ್ರೀಯ ನಾಟಕ ಶಾಲೆಯಲ್ಲಿ ಡಿಪ್ಲೊಮಾ ಪಡೆದಿದ್ದ ಶ್ರೀಮತಿ ಎಸ್. ಮಾಲತಿಯವರು ನಟಿ, ನಿರ್ದೇಶಕಿ ಹಾಗೂ ನಾಟಕ ಕರ್ತೃವೂ ಆಗಿ ರಂಗಭೂಮಿಯಲ್ಲಿ ಖ್ಯಾತರಾಗಿದ್ದರು. ಚಲನಚಿತ್ರಗಳಲ್ಲೂ ನಟಿಸಿದ್ದರು. ೨೦೦೦ದ ಇಸವಿಯಿಂದ ಸಾಗರದಲ್ಲಿ ಅಂತರಂಗ ಟ್ರಸ್ಟ್ ಎಂಬ ರಂಗತಂಡವನ್ನು ಕಟ್ಟಿ ಅದರ ಮ್ಯಾನೇಜಿಂಗ್ ಟ್ರಸ್ಟಿಯೂ ಆಗಿದ್ದರು. ಇವರ ಹಲವಾರು ಕೃತಿಗಳು ಪ್ರಕಟವಾಗಿವೆ. ಮಾಲತಿಯವರ 'ಬುದ್ಧ ಹೇಳಿದ ಕತೆ', 'ದಲಿತ ಲೋಕ', 'ಭೀಮ ಕಥಾನಕ', 'ಗೀತಾಂಜಲಿ', 'ಸಪ್ನ ಸಾರಸ್ವತ', 'ಸೀತಾಚರಿತ', 'ಮೂರು ಮಕ್ಕಳ ನಾಟಕಗಳು', 'ಹೊಸದಿಕ್ಕು', 'ಗಾಂಧಿ ಒಂದು ಬೆಳಕು' ಮತ್ತು 'ಬಲರಾಜ್ ಸಾಹನಿ' ಎಂಬ ಕೃತಿಗಳನ್ನು ನವಕರ್ನಾಟಕ ಪ್ರಕಟಿಸಿದೆ. ಇಂತಹ ಬಹುಮುಖ ಪ್ರತಿಭೆಯ ಮಾಲತಿಯವರು ದಿನಾಂಕ ೩೧-೩-೨೦೧೯ರಂದು ನಮ್ಮನ್ನಗಲಿದ್ದಾರೆ. ದಿವಂಗತರಿಗೆ 'ನವಕರ್ನಾಟಕ' ಮತ್ತು 'ಹೊಸತು' ಬಳಗದ ಭಾವಪೂರ್ವಕ ನಮನಗಳು.

– ಸಂ

ನೀಡದೆ ಮೃತಪಟ್ಟರೆ ಅವನ ಹೆಂಡತಿಯು ಪತಿಯ ಗೋತ್ರದವನೇ ಆದ ಇನ್ನೊಬ್ಬ ಪುರುಷನಿಂದ ಮಗನನ್ನು ಪಡೆದು ತನ್ನ ಪತಿಯ ಆಸ್ತಿಯನ್ನೆಲ್ಲಾ ಆ ಮಗನಿಗೆ ಕೊಡಬೇಕು (೯.೧೯೦ : ಸಂಸ್ಥಿತಸ್ಯ ಅನಪತ್ಯಸ್ಯ ಸಗೋತ್ರಾತ್ ಪುತ್ರಂ ಆಹರೇತ್). ಇಲ್ಲಿ ಪುನರ್ವಿವಾಹ ಸಂಬಂಧವನ್ನು ಹೇಳಿಲ್ಲವಾದರೂ, ವಿವಾಹಿತಳಂತೆ ಆಕೆ ನಡೆದುಕೊಳ್ಳಬೇಕೆಂಬ ಸೂಚನೆ ಇದೆ. ಆದರೆ ಮುಂದಿನ ಶ್ಲೋಕದಲ್ಲಿ ಮರುವಿವಾಹವನ್ನು ಸ್ಪಷ್ಟವಾಗಿ ಹೇಳಲಾಗಿದೆ : "ಮಗನನ್ನು ನೀಡಿದ ನಂತರ ತನ್ನ ಗಂಡನು ಮೃತನಾದರೆ ಆ ಸ್ತ್ರೀಯು ಬೇರೊಬ್ಬನನ್ನು ವಿವಾಹವಾಗಿ ಅವನಿಂದಲೂ ಮಗುವನ್ನು ಪಡೆದು, ಆ ಎರಡನೆಯ ಪತಿಯೂ ಮೃತನಾದರೆ ಎರಡೂ ಮಕ್ಕಳಲ್ಲಿ ಆಸ್ತಿಗೆ ವಿವಾದ ಉಂಟಾದಾಗ ಆಕೆ ಅವರಿಬ್ಬರಿಗೂ ತಮ್ಮತಮ್ಮ ತಂದೆಯರ ಆಸ್ತಿಯನ್ನು ಮಾತ್ರ ಕೊಡಬೇಕು" (೯.೧೯೧). ಮನುಸ್ಮೃತಿಯನ್ನು ಯಾವಯಾವುದೋ ಸಂಗತಿಗಳಿಗೆ ತಪ್ಪುತಪ್ಪಾಗಿ ಉದ್ಧರಿಸುವುದು ವ್ಯಾಪಕವಾಗಿ ಕಂಡುಬರುತ್ತದೆ; ಉದಾಹರಣೆಗೆ, ಮಹಿಳೆಯ ಸ್ಥಾನಮಾನವನ್ನು ಕುರಿತಂತೆ. ವಿಧವಾ ವಿವಾಹದ ಬಗ್ಗೆ ಆ ಗ್ರಂಥದ ನಿರ್ದೇಶನವನ್ನೇಕೆ ನಮ್ಮ ವಿದ್ವಾಂಸರು ಉದ್ಧರಿಸುವುದಿಲ್ಲವೋ ತಿಳಿಯದು. ಈ ನಿರ್ದೇಶನವು ಬ್ರಾಹ್ಮಣ ವರ್ಣಕ್ಕೆ ಅನ್ವಯಿಸುವ ಮಾತೆಂಬುದು ಗ್ರಂಥದಲ್ಲಿ ಸ್ಪಷ್ಟವಾಗಿದೆ. ಮುಂದೆ ಬರುವ ಇನ್ನೊಂದು ಸೂಚನೆಯನ್ನು ಗಮನಿಸಬಹುದು : "ಬ್ರಾಹ್ಮಣನೊಬ್ಬನ ಅನೇಕ ವರ್ಣಗಳ ಪತ್ನಿಯರಲ್ಲಿ ಬ್ರಾಹ್ಮಣಿಯನ್ನು ಹೊರತುಪಡಿಸಿ ಉಳಿದ ವರ್ಣದ ಪತ್ನಿಯರು ಮಕ್ಕಳಿಲ್ಲದೆ ಮೃತರಾದರೆ ಅವರ ದ್ರವ್ಯವನ್ನು ಬ್ರಾಹ್ಮಣಿಯ ಮಗಳು ಅಥವಾ ಅವಳ ಮಕ್ಕಳು ಪಡೆಯತಕ್ಕದ್ದು. (ಅಂದರೆ, ಅದು ಬ್ರಾಹ್ಮಣೇತರ ಪತ್ನಿಯ ಮಕ್ಕಳಿಗೆ ಹೋಗಬಾರದು)! (೯.೧೯೮ : ಸ್ತ್ರಿಯಾಂ ತು ಯದ್ಭವೇತ್ ವಿತ್ತಂ ಪಿತ್ರಾ ದತ್ತಂ ಕಥಂಚನ। ಬ್ರಾಹ್ಮಣೀ ತದ್ಧರೇತ್ ಕನ್ಯಾ ತದಪತ್ಯಸ್ಯ ವಾ ಭವೇತ್ ॥)."

ಇನ್ನೊಂದು ನಿರ್ದೇಶನ ಸರ್ವಥಾ ಪ್ರಶ್ನಾರ್ಹವಾದ್ದು : "ನಪುಂಸಕ, ಪತಿತ (ಅಂದರೆ ಜಾತಿಭ್ರಷ್ಟ), ಹುಟ್ಟುಕುರುಡ, ಹುಟ್ಟುಕಿವುಡ, ಹುಚ್ಚ, ಹೆಡ್ಡ, ಮೂಕ ಹಾಗೂ ಅಂಗವಿಕಲ, ಇವರಿಗೆ ಆಸ್ತಿಯಲ್ಲಿ ಪಾಲು ಸಿಗಬಾರದು" (೯.೨೦೧). ಮಾನವೀಯತೆ ಇದ್ದರೆ ಅವರಿಗೆ ಪಾಲು ಕೊಟ್ಟು ಅದನ್ನು ಬೇರಾರೂ ಲಪಟಾಯಿಸದಂತೆ ಕ್ರಮ ಕೈಗೊಳ್ಳುವುದು 'ಧರ್ಮ' ಎನಿಸಿಕೊಳ್ಳಬೇಡವೆ? ಮನುಸ್ಮೃತಿಯ ಇನ್ನೂ ಹಲವಾರು ನಿರ್ದೇಶನಗಳು ಆಸ್ತಿಯ ಪಾಲುಗಾರಿಕೆಯನ್ನು ಕುರಿತವಾಗಿವೆ. ಅವುಗಳಲ್ಲಿ ಒಂದನ್ನು ಮಾತ್ರ ಗಮನಿಸಿ ನಿರ್ಗಮಿಸೋಣ : ವಸ್ತ್ರ, ವಾಹನ, ಆಭರಣ, ಅಡಿಗೆ, ನೀರು ಅಥವಾ ಜಲಾಶಯ, ದಾಸಿಯರು, ಪುರೋಹಿತರು ಮತ್ತು ಗೋಮಾಳ, ಇವುಗಳನ್ನು ಭಾಗ ಮಾಡಿಕೊಳ್ಳಬಾರದು (೯.೨೧೯), ಅವುಗಳಲ್ಲಿ ಜಲಾಶಯ ಮತ್ತು ಗೋಮಾಳ ವಿಶೇಷ ಗಮನ ಸೆಳೆಯುತ್ತವೆ. ಕೆರೆ-ಭಾವಿಗಳನ್ನು ಹಾಳುಮಾಡುವವರನ್ನು ನೀರಲ್ಲಿ ಮುಳುಗಿಸಿ ಕೊಲ್ಲಬೇಕು ಅಥವಾ ನೇರವಾಗಿ ವಧಿಸಬೇಕು ಎನ್ನುತ್ತದೆ ಮನುಸ್ಮೃತಿ (೯.೨೭೯ : ತಡಾಗಭೇದಕಂ ಹನ್ಯಾದಪ್ಸು ಶುದ್ಧವಧೇನ ವಾ). ಇದನ್ನು ಬೇಕಾದರೆ ನಮ್ಮ ಸಂವಿಧಾನದಲ್ಲಿ ಅಳವಡಿಸಿಕೊಳ್ಳಬಹುದೇನೊ!

ಉಳಿದಂತೆ ಒಂಬತ್ತನೆ ಅಧ್ಯಾಯದಲ್ಲಿ ಜೂಜಾಟದ ರೀತಿನೀತಿಗಳು, ಜೂಜಾಟಕ್ಕೆ ಶಿಕ್ಷೆ, ಕಳ್ಳನನ್ನು ಹಿಡಿದು ಶಿಕ್ಷಿಸುವುದು, ರಾಜಮಾರ್ಗದಲ್ಲಿ ಮಲ ವಿಸರ್ಜನೆ ಮಾಡಿದರೆ ದಂಡ, ಕಲಬೆರಕೆ ಪದಾರ್ಥಗಳನ್ನು ಮಾರಿದರೆ ಶಿಕ್ಷೆ, ರಾಜ್ಯದ ಅಂಗಗಳಾದ ರಾಜ, ಮಂತ್ರಿ, ಪುರ, ರಾಷ್ಟ್ರ, ಕೋಶ, ಸೇನೆ, ಮಿತ್ರಬಲ, ಮುಂತಾದವುಗಳ ಶ್ರೇಷ್ಠತೆ, ಇತ್ಯಾದಿ ವಿಷಯಗಳು ಪ್ರಸ್ತಾಪಿತವಾಗಿವೆ. ರಾಜಮಾರ್ಗದಲ್ಲಿ ರೋಗಿಷ್ಠರಲ್ಲದಂತಹವರು ಯಾರಾದರೂ ಮಲ ವಿಸರ್ಜನೆ ಮಾಡಿದರೆ ಅಂಥವರಿಗೆ ಎರಡು ಪಣಗಳ ದಂಡ ವಿಧಿಸಿ ಆ ಮಲವನ್ನು ಅವರಿಂದಲೇ ತೆಗೆಸಬೇಕು, ಎನ್ನುತ್ತದೆ ಮನುಸ್ಮೃತಿ (೯.೨೮೨). ರಾಜಮಾರ್ಗದಲ್ಲಿ ಸಹ ಮಲ-ಮೂತ್ರ ವಿಸರ್ಜನೆ ಮಾಡುವುದು ನಮ್ಮ ದೇಶದ ಪ್ರಾಚೀನ ಸಂಪ್ರದಾಯವಿರಬೇಕು. ಡಾ॥ ಎಚ್. ನರಸಿಂಹಯ್ಯನವರು ತಪ್ಪದೆ ಹಾರಿಸುತ್ತಿದ್ದ ಒಂದು ನಗೆಚಟಾಕಿ ನೆನಪಿಗೆ ಬರುತ್ತದೆ : ಸೋವಿಯೆತ್ ಒಕ್ಕೂಟದ ಪ್ರಧಾನಿ ಕ್ರುಶ್ಚೇವ್ ಭಾರತಕ್ಕೊಮ್ಮೆ ಭೇಟಿಯಿತ್ತಿದ್ದಾಗ ಪ್ರಧಾನಿ ನೆಹರು ಅವರೊಡನೆ ದೆಹಲಿಯಲ್ಲೆಲ್ಲೋ ಪ್ರಯಾಣಿಸುತ್ತಿದ್ದನಂತೆ. ಒಂದೆಡೆ ನಾಗರಿಕನೊಬ್ಬ ಹಾದಿಯಲ್ಲೇ ಮೂತ್ರ ವಿಸರ್ಜನೆ ಮಾಡುತ್ತಿದ್ದುದನ್ನು ಕಂಡ ನೆಹರೂಗೆ ಸ್ವಲ್ಪ ಕಸಿವಿಸಿಯಾಯಿತಂತೆ. ಅದನ್ನು ಗಮನಿಸಿದ ಕ್ರುಶ್ಚೇವ್ ಹೇಳಿದನಂತೆ, "ನಮ್ಮ ದೇಶದಲ್ಲಿ ಯಾರಾದರೂ ಹಾಗೆ ಮಾಡಿದರೆ ಅವರ ತಲೆ ತೆಗೆಯುತ್ತೇವೆ" ಎಂದು. ಮಾರನೆಯ ವರ್ಷದ ಭೇಟಿಯಲ್ಲಿ ನೆಹರು ಮಾಸ್ಕೋದಲ್ಲಿ ಕ್ರುಶ್ಚೇವ್ ಜೊತೆ ಪ್ರಯಾಣಿಸುತ್ತಿದ್ದರಂತೆ. ಅಲ್ಲೂ ರಾಜಮಾರ್ಗದಲ್ಲಿ ಅದೇ ವಿದ್ಯಮಾನ ಕಂಡು ಮುಸಿಮುಸಿ ನಕ್ಕರಂತೆ. ವಿಚಲಿತನಾಗದೆ ಕ್ರುಶ್ಚೇವ್ ಹೇಳಿದನಂತೆ, "ಹೌದು, ಅವನ ತಲೆ ತೆಗೆಯಬೇಕು; ಆದರೆ ಹಾಗೆ ಮಾಡಲಾಗದು, ಏಕೆಂದರೆ ಆತನಿಗೆ ರಾಯಭಾರ ರಕ್ಷಣೆ ಇದೆ" ಎಂದು; ಅಂದರೆ, "ಅವನು ನಿಮ್ಮ ರಾಯಭಾರ ಕಚೇರಿಯವನೇ ಆಗಿರುತ್ತಾನೆ" ಎಂಬ ಸೂಚನೆ.

ಒಂಭತ್ತನೆಯ ಅಧ್ಯಾಯವು ಮುಕ್ತಾಯವಾಗುವ ಮುನ್ನ ಮನುಸ್ಮೃತಿಯು ಮತ್ತೆ ಬ್ರಾಹ್ಮಣರ ಸ್ಥಾನಮಾನ ಹಾಗೂ ವೈಶ್ಯ-ಶೂದ್ರರ ಕರ್ತವ್ಯಗಳನ್ನು ಪ್ರತಿಪಾದಿಸುತ್ತದೆ. ಅದು ಹೇಗಿದ್ದರೂ ಈ ಗ್ರಂಥದ ಪ್ರಾಣಾಧಾರವಲ್ಲವೆ ! ಆದ್ದರಿಂದ ಅದನ್ನು ತಪ್ಪದೆ ಪುನರುಚ್ಚರಿಸುತ್ತಿರಬೇಕು : "ರಾಜನಿಗೆ ಎಷ್ಟೇ ಆಪತ್ತು ಸಂಭವಿಸಿದರೂ ಅವನು ಬ್ರಾಹ್ಮಣರ ಮೇಲೆ ಕೋಪಗೊಳ್ಳಬಾರದು; ಅವರೇನಾದರೂ ಕೋಪಿಷ್ಠರಾಗಿ ಶಾಪವನ್ನಿತ್ತರೆ ರಾಜನ ಸರ್ವಸ್ವವೂ ನಾಶವಾಗುತ್ತದೆ" (೯.೩೧೩). ಅಬ್ಬಬ್ಬಾ, ಬ್ರಾಹ್ಮಣರ ಶಕ್ತಿಯೇ, ಎನಿಸುತ್ತದೆ : "ಸಿಟ್ಟಿಗೆದ್ದರೆ ಬ್ರಾಹ್ಮಣರು ಹೊಸ ಲೋಕಗಳನ್ನೇ ಸೃಷ್ಟಿಸಬಲ್ಲರು, ಹೊಸ ಲೋಕಪಾಲರನ್ನು ನೇಮಿಸಬಲ್ಲರು, ದೇವತೆಗಳ ದೈವತ್ವವನ್ನೇ ಅಳಿಸಿಹಾಕಬಲ್ಲರು. ಅಂತಹ ಬ್ರಾಹ್ಮಣರನ್ನು ಕ್ರುದ್ಧರನ್ನಾಗಿಸಿ ರಾಜನು ಸಮೃದ್ಧಿ ಹೊಂದಬಲ್ಲನೆ?" (೯.೩೧೫ : ಲೋಕಾನ್ ಅನ್ಯಾನ್ ಸೃಜೇಯುರ್ಯೇ ಲೋಕಪಾಲಾಂಶ್ಚ ಕೋಪಿತಾಃ। ದೇವಾನ್ ಕುರ್ಯುರದೇವಾಂಶ್ಚ ಕಃ ಕ್ಷಿಣ್ವನ್ ತಾನ್ ಸಮೃಧ್ನುಯಾತ್ ॥). ಯಾವುದಾದರೂ ವರ್ಣಕ್ಕೆ ಇಡಿಯಾಗಿ ಜೀವವಿಮೆ ಮಾಡಿಸಿದ್ದುದಿದ್ದರೆ ಅದು ಪ್ರಾಚೀನ ಭಾರತದ ಬ್ರಾಹ್ಮಣ ವರ್ಣದವರಿಗೆ ಮಾತ್ರ ಎನಿಸುತ್ತದೆ! ಅದಕ್ಕೆ ವಿರುದ್ಧದ ಧ್ರುವದಲ್ಲಿ ವೈಶ್ಯ – ಶೂದ್ರರಿದ್ದಾರೆ : ವೈಶ್ಯನು ಉಪನಯನಾದಿ ಸಂಸ್ಕಾರಗಳಿಗೆ ಅರ್ಹ. ಯುಕ್ತ ಸಮಯದಲ್ಲಿ ವಿವಾಹಿತನಾಗಿ ವ್ಯಾಪಾರ, ಕೃಷಿ, ಪಶುಪಾಲನೆ, ಇತ್ಯಾದಿಗಳಲ್ಲಿ ಅವನು ತೊಡಗಬಹುದು; ಅವನು ಬೇರೆಯವರನ್ನು ಪಶುಪಾಲನೆಗೆ ಹಚ್ಚಬಾರದು. ಮುತ್ತು, ರತ್ನ, ಹವಳ, ಲೋಹ, ಇತ್ಯಾದಿಗಳ ಬೆಲೆ, ಗುಣಮಟ್ಟ, ಅವನಿಗೆ ತಿಳಿದಿರಬೇಕು. ಬೀಜಗಳ ಬಿತ್ತುವಿಕೆ, ಕೃಷಿ ಭೂಮಿಯ ಗುಣ-ದೋಷಗಳು, ತೂಕ-ಅಳತೆಯ

ಮಾನಕಗಳು, ತಕ್ಕಡಿ–ಕಲ್ಲುಗಳ ಉಪಯೋಗ, ಎಲ್ಲಾ ಅವನಿಗೆ ಕರಗತವಾಗಿರಬೇಕು. ಸರ್ವ ಜೀವಜಾತಗಳಿಗೂ ಅನ್ನದಾನ ಮಾಡುವುದು ಅವನ ಶ್ರೇಷ್ಠ ಕಾರ್ಯ (೯.೩೨೫–೩೩೪). ಇನ್ನುಳಿದವರು ಶೂದ್ರರು : ಅವನು ಶುದ್ಧನಾಗಿರಬೇಕು, ಉತ್ತಮ ವರ್ಣದವರಿಗೆ ಸೇವೆ ಸಲ್ಲಿಸಬೇಕು, ಮೃದುವಾಗಿ ಮಾತನಾಡಬೇಕು, ಅಹಂಕಾರಿಯಾಗಿರಬಾರದು; ಬ್ರಾಹ್ಮಣಾದಿ ವರ್ಣದವರನ್ನು ಆಶ್ರಯಿಸಿ ಅವರ ಸೇವೆ ಮಾಡುತ್ತಿದ್ದರೆ ಅವನಿಗೆ ಮುಂದೊಂದು ದಿನ ಉತ್ತಮ ಜನ್ಮವು ಪ್ರಾಪ್ತವಾಗುತ್ತದೆ (ಶುಚಿರುತ್ಕೃಷ್ಟ ಶುಶ್ರೂಷುರ್ಮೃದುವಾಕ್ ಅನಹಂಕೃತಃ। ಬ್ರಾಹ್ಮಣಾದ್ಯಾಶ್ರ ಯೋ ನಿತ್ಯಂ ಉತ್ಕೃಷ್ಟಾಂ ಜಾತಿಮಶ್ನುತೇ ॥ – ೯.೩೩೫). ಶೂದ್ರನ ಮುಂದಿನ ಉತ್ಕೃಷ್ಟ ಜನ್ಮಕ್ಕೂ ಬ್ರಾಹ್ಮಣನ ಇಂದಿನ ಉತ್ಕರ್ಷ ಜೀವನಕ್ಕೂ ಎಂತಹ ಅವಿನಾಭಾವ ಸಂಬಂಧದ ಕಲ್ಪನೆ !!

ಮುಂದಿನ, ಅಂದರೆ ಹತ್ತನೆಯ, ಅಧ್ಯಾಯವು ವಿಶೇಷವಾಗಿ ಆಪದ್ಧರ್ಮವನ್ನು ವಿಷಯವನ್ನಾಗಿ ಹೊಂದಿದೆ. ಅಂದರೆ, ಈವರೆಗೆ ಹೇಳಲಾಗಿರುವ ವಿಧಿ–ವಿಧಾನಗಳನ್ನು ಯಾವುದಾದರೂ ಮುಗ್ಗಟ್ಟಿನಿಂದಾಗಿ ಆಚರಿಸಲಾಗದಿದ್ದಾಗ ಕ್ರಿಯೆಯು 'ಅಧರ್ಮ'ವಾಗಿಬಿಡುತ್ತದೆಂಬ ಆತಂಕವಿಲ್ಲದೆ ಎಸಗಬಹುದಾದ ಕರ್ಮಗಳು, ಎಂದರ್ಥ. ಆಪತ್ಕಾಲದಲ್ಲಿ ವಿಧೇಯಕಗಳನ್ನು ಮೀರಿ ನಡೆಯುವುದು ಧರ್ಮಕ್ಕೆ ಚ್ಯುತಿಯುಂಟುಮಾಡುವುದಿಲ್ಲ; ಅದು ಅನಿವಾರ್ಯತೆಯ ಪರಿಣಾಮವಾದ್ದರಿಂದ ಕ್ಷಮಾರ್ಹ. ಸಾಮಾನ್ಯ ರೀತಿ–ನೀತಿಗಳೆಂದರೆ ಬ್ರಾಹ್ಮಣನು ವೇದಾಧ್ಯಯನ ಮಾಡುವುದು, ವೇದ ಕಲಿಸುವುದು, ಎಲ್ಲರ ವೃತ್ತಿಗಳನ್ನೂ ಶಾಸ್ತ್ರೋಕ್ತವಾಗಿ ತಿಳಿದು ಉಪದೇಶಿಸುವುದು, ತಾನು ಶಾಸ್ತ್ರ ಧರ್ಮದಂತೆ ನಡೆದುಕೊಳ್ಳುವುದು, ಇತ್ಯಾದಿ. ಏಕೆಂದರೆ, ಅವನು ಇತರ ವರ್ಣದವರಿಗೆ ಪ್ರಭು, ಜನ್ಮದಿಂದಲೇ ಶ್ರೇಷ್ಠ, ವಿಶೇಷ ಸಂಸ್ಕಾರಗಳನ್ನು ಪಡೆದವನು (೧೦.೩: ವೈಶೇಷ್ಯಾತ್ ಪ್ರಕೃತಿ ಶ್ರೈಷ್ಠ್ಯಾತ್ ನಿಯಮಸ್ಯ ಚ ಧಾರಣಾತ್। ಸಂಸ್ಕಾರಸ್ಯ ವಿಶೇಷಾಚ್ಚ ವರ್ಣಾನಾಂ ಬ್ರಾಹ್ಮಣಃ ಪ್ರಭುಃ॥). ನಮ್ಮ ಮಧ್ಯದಲ್ಲಿರುವ ಕೆಲವು ಮಹಾತ್ಮರು ಇದನ್ನು ದೇಶದ ಸಂವಿಧಾನದಲ್ಲಿ ಬರೆದುಕೊಳ್ಳಲು ಉತ್ಸುಕರಾಗುವುದು ಆಶ್ಚರ್ಯಕರವಲ್ಲ; ಇತರರಿಗಿಲ್ಲದ ಸ್ಥಾನದಲ್ಲಿ ತಾವು ವಿಜೃಂಭಿಸುವುದು ಅವರಿಗೆ ಆಪ್ಯಾಯಮಾನವೆನಿಸುತ್ತದೇನೋ! ಜನ್ಮದಿಂದಲೇ ಶ್ರೇಷ್ಠರಾದವರು ಏನು ಮಾಡಿದರೆ ತಾನೆ ಅಹಿತಕರ ಮತ್ತು ಅಸಹ್ಯಕರವಾದೀತು !! ಇಲ್ಲಿ ಒಂದು ಪದ್ಯವಿದೆ : ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ತ್ರಯೋ ವರ್ಣಾ ದ್ವಿಜಾತಯಃ। ಚತುರ್ಥ ಏಕಜಾತಿಸ್ತು ಶೂದ್ರೋ ನಾಸ್ತಿ ತು ಪಂಚಮಃ॥ (೧೦.೪). ಮೂರು ದ್ವಿಜವರ್ಣಗಳು ಮತ್ತು ಒಂದು ಏಕವರ್ಣ. ಇವನ್ನು ಬಿಟ್ಟು ಐದನೆಯ ವರ್ಣವಿಲ್ಲ. ಇದನ್ನು ಕೆಲವು 'ಸಂಶೋಧಕರು' ಮನುವು ಪಂಚಮರನ್ನು ಅಥವಾ ಅಸ್ಪೃಶ್ಯರನ್ನು ಗುರುತಿಸುವುದಿಲ್ಲವಾದ್ದರಿಂದ ಮನುಸ್ಮೃತಿಯ ಕಾಲದಲ್ಲಿ ಅಸ್ಪೃಶ್ಯತೆ ಜಾರಿಯಲ್ಲಿರಲಿಲ್ಲವೆಂದು ಸಮರ್ಥಿಸಲು ಉದ್ಧರಿಸುವುದುಂಟು. ಪಂಚಮ ವರ್ಣದವರಿಲ್ಲ ಎನ್ನುವುದೇ ಬೇರೆ, ಪಂಚಮರಿಲ್ಲ ಎನ್ನುವುದೇ ಬೇರೆ. ಅವರು ವರ್ಣಗಳಿಗೆ ಸೇರದವರು. ಅಸ್ಪೃಶ್ಯತೆ ಇತಿಹಾಸದ ಯಾವ ಹಂತದಲ್ಲಿ ಒಂದು ಅಸಹ್ಯ ಪದ್ಧತಿಯಾಗಿ ಹುಟ್ಟಿಕೊಂಡಿತೆನ್ನುವುದಕ್ಕೆ ವಿವಿಧ ವ್ಯಾಖ್ಯಾನಗಳನ್ನು ನೀಡಲಾಗಿದೆ. ಮನುಸ್ಮೃತಿಯು ಅವರನ್ನು ಕುರಿತು ಪ್ರಸ್ತಾಪ ಮಾಡಿದ್ದಂತೆ ತೋರುವುದಿಲ್ಲ. ಈ ಸಂದರ್ಭದಲ್ಲಿ ಮನುಸ್ಮೃತಿಯ ರಚನೆಯಲ್ಲಿನ ದ್ವಂದ್ವಗಳು ಹಾಗೂ ಅದರ ಕಾಲವನ್ನು ಸ್ವಲ್ಪ ಪರಿಶೀಲಿಸುವುದು ಅನುಚಿತವಲ್ಲ.

"ಯಾವುದೋ ಕಾಲದ ಆಚರಣೆಗೆ ಸದಾ ಅಂಟಿಕೊಂಡಿರಬೇಕಾಗಿಲ್ಲ; ಒಂದು ಕಾಲದಲ್ಲಿ ಧರ್ಮವಾಗಿದ್ದುದು ಅಸುಖಕ್ಕೆ ಒಯ್ಯುವಂತಿದ್ದರೆ ಅಥವಾ ಜನಕ್ಕೆ ಉಪದ್ರವ ನೀಡುವಂತಿದ್ದರೆ ಅದರ ಕೈಬಿಡಬೇಕು" (೪.೧೭೬: ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪಿ ಆಚರೇನ್ನ ತು) ಎನ್ನುತ್ತದೆ ಮನುಸ್ಮೃತಿ. ತನ್ನ ನಿರ್ದೇಶನಗಳು ಅಂಥವಲ್ಲವೆಂದು ಗ್ರಂಥವು ಭಾವಿಸಿಕೊಂಡಂತಿದೆ. ನಾವಿಂದು ಅದನ್ನು ನಿರಾಕರಿಸಿದರೆ ಮನುಸ್ಮೃತಿಯ ನಿರ್ದೇಶನವನ್ನು ಪಾಲಿಸಿದಂತೆಯೇ ಸರಿ. ಏಕೆಂದರೆ, ಗ್ರಂಥದ ಅನೇಕ ಭಾಗಗಳು ಇಂದಿನ ಸಾಮಾಜಿಕ ಪ್ರಜ್ಞೆಗೆ ವಿರುದ್ಧವಾಗಿವೆ. ಗ್ರಂಥದಲ್ಲಿ ಒಂದು ಭಾಗವು ಇನ್ನೊಂದನ್ನು ವಿರೋಧಿಸುವಂತಹ ಸಂದರ್ಭಗಳೂ ಉಂಟು. "ಯಾವ ಜಾತಿಯ ಹೆಣ್ಣನ್ನಾದರೂ ಮದುವೆಯಾಗಬಹುದು" (೩.೧೨) ಎಂದು ಹೇಳಿದ ಗ್ರಂಥವು ಎರಡು ಶ್ಲೋಕಗಳ ನಂತರ ಅದು ಕೂಡದು ಎನ್ನುತ್ತದೆ (೩.೧೪ ಮತ್ತು ೧೯). "ನಿಯೋಗ ಧರ್ಮಾನುಸಾರವಾಗಿ ಅಣ್ಣನು ತಮ್ಮನ ಹೆಂಡತಿಯೊಡನೆ ಅಥವಾ ತಮ್ಮನು ಅಣ್ಣನ ಹೆಂಡತಿಯೊಡನೆ ಸಂಸರ್ಗ ಮಾಡಿದರೆ ಇಬ್ಬರೂ ಪಾಪಭಾಜನರಾಗುತ್ತಾರೆ" (೯.೫೮) ಎನ್ನುವ ಗ್ರಂಥವು ಮುಂದಿನ ಶ್ಲೋಕದಲ್ಲಿ (೯.೫೯) "ಕೆಲವು ನಿಯಮಗಳಿಗನುಸಾರವಾಗಿ ತನ್ನ ಮೈದುನನಿಂದ ಸಂತಾನವನ್ನು ಪಡೆಯಬೇಕು" (೯.೫೯) ಎನ್ನುತ್ತದೆ. ಋಗ್ವೇದವು ನಿಯೋಗವನ್ನು ಮಾನ್ಯ ಮಾಡುತ್ತದೆ (೧೦.೪೦.೨ : ಕೋ ವಾಂ ಶಯುತ್ರಾ ವಿಧವೇವ ದೇವರಂ). "ವೇದಸ್ಥ ವಿವಾಹ ಮಂತ್ರಗಳಲ್ಲಿ ನಿಯೋಗವನ್ನು ಎಲ್ಲಿಯೂ ಸಮ್ಮತಿಸಿಲ್ಲ" ಎನ್ನುತ್ತದೆ ಮನುಸ್ಮೃತಿ (೯.೬೫). ಅದು ನಿಜವಿರಬಹುದು, ಆದರೆ ಪಿತೃಸೂಕ್ತಗಳಲ್ಲಿ ಅದನ್ನು ಮಾನ್ಯ ಮಾಡಲಾಗಿದೆ. ಸಮಸ್ಯೆ ಏನೆಂದರೆ ನಮ್ಮಲ್ಲಿ ಮೂರು ಮನುಗಳಿದ್ದಾರೆ : ಸ್ವಾಯಂಭುವ, ಪ್ರಾಚೇತಸ ಮತ್ತು ಮನುಸ್ಮೃತಿಯ ಮನು. ಎಂತೆಂತಹ ಮಾಂಸವನ್ನು ತಿನ್ನಬಹುದೆಂದು ಮನುಸ್ಮೃತಿ ಹೇಳುತ್ತದೆ (೫.೨೬–೫೬); ಅದರ ಮಧ್ಯೆ ಮಧುಪರ್ಕ, ಯಜ್ಞ, ಶ್ರಾದ್ಧ, ಇವುಗಳ ಸಂದರ್ಭದಲ್ಲಲ್ಲದೆ ಮಾಂಸವು ವರ್ಜ್ಯ ಎಂದೂ ಹೇಳುತ್ತದೆ (೫.೪೧). ಕಡೆಯ ಈ ಮಾತನ್ನು "ಮನು ಹೇಳಿರುವನು" ಎಂದು ಮುಕ್ತಾಯ ಮಾಡಲಾಗಿದೆ. ಯಾವ ಮನು ಏನು ಹೇಳಿದನೋ ಎಂಬ ಸಂಶಯ ಮತ್ತು ಕುತೂಹಲ ಸಹಜವಾಗಿದೆ. ಒಟ್ಟಿನಲ್ಲಿ ಹೇಳುವುದಾದರೆ, ವಿವಿಧ ಕಾಲಘಟ್ಟಗಳ ಆಚರಣೆಗಳನ್ನು ಅಥವಾ ನಿಬಂಧನೆಗಳನ್ನು ಎಚ್ಚರ ತಪ್ಪಿ ಕಲಸು ಮೇಲೋಗರ ಮಾಡಲಾಗಿರುವುದನ್ನು ಮನುಸ್ಮೃತಿಯಲ್ಲಿ ಕಾಣುತ್ತೇವೆ.

ಮನುಸ್ಮೃತಿಯ ವ್ಯಾಖ್ಯಾನಕಾರ ಮೇಧಾತಿಥಿ ಸುಮಾರು ಕ್ರಿ.ಶ. ಹತ್ತನೆಯ ಶತಮಾನದ ಆದಿಭಾಗದವನು. ಈಗ ನಮ್ಮ ಮುಂದಿರುವ ಗ್ರಂಥವು ಅವನಿಗಿಂತಲೂ ಎಷ್ಟೋ ಮುಂಚಿನದು. ಅವನಿಗಿಂತಲೂ ಹಿಂದಿನ ಗ್ರಂಥಗಳಲ್ಲಿ ಮನುಸ್ಮೃತಿಯಿಂದ ಉದ್ಧರಿಸಲಾಗಿರುವ ಭಾಗಗಳಿವೆ; ಉದಾಹರಣೆಗೆ ಯಾಜ್ಞವಲ್ಕ್ಯ ಸ್ಮೃತಿ. ಶಂಕರನ ಬ್ರಹ್ಮಸೂತ್ರ ಭಾಷ್ಯದಲ್ಲಿ ಮನುವಿನ ವಾಕ್ಯಗಳನ್ನು ಉದ್ಧರಿಸಲಾಗಿದೆ. ಕುಮಾರಿಲನ 'ತಂತ್ರವಾತಿಕೆ'ಯಲ್ಲಿಯೂ ಅಂತಹ ಉದ್ಧರಣೆಗಳಿವೆ. ಶೂದ್ರಕನ 'ಮೃಚ್ಛಕಟಿಕಾ' ನಾಟಕದಲ್ಲಿ 'ಬ್ರಾಹ್ಮಣನನ್ನು ಕೊಲ್ಲಬಾರದು, ಅವನನ್ನು ದೇಶಭ್ರಷ್ಟನನ್ನಾಗಿಸಬೇಕು' ಎಂಬ ಮನುವಾಕ್ಯವನ್ನು (೮.೩೮೦) ಉದ್ಧರಿಸಲಾಗಿದೆ. ಜೈಮಿನಿಯ ಪೂರ್ವಮೀಮಾಂಸಾ ಸೂತ್ರದ ಭಾಷ್ಯಕಾರ ಶಬರಸ್ವಾಮಿನ್ ಕ್ರಿ.ಶ. ೫೦೦ರ ಸುಮಾರಿನವನು. "ಉಪದಿಷ್ಟವಂತಶ್ಚ ಮನ್ವಾದಯಃ" (೧.೧.೨) ಎನ್ನುತ್ತಾನವನು. ಅಂದರೆ, ಮನ್ವಾದಿಗಳು ಉಪದೇಶಿಸಿದ್ದಾರೆ, ಎಂದು, ಪತಂಜಲಿಯ ಮಹಾಭಾಷ್ಯದಲ್ಲಿ (ಸುಮಾರು ಕ್ರಿ.ಶ. ೨೦೦) ಮನುವಿನ ಶ್ಲೋಕ (೨.೧೨೦) ಉದ್ಧೃತವಾಗಿದೆ. ಆದ್ದರಿಂದ ಮನುಸ್ಮೃತಿ ಕಡೇಪಕ್ಷ ಕ್ರಿ.ಶ. ೨೦೦ಕ್ಕಿಂತಲೂ ಮುಂಚಿನದು. ಅದೇ ಗ್ರಂಥವು ಕಾಂಬೋಜ, ಯವನ, ಶಕ, ಪೌಂಡ್ರಕ, ಚೀನ, ದರದ, ಮುಂತಾದ 'ಕ್ಷತ್ರಿಯ ಜಾತಿ'ಗಳನ್ನು ಹೆಸರಿಸಿದೆ (೧೦.೪೪); ಅಶೋಕನ ಶಾಸನಗಳು ಸಹ ಯವನ, ಕಾಂಬೋಜ ಮತ್ತು ಗಾಂಧಾರರನ್ನು ಹೆಸರಿಸಿದೆ. ಆದ್ದರಿಂದ ಮನುಸ್ಮೃತಿಯು ಕ್ರಿ.ಪೂ. ೩೨೦ಕ್ಕಿಂತಲೂ ಮುಂಚಿನದಲ್ಲ. ಅಂದರೆ ಅದು ಕ್ರಿ.ಪೂ. ೨೦೦ರಿಂದ ಕ್ರಿ.ಶ. ೨೦೦ರ ನಡುವೆ ರಚಿತವಾದ ಗ್ರಂಥ, ಬಹುಶಃ ಆ ಕಾಲದ ಆಚರಣೆಗಳನ್ನು ಕ್ರೋಢೀಕರಿಸಿರುವ ಗ್ರಂಥ.

ಮನುಸ್ಮೃತಿಯ ೧೦ನೆಯ ಅಧ್ಯಾಯವು ಅನೇಕ ವಿಧದ ಜನಸಮುದಾಯಗಳನ್ನು ಉಲ್ಲೇಖಿಸುತ್ತದೆ. ಉದಾಹರಣೆಗೆ ಅಂಬಷ್ಠರು, ನಿಷಾದರು, ಸೂತರು, ಮಾಗಧರು, ವೈದೇಹರು, ಆಯೋಗರು, ಚಂಡಾಲರು, ಇತ್ಯಾದಿ. 'ಇತ್ಯಾದಿ'ಗಳಲ್ಲಿ ಶ್ವಪಾಕರು ಮತ್ತು ವ್ರಾತ್ಯರು ಸೇರಿದ್ದಾರೆ. ಚರಕ ಸಂಹಿತೆಯು ಅಂಬಷ್ಠರ ಬಗ್ಗೆ ಶ್ಲಾಘನೆಯ ಧೋರಣೆಯನ್ನಿರಿಸಿಕೊಂಡಿದೆ; ಅವರು ವೈದ್ಯಕೀಯ ವಿಜ್ಞಾನಕ್ಕೆ ಅಪಾರ ಕೊಡುಗೆಯನ್ನಿತ್ತಿದ್ದಾರೆಂಬ ಕಾರಣಕ್ಕೆ. ಇವರ ಹೆಸರುಗಳನ್ನು ನೋಡಿದರೆ ಅವರಲ್ಲಿ ಕೆಲವರು ಬುಡಕಟ್ಟು ಜನರೆಂದು ತೋರುತ್ತದೆ; ಇನ್ನು ಕೆಲವು ಪ್ರಾದೇಶಿಕ ಹೆಸರುಗಳು ಇವೆ. ಮನುಸ್ಮೃತಿಯು ಅವರನ್ನು ಹಾಗೆ ಪರಿಗಣಿಸದೆ ವರ್ಣಸಂಕರದಿಂದ ಅವರನ್ನು ಗುರುತಿಸುತ್ತದೆ. ಉದಾಹರಣೆಗೆ, ಬ್ರಾಹ್ಮಣ ಗಂಡು ಮತ್ತು ವೈಶ್ಯ ಹೆಣ್ಣಿನ ಸಂತಾನ ಅಂಬಷ್ಠರು; ಬ್ರಾಹ್ಮಣ ಮತ್ತು ಶೂದ್ರ ಸಂತಾನ ನಿಷಾದರು, ಶೂದ್ರ ಮತ್ತು ಬ್ರಾಹ್ಮಣ ಸಂತಾನ ಚಂಡಾಲರು,



ನಮಗೊ ಆನ್‌ಲೈನ್‌ನಲ್ಲಿಯೇ ತಿಳಿಸಿದರೆ ಶಾಲೆಗೆ ಹೋಗುವುದು ತಪ್ಪುತ್ತದೆ.

ಇತ್ಯಾದಿ (೧೦.೮–೨೩). ಮಾನವಶಾಸ್ತ್ರದ ಹಿನ್ನೆಲೆಯಲ್ಲಿ ನೋಡಬೇಕಾದ್ದನ್ನು ಮನು ವರ್ಣಸಂಕರದ ನೆಲೆಯಲ್ಲಿ ವ್ಯಾಖ್ಯಾನಿಸಿದ್ದಾನೆ. ಅವನಿಗೆ ಅನುಲೋಮ ಮತ್ತು ಪ್ರತಿಲೋಮ ವಿವಾಹಗಳ ಸೆಳೆತ ಜಾಸ್ತಿಯಾದ್ದರಿಂದ ಅಂತಹ ವಿವಾಹಗಳಿಂದ ಜನಿಸಿದವರನ್ನು ವರ್ಣ ವಿಂಗಡನೆಯಲ್ಲಿ ಎಲ್ಲಿಗೆ ಸೇರಿಸಬೇಕೆಂಬುದಷ್ಟೇ ತವಕ. ಗಂಡಿನ ವರ್ಣಕ್ಕಿಂತಲೂ 'ಕೆಳಗಿನ' ವರ್ಣದ ಸ್ತ್ರೀಯ ಜೊತೆ ವಿವಾಹವಾದರೆ ಅದು ಅನುಲೋಮ; ಅದೇ 'ಕೆಳಗಿನ' ವರ್ಣದ ಪುರುಷನು 'ಉಚ್ಚವರ್ಣ'ದ ಸ್ತ್ರೀಯನ್ನು ಮದುವೆಯಾದರೆ ಅದು ಪ್ರತಿಲೋಮ. ಹೀಗೆ ವರ್ಣ ಸಂಕರದಿಂದ ಜನಿಸಿದವರ ಕರ್ಮಾಚರಣೆಗಳನ್ನು ಮನು ಪಟ್ಟಿ ಮಾಡಿದ್ದಾನೆ (೧೦.೪೦–೫೬). ವರ್ಣಸಂಕರದಿಂದ ಹೀನಜಾತಿಗಳ ಉಗಮವಾಗುತ್ತದೆ; ಅದರಿಂದ ಸರ್ವನಾಶ, ಎಂಬುದು ಅವನ ತೀರ್ಮಾನ. ಸಮಾಜಶಾಸ್ತ್ರೀಯ ಅಧ್ಯಯನದಲ್ಲಿ 'ಹೀನಜಾತಿ' ಮತ್ತು 'ಸರ್ವನಾಶ' ಎಂಬುವು ಅರ್ಥರಹಿತವೆಂದರೆ ತಪ್ಪಾಗಲಾರದು. ಶ್ವಪಚರು ಮತ್ತು ಚಂಡಾಲರು 'ಹೀನಜಾತಿ'ಯವರು; ಅವರು ಸತ್ತವರ ಬಟ್ಟೆಗಳನ್ನು ತೊಡುತ್ತಾರೆ, ಒಡೆದುಹೋದ ಪಾತ್ರೆಗಳಲ್ಲಿ ಊಟ ಮಾಡುತ್ತಾರೆ, ಕಬ್ಬಿಣದ ಬಳೆಗಳನ್ನು ತೊಡುತ್ತಾರೆ ಮತ್ತು ಅಲೆಮಾರಿಗಳಾಗಿರುತ್ತಾರೆಂಬುದು ಮನುವಿನ ಚಿತ್ರಣ (೧೦.೫೨). ಇಂಥವರಿಂದ ಇಡೀ ಸಮುದಾಯವು ಹಾಳಾಗುತ್ತದೆಯಂತೆ (೧೦.೬೧). "ಎಲ್ಲ ಬುಡಕಟ್ಟು ಜನರೂ ಹಿಂದುಗಳೇ" ಎಂಬ ಸಮಕಾಲೀನ ಕುತ್ಸಿತ ಧೋರಣೆಯ ಪಿತಾಮಹ ಮನು ಎನ್ನಬಹುದೇನೊ. ಆದರೆ ವರ್ಣಸಂಕರದಿಂದ ಜನಿಸಿದವರಿಗೂ ಸ್ವರ್ಗ ಹಾಗೂ ಸದ್ಗತಿಯುಂಟು; ಅವನ್ನು ಪಡೆಯಲು ಅವರು ಬ್ರಾಹ್ಮಣ, ಗೋವು, ಸ್ತ್ರೀ ಮತ್ತು ಬಾಲಕ, ಇವರ ರಕ್ಷಣೆಗಾಗಿ ಪ್ರಾಣತ್ಯಾಗ ಮಾಡಬೇಕು (೧೦.೬೨). ಇದಕ್ಕೆ ಪರ್ಯಾಯವಾಗಿ ನಾಲ್ಕು ವರ್ಣದವರೆಲ್ಲಾ ಅಹಿಂಸಾ, ಸತ್ಯ, ಅಸ್ತೇಯ (ಕಳ್ಳತನ ಮಾಡದಿರುವುದು), ಶೌಚ (ಶುಚಿತ್ವ) ಮತ್ತು ಇಂದ್ರಿಯ ನಿಗ್ರಹಗಳನ್ನು ಪಾಲಿಸಿದರೆ ಸಾಕು (೧೦.೬೩). ಇವಕ್ಕೆ ಶರೀರ ಶ್ರಮ ಮತ್ತು ಸ್ಪೃಶ್ಯಭಾವನೆ (ಅಸ್ಪೃಶ್ಯತೆಯನ್ನು ಆಚರಿಸದಿರುವುದು)ಗಳನ್ನು ಸೇರಿಸಿ ಗಾಂಧೀಜಿ ಏಳು ಮೌಲ್ಯಗಳನ್ನು ಪ್ರತಿಪಾದಿಸಿದರು.

ಮನುವಿನ ವರ್ಣಸಂಕರದ ಗೋಜಲಿನಲ್ಲೂ ಪರಿವರ್ತನೆಯ ಸಾಧ್ಯತೆ ಉಂಟು : ಶೂದ್ರ ಸ್ತ್ರೀ ಮತ್ತು ಬ್ರಾಹ್ಮಣ ಪುರುಷ, ಇವರ ಸ್ತ್ರೀ ಸಂತಾನಕ್ಕೆ 'ಪಾರಶವ' ಎಂಬ ಹೆಸರು ಕೊಡಲಾಗಿದೆ. ಅಂತಹ ಹೆಣ್ಣುಮಗಳು ಬ್ರಾಹ್ಮಣನಿಂದ ಪುತ್ರಿಯನ್ನು ಪಡೆದರೆ ಮತ್ತು ಏಳು ತಲೆಗಳವರೆಗೆ ಬ್ರಾಹ್ಮಣ ಸಂಪರ್ಕವು ಹೀಗೆ ಮುಂದುವರಿದರೆ ಆ ವರ್ಣವು ಬ್ರಾಹ್ಮಣತ್ವವನ್ನು ಪಡೆಯುತ್ತದೆ; ಇದಕ್ಕೆ ವ್ಯತಿರಿಕ್ತವಾಗಿ ಬ್ರಾಹ್ಮಣ ಹೆಣ್ಣುಮಗಳು ಶೂದ್ರನಿಂದ ಪುತ್ರಿಯನ್ನು ಪಡೆದು ಅದು ಏಳು ತಲೆಗಳವರೆಗೆ ಮುಂದುವರಿದರೆ ಆ ವರ್ಣವು ಶೂದ್ರತ್ವದಲ್ಲಿ ಪರ್ಯವಸಾನವಾಗುತ್ತದೆ (೧೦.೬೪–೬೫). ಇದರ ತಾತ್ಪರ್ಯವೇನು? ಉತ್ತಮ ಭೂಮಿಯಲ್ಲಿ ಬೀಜ ಬಿತ್ತನೆ ಮಾಡದಿದ್ದರೆ ವ್ಯರ್ಥ ಮತ್ತು ಬಂಜರು ಭೂಮಿಯಲ್ಲಿ ಬೀಜ ಬಿತ್ತನೆ ಮಾಡಿದರೆ ವ್ಯರ್ಥ, ಎಂದು (೧೦.೭೧). ಇದನ್ನು ಇನ್ನಷ್ಟು ವಿವರಿಸಿ ಹೇಳುವುದು ಬೇಡ; ವರ್ಣಪಾರಮ್ಯದ ಭಾವನೆಯು ಮನುವಿನಲ್ಲಿ ಎಷ್ಟು ಸಾಂದ್ರವಾಗಿದೆ ಎಂಬುದಕ್ಕೆ ಇದೊಂದು ನಿದರ್ಶನ ಸಾಕು. ಉತ್ತಮ ವರ್ಣದವರ ಆಚರಣೆಗಳನ್ನು ಶೂದ್ರನು ಅನುಕರಿಸಿದರೆ, ಇಲ್ಲವೇ ಶೂದ್ರ ವರ್ಣದವರ ಕರ್ಮಗಳನ್ನು ಬ್ರಾಹ್ಮಣನು ಮಾಡಿದರೆ ಅವರಿಬ್ಬರ ಮೂಲ ವರ್ಣತ್ವವು ಬದಲಾಗುವುದಿಲ್ಲ (೧೦.೭೩); ಅಂದರೆ ದ್ವಿಜನು ದ್ವಿಜನೇ ಮತ್ತು ಶೂದ್ರನು ಶೂದ್ರನೇ. ಭಗವದ್ಗೀತೆಯ "ಚಾತುರ್ವರ್ಣ್ಯವು ಗುಣ–ಕರ್ಮಗಳನ್ನಾಧರಿಸಿ ಸೃಷ್ಟಿಸಲಾಗಿದೆ" (೪.೧೩) ಎಂಬುದನ್ನು ಕೆಲವರು ತಮ್ಮಲ್ಲಿ ಸಮಾಧಾನ ಮೂಡಿಸಿಕೊಳ್ಳಲು 'ಹುಟ್ಟಿದ ವರ್ಣವು ಮುಖ್ಯವಲ್ಲ, ಸಾಮಾಜಿಕ ಏಣಿಯಲ್ಲಿ ಏರಲು ಮತ್ತು ಬೀಳಲು ಸಾಧ್ಯವೆಂದು' ವ್ಯಾಖ್ಯಾನಿಸಿಕೊಳ್ಳುತ್ತಾರೆ. ಮೊದಲನೆಯದಾಗಿ ಗೀತೆಯಲ್ಲಿ ಈ ದೃಷ್ಟಿಯನ್ನು ಪುರಸ್ಕರಿಸಲಾಗಿಲ್ಲ ಮತ್ತು ಎರಡನೆಯದಾಗಿ ಗುಣವೆಂದರೆ ಅಲ್ಲಿ ಸತ್ತ್ವ – ರಜಸ್ – ತಮಸ್ ಎಂಬ ಗುಣಗಳೇ ವಿನಾ ಶ್ರೇಷ್ಠ ಮತ್ತು ಕನಿಷ್ಠ ಗುಣಗಳಲ್ಲ. ಆ ಸತ್ತ್ವಾದಿ ಗುಣಗಳು ಸಹ ಗೀತೆಯ ಪ್ರಕಾರ ವರ್ಣಗಳೊಡನೆ ಸಹಜವಾಗಿ ಸಂಬಂಧಿಸುವಂಥವು. ಆಯಾ ವರ್ಣಗಳ ಕರ್ಮಗಳ ಬಗ್ಗೆ ಮನು ತುಂಬ ಜಡ್ಡು ಮನಸ್ಸಿನವನು; ಅವನ ಪ್ರಕಾರ ಕರ್ಮಗಳು ನಿಷ್ಕೃಷ್ಟವಾಗಿ ಹೇಳಲಾಗಿವೆ. ಉದಾಹರಣೆಗೆ, ಅವನ ಈ ಮಾತು ನೋಡೋಣ: "ಕೃಷಿಯು ಶ್ರೇಷ್ಠ ವೃತ್ತಿಯೆಂದು ಹೇಳಲಾಗಿದೆ, ಆದರೆ ಸಜ್ಜನರು ಅದನ್ನು ಹಾಗೆ ಸ್ವೀಕರಿಸುವುದಿಲ್ಲ. ನೇಗಿಲಿನ ಗುಳಕ್ಕೆ ಸಿಕ್ಕಿ ಭೂಮಿಯಲ್ಲಿನ ಅನೇಕ ಜಂತುಗಳು ಗತಿಸುತ್ತವೆ. ಶ್ರೇಷ್ಠ ವರ್ಣದ ಬ್ರಾಹ್ಮಣನು ಅದನ್ನು ಮಾಡಬಹುದೆ?" (೧೦.೮೪ : ಕೃಷಿಂ ಸಾಧ್ವಿತಿ ಮನ್ಯಂತೇ ಸಾ ವೃತ್ತಿಃ ಸದ್ವಿಗರ್ಹಿತಾ। ಭೂಮಿಂ ಭೂಮಿಶಯಾಂಶ್ಚೈವ ಹಂತಿ ಕಾಷ್ಠಮಯೋಮುಖಂ ॥). ಎರೆಹುಳುವಿನ ಬಗ್ಗೆ ಮನುಗೆ ಕನಿಕರವಿದೆ, ಆದರೆ ಶೂದ್ರರನ್ನು ಹೀನಾಯವಾಗಿ ನಡೆಸಿಕೊಂಡರೆ ಅದು ಧರ್ಮವಿರೋಧವಲ್ಲ!

ಗೀತೆಯು 'ಸ್ವ–ಧರ್ಮ', ಅಂದರೆ ನಿರ್ದಿಷ್ಟ ವರ್ಣಧರ್ಮವು, ಅನುಲ್ಲಂಘನೀಯವೆನ್ನುತ್ತದೆ. "ಸ್ವಧರ್ಮವನ್ನು ಕೆಟ್ಟದಾಗಿ ಆಚರಿಸಿದರೂ ನಡೆಯುತ್ತದೆ, ಆದರೆ ಪರಧರ್ಮವು ಭಯಂಕರ" ಎಂದು ಗೀತೆಯು ಎರಡು ಕಡೆ ಹೇಳಿದೆ (೩.೩೫ ಮತ್ತು ೧೮.೪೭). ಗೀತೆಯು ಮನುವಿನಿಂದ ಬಾಚಿಕೊಂಡ ಅಶುದ್ಧ ಮೌಲ್ಯ ಅದು. ಮನು ಹೇಳುತ್ತಾನೆ (೧೦.೯೭) : ವರಂ ಸ್ವಧರ್ಮೋ ವಿಗುಣಃ ನ ಪಾರಕ್ಯಃ ಸ್ವನುಷ್ಠಿತಃ। ಪರಧರ್ಮೇಣ ಜೀವನ್ ಹಿ ಸದ್ಯಃ ಪತತಿ ಜಾತಿತಃ॥ ಕರ್ಕಶವೆನಿಸುವ ಇದೇ ಮಾತನ್ನು ಈ ಗೀತೆಯು ನವಿರಾಗಿ ಹೇಳುತ್ತದೆ, ಅಷ್ಟೆ. ಮನುವು ಬ್ರಾಹ್ಮಣನಿಗೆ ಎಷ್ಟು ಸಾಧ್ಯವೋ ಅಷ್ಟು ಸವಲತ್ತುಗಳನ್ನು ನೀಡುತ್ತಾನೆ, ಆಪದ್ಧರ್ಮಗಳನ್ನು ಹೇಳಿ ಅವನ ಉಲ್ಲಂಘನೆಗಳನ್ನು ಮನ್ನಿಸುತ್ತಾನೆ : "ಜೀವನ ಹೊರೆಯಲು ಬ್ರಾಹ್ಮಣನು ಅನರ್ಹರಿಗೆ (ಅಂದರೆ ಶೂದ್ರಾದಿಗಳಿಗೆ) ವಿದ್ಯೆ ಕಲಿಸಿದರೆ, ಅಯೋಗ್ಯರಿಗೆ ಯಜ್ಞ ಮಾಡಿಸಿದರೆ, ದುರ್ಜನರಿಂದ ದಾನ ಪಡೆದರೆ ಅದರಿಂದ ದೋಷವಿಲ್ಲ; ಅವನು ನೀರು ಮತ್ತು ಬೆಂಕಿಯಂತೆ ಸದಾ ಪವಿತ್ರನೇ" (೧೦.೧೦೩ : ನಾಧ್ಯಾಪನಾದ್ಯಾಜನಾದ್ವಾ ಗರ್ಹಿತಾದ್ವಾ ಪ್ರತಿಗ್ರಹಾತ್। ದೋಷೋ ಭವತಿ ವಿಪ್ರಾಣಾಂ ಜ್ವಲನಾಂಬುಸಮಾ ಹಿ ತೇ ॥). ಅದೇ ಮನು ಇದಕ್ಕೆ ಹೊಂದದ ಮಾತನ್ನೂ ಹೇಳುತ್ತಾನೆ : ಅನಿವಾರ್ಯವಾದರೆ ಬ್ರಾಹ್ಮಣನು 'ಶಿಲ' ಮತ್ತು 'ಉಂಛ' ವೃತ್ತಿಗಳಿಂದ ಜೀವನ ಹೊರೆಯಲು ಅಡ್ಡಿಯಿಲ್ಲ; 'ಪಾಪಿಗಳಿಂದ ದಾನ ಪಡೆಯುವುದಕ್ಕಿಂತಲೂ ಇದು ಉತ್ತಮ" (೧೦.೧೧೨). ಹೊಲದಲ್ಲಿ ಧಾನ್ಯವನ್ನು ಒಕ್ಕಿದ ನಂತರ ಅಲ್ಲಿ ಬಿದ್ದಿರಬಹುದಾದ ಕಾಳುಗಳನ್ನು ಆರಿಸಿಕೊಳ್ಳುವುದು 'ಶಿಲ'; ಬೀಸುಕಲ್ಲಿನಿಂದ ಹಿಟ್ಟು ತೆಗೆದುಕೊಂಡು ಹೋದನಂತರ ಅಲ್ಲಿರಬಹುದಾದ ಹಿಟ್ಟನ್ನು ಸಂಗ್ರಹಿಸಿಕೊಳ್ಳುವುದು 'ಉಂಛ'. ಬ್ರಾಹ್ಮಣ ಮತ್ತು ಕ್ಷತ್ರಿಯರ ಆಪದ್ಧರ್ಮಗಳು ಅವರನ್ನು ಸಂಕಷ್ಟಗಳಿಂದ ಹೇಗೋ ಪಾರುಮಾಡುತ್ತವೆ; ಶೂದ್ರನಿಗೆ ಅಂಥವೇನೂ ಇಲ್ಲ. 'ಅಸೂಯೆಗೆ ಸೊಪ್ಪುಹಾಕದೆ ತನ್ನ ವೃತ್ತಿಯನ್ನು ತೃಪ್ತಿಕರವಾಗಿ ಮಾಡುವುದು ಅವನಿಗೆ ಶ್ರೇಯಸ್ಕರ'; ಇಹ–ಪರಗಳಲ್ಲಿ ಇದು ಅವನಿಗೆ ಶ್ರೇಯಸ್ಸನ್ನು ದೊರಕಿಸಿ ಕೊಡುತ್ತದೆ (೧೦.೧೨೮). ಈ ಮಹಾನ್ ಉಪದೇಶವು ಬ್ರಾಹ್ಮಣನ ಗುರಾಣಿಯೆಂಬುದನ್ನು ಮುಂದಿನ ಶ್ಲೋಕದಲ್ಲಿ ಮನು ಸ್ಪಷ್ಟಪಡಿಸುತ್ತಾನೆ. ಮುಖ್ಯ ವಿಷಯ ಏನೆಂದರೆ ಶೂದ್ರನೆಂದೂ ಬ್ರಾಹ್ಮಣನೊಡನೆ ಸ್ಪರ್ಧೆಗಿಳಿಯುವಂತಿರಬಾರದು, ಅಷ್ಟೆ. "ಧನಾರ್ಜನೆ ಮಾಡುವ ಸಾಮರ್ಥ್ಯವೆಷ್ಟೇ ಇರಲಿ, ಶೂದ್ರನು ಧನಸಂಚಯಕ್ಕೆ ಮಾರುಹೋಗಬಾರದು. ಹಾಗೇನಾದರೂ ಪ್ರವೃತ್ತಿ ಬೆಳೆದರೆ ಅವನು ಬ್ರಾಹ್ಮಣನಿಗೆ ಸಂಚಕಾರ ತಂದುಬಿಡುತ್ತಾನೆ!" (೧೦.೧೨೯: ಶಕ್ತೇನಾಪಿ ಹಿ ಶೂದ್ರೇಣ ನ ಕಾರ್ಯೋ ಧನಸಂಚಯಃ। ಶೂದ್ರೋ ಹಿ ಧನಮಾಸಾದ್ಯ ಬ್ರಾಹ್ಮಣಾನೇವ ಬಾಧತೇ ॥)

**ಜಿ. ರಾಮಕೃಷ್ಣ**
೨–ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್
ಕಾವೇರಿನಗರ, ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ನೆಹರು ಮೈದಾನದಲ್ಲಿ ಕಾಡೆಮ್ಮೆ

ಬೆಳಕು ಹರಿಯುತ್ತಲೇ ಬೆಳಗಿನ ವಾಯುವಿಹಾರಕ್ಕೆ ಹೋದವರು ಬೆದರಿ ಕಂಗಾಲಾಗಿ ಅಲ್ಲಲ್ಲಿ ಅಡಗಿಕೊಂಡರು. ಮರ ಮನೆ ಇತ್ಯಾದಿಗಳ ಹಿಂದೆ ತಮ್ಮನ್ನ ಮರೆಸಿಕೊಂಡು ಅದು ಹೇಗೋ ಮನೆ ಸೇರಿದರು. ಕೆಲವರು ಬೇರೆ ದಾರಿ ಹಿಡಿದು ಮನೆಗೆ ಧಾವಿಸಿದರು. ಕೊನೆಯ ಸುತ್ತಿಗೆ ಬಂದ **"ಗರುಡ"** ತನ್ನ ಎಂದಿನ ದಾರಿಬಿಟ್ಟು ಬಿ. ಎಚ್. ರಸ್ತೆಯಲ್ಲಿ ಹೆಲಿ ಪ್ಯಾಡ್ ದಾರಿಯಲ್ಲಿ ಅಷ್ಟು ದೂರ ಹೋಗಿ ಊರಿನೊಳಗೆ ಬಂದ ಕಾಡೆಮ್ಮೆಯನ್ನ ಶರಾವತಿ ಹಿನ್ನೀರಿನವರೆಗೂ ಹಿಂಬಾಲಿಸಿ ಅದು ಅಲ್ಲಿ ಮರೆಯಾಗಲು ನಿಶ್ಚಿಂತೆಯಿಂದ ಸ್ಟೇಷನ್ನಿನತ್ತ ತಿರುಗಿತು. ಒಂದು ಅರ್ಧ ಗಂಟೆಯೊಳಗೆ ಮಠದ ಬಳಿ ಕೆರೆಗೆ ಇಳಿದು ನೀರು ಕುಡಿದ ಕಾಡೆಮ್ಮೆ ಅಲ್ಲಿಂದ ಹಳೇ ಬಿ. ಎಚ್. ರಸ್ತೆಯಲ್ಲಿ ನಡೆದು ಮಾರಿಕಾಂಬ ಗುಡಿ ರಸ್ತೆಯ ಮುಂದಿನಿಂದ ಹೆದ್ದಾರಿಯಲ್ಲಿ ಸಾಗಿ ಜನ ವಾಯುವಿಹಾರ ಮಾಡುವ ನೆಹರು ಮೈದಾನದ ಬಳಿ ಗರುಡಕ್ಕೆ ಭೇಟಿ ಆಯಿತು ಅನ್ನುವುದು ಒಂದು ಭಾರೀ ಸುದ್ದಿ ಆಯಿತು. ಕೆಲವರು ಅದರ ಆಕಾರ ಕಂಡು ಭೀತರಾದರು. ಅದರ ವರಟು ಮೈ, ಗಂಭೀರ ನಡಿಗೆ, ತೂಗು ಬಿದ್ದ ಅದರ ಮೈ ಮೇಲಿನ ಚರ್ಮದ ಪದರು, ಡಾಂಬರು ರಸ್ತೆಯ ಮೇಲೆ ಅದು ಹೆಜ್ಜೆ ಹಾಕಿದರೆ ಕೇಳಿಸುತ್ತಿದ್ದ ಆ ಸದ್ದು, ಅದು ಅತ್ತ ಇತ್ತ ನೋಡುತ್ತ ನಡೆದ ಬಗೆ ಇದೆಲ್ಲವನ್ನ ಅಲ್ಲಲ್ಲಿ ಗುಂಪು ಕೂಡಿ ನಿಂತ ಜನ ಬಣ್ಣಿಸುತ್ತಿರಲು ವಾಯುವಿಹಾರಕ್ಕೆ ಬಂದ ಕೆಲವರು ಹಾಗೆಯೇ ತಿರುಗಿ ಹೋದರು. ಪತ್ರಿಕೆಯವರು ನೇರ ಪೊಲೀಸ್ ಸ್ಟೇಷನ್ನಿಗೇನೆ ಸುದ್ದಿಗಾಗಿ ಧಾವಿಸಿದರು. ಹಗಲು ಹೊತ್ತು ಅನ್ನುವ ಹಾಗೆ ನಗರಕ್ಕೆ ಬಂದ ಈ ಕಾಡೆಮ್ಮೆ ನಾಳಿನ ಚಿಂತೆಯನ್ನ ಜನರಲ್ಲಿ ಹುಟ್ಟಿಸಿ ಗಾಬರಿಗೊಳಿಸಿತು. ನಿತ್ಯ ಯಾವುದೇ ಆತಂಕವಿಲ್ಲದೆ ವಾಯುವಿಹಾರ ಮಾಡುತ್ತಿದ್ದ ಎಲ್ಲರೂ ಹೆದರಿಕೊಂಡರು.




ಡಾ|| ನಾ. ಡಿಸೋಜ

ಬಹಳ ಮುಖ್ಯವಾಗಿ ಗುಬ್ಬಗೋಡು ದುಗ್ಗಪ್ಪ ಹೆಗ್ಗಡೆಯವರು ಮುದ್ದಾಂ ಪೊಲೀಸ್ ಠಾಣೆಗೆ ಹೋಗಿ ಗರುಡದ ಚಾಲಕ ಸಬೀರನನ್ನ ಮಾತನಾಡಿಸಿದರು.

"ಅಲ್ಲ, ಅದು ನಿಜವಾಗಿಯೂ ಕಾಡೆಮ್ಮೆ ಅಂತೀರಾ?"

"ಅಯ್ಯೋ ಖುದಾ.... ಅದನ್ನ ಮೊದಲು ನೋಡಿದವನೇ ನಾನು.... ಜೀಪನ್ನ ಕೆರೆ ಕಡೆಯಿಂದ ಟಾಕೀಸ್ ಕಡೆ ಟರ್ನ್ ಮಾಡತೀನಿ.... ಬಂದು ಎದಿರು ನಿಂತುಬಿಡ್ತು.... ಎದೆ ಧಸ್ ಅಂತು...."

"ಖಾತ್ರಿಯಾಗಿ ಕಾಡೆಮ್ಮೆ?"

"ಅಯ್ಯೋ ಖುದಾ, ನಾನೆಷ್ಟು ಎಮ್ಮೆ ದನ ನೋಡಿಲ್ಲ... ಜೋಗದಲ್ಲಿ ಹತ್ತು ವರ್ಷ ಇದ್ದೆ... ಈ ಕಾಡೆಮ್ಮೆ ಮನೆ ಮುಂದೇನೆ ಬಂದು ಮಲಗೋದು... ಕಾಡಲ್ಲಿ ನೀರಿಲ್ಲ ಬಂದು ನೋಡಿ ಊರಿಗೆ ಬಂದಿದೆ... ದಿನಾ ಬರಲ್ಲ ಬಿಡಿ... ಅದರಿಂದ ಹೆದರಿಕೆ ಏನಿಲ್ಲ...." ಎಂದು ಸಬೀರ ವಿವರಣೆ ನೀಡಿದ. ಹಾಗೇ ದುಗ್ಗಪ್ಪ ಹೆಗ್ಗಡೆಯತ್ತ ತಿರುಗಿ ಕೇಳಿದ, "ಅಲ್ಲ.... ನೀವಿಷ್ಟು ದೂರ ಬಂದದ್ದು?"

"ಏನಿಲ್ಲ... ಈ ಕಡೆ ಬಂದಿದ್ದೆನಲ್ಲ... ಜನ ಒಂದೊಂದು ಥರಾ ಹೇಳತಿದ್ರು... ಪೊಲೀಸರನ್ನ ಕೇಳಿದ್ರೆ ನಿಜ ತಿಳಿಯುತ್ತಲ್ಲ... ಬಂದೆ..."

ಎಂದವರು ಸ್ಟೇಷನ್ ಬಾಗಿಲಲ್ಲಿ ನಿಲ್ಲಿಸಿದ ಸೈಕಲಿನ ಸ್ಟ್ಯಾಂಡನ್ನ ತೆಗೆದು ಅದನ್ನ ತಳ್ಳಿಕೊಂಡು ರಸ್ತೆಗೆ ಇಳಿದರು. ಗಾಳಿ ತಣ್ಣಗಿತ್ತು. ಆದರೂ ಅವರ ಮೈ ನಡುಕ ನಿಂತಿರಲಿಲ್ಲ. ಸಣ್ಣಕೆ ಬೆವರೂ ಇತ್ತು. ಕೈ ನಡುಕದಿಂದಾಗಿ ಸೈಕಲನ್ನ ಸರಿಯಾಗಿ ಹಿಡಿದುಕೊಳ್ಳಲು ಆಗುತ್ತಿರಲಿಲ್ಲ. ಸೈಕಲನ್ನ ತಳ್ಳಿಕೊಂಡೇ ನೆಹರೂ ಮೈದಾನದತ್ತ ಹೊರಟರು. ಅಲ್ಲಿಯೇ ಕೊನೆಯ ಮನೆ ಅವರದ್ದು. ಆದರೆ ಈ ಸುದ್ದಿ ಅವರನ್ನು ಹೆದರಿಸಿತು. ಅಂತಿಂತಹ ಹೆದರಿಕೆ ಅಲ್ಲ. ಎದೆ ನಡುಗಿಸಿ ಮೈ ಸಣ್ಣಗೆ ಬೆವರಿತ್ತು.

ಸೈಕಲಿನ ಚಕ್ರಗಳು ನಿಧಾನವಾಗಿ ತಿರುಗುತ್ತ ಸದ್ದು ಮಾಡುತ್ತಿರಲು ಅವರ ಮನಸ್ಸು ಹಿಂದಿನ ದಿನಗಳತ್ತ ಪಯಣ ಮಾಡಿತು.

'ಅಮ್ಮಿ ಅಮ್ಮಿ' ಎಂದು ಕರೆಯುಯತ್ತಿದ್ದರು ಅವರು ಇದನ್ನು. ಗುಬ್ಬಗೋಡಿನಲ್ಲಿ ತಾವು ನಿಶ್ಚಿಂತೆಯಿಂದಿದ್ದಾಗ ಇದನ್ನ ತಂದಿದ್ದರು ಹಾವೇರಿಯಿಂದ. 'ಅಮ್ಮಿ' ಅಂದರೆ ಸಾಕು ಓಡಿಬರುತ್ತಿತ್ತು. ನೇರ ಮನೆಯೊಳಗೇನೆ ಬಂದು ಬಿಡುತ್ತಿತ್ತು. ಅವರಿವರು ಅಂತಿಲ್ಲ, ಎಲ್ಲರಿಗೂ ಗಂಟು ಬೀಳುತ್ತಿತ್ತು. ಎಲ್ಲರೂ ತನ್ನನ್ನ ಪ್ರೀತಿಸಬೇಕು ಎಂಬಂತೆ ವರ್ತಿಸುತ್ತಿತ್ತು. ಇದು ಗುಬ್ಬಗೋಡಿನ ಮನೆಗೆ ಬಂದ ಒಂದು ಒಂದೂವರೆ ವರ್ಷಕ್ಕೆ ಊರಿಗೆ ಮುಳುಗಡೆ ಬಂದಿತ್ತು.

ಖಾಕಿ ಬಣ್ಣದ ಒಂದು ಜೀಪು ಕಾಡು ಗುಡ್ಡ ಕಣಿವೆ ಎಂದೆಲ್ಲ ತಿರುಗಾಡಿ ಗುಬ್ಬಗೋಡಿನ ತಮ್ಮ ಮನೆಯತ್ತ ಮೂತಿ ಚಾಚುತಿತ್ತು.

"ಹೆಗ್ಗಡೇರೇ, ನಿಮ್ಮದೊಂದು ಮನೆ ಉಳಿಸಬೇಕು ಅಂತ ಮಾಡತಿದೀನಿ... ಆದರೆ ಆಗಲಿಕ್ಕಿಲ್ಲ ಅಂತ ಕಾಣುತ್ತೆ" ಎಂದು ಸರ್ವೇಯರ್ ಅಮಾನುಲ್ಲ ತಲೆಯ ಮೇಲಿನ ಖಾಕಿ ಹ್ಯಾಟನ್ನ ಜಗಲಿಯ ಮೇಲಿರಿಸಿ ಕುಳಿತುಕೊಳ್ಳುತ್ತ ಹೇಳುತ್ತಿದ್ದ.

"ಅದೇನು ಮಾಡತೀರೋ ನೋಡಿ... ಹಾಲೋ ಇಲ್ಲ ನೀರೋ. ಅದು ನಿಮಗೆ ಬಿಟ್ಟಿದ್ದು..." ಅನ್ನುತ್ತಿದ್ದರು ದುಗ್ಗಪ್ಪ.

ಕೊನೆಗೊಂದು ದಿನ ಅಮಾನುಲ್ಲ ಕೈ ಎತ್ತಿದ. ಗುಬ್ಬಗೋಡಿನ ಹೆಗ್ಗಡೆಯವರ ಜಮೀನು, ಮನೆ ಉಳಿಸಲು ಅವನಿಂದ ಆಗಲಿಲ್ಲ. ಸರ್ವೆ ಮಾಡಲೆಂದು ಬಂದಾಗಲೆಲ್ಲ ಹೆಗ್ಗಡೆಯವರ ಮನೆಯಲ್ಲಿ ವಿಶ್ರಾಂತಿ ಪಡೆದು ಹರಟೆ ಹೊಡೆಯುತ್ತಿದ್ದ ಆತ ತುಂಬ ಬೇಸರ ಪಟ್ಟುಕೊಂಡ. ಗುಬ್ಬಗೋಡಿನ ಜೊತೆಯಲ್ಲಿ ದುಗ್ಗಪ್ಪ ಹೆಗ್ಗಡೆಯವರ ಮನೆಯವರೆಗೂ ನೀರು ಬರುತ್ತದಂತೆ ಎಂದಾಯಿತು. ಹೆಗ್ಗಡೆಯವರು ಮನೆದಳವನ್ನ ಸ್ಥಳಾಂತರಿಸುವ ಮೊದಲು ಕೊಟ್ಟಿಗೆಯಲ್ಲಿದ್ದ ದನ ಕರು ಎಮ್ಮೆ ಇತ್ಯಾದಿಗಳನ್ನ ಸಾಗರಕ್ಕೆ ಸಾಗಿಸಿದರು. ಇವುಗಳ ಸಾಲಿನಲ್ಲಿ ಅಮ್ಮಿಯೂ ಬಂದಿತು. ಗುಬ್ಬಗೋಡಿನಿಂದ ಸಾಗರಕ್ಕೆ ಸುಮಾರು ಹದಿನೈದು ಮೈಲಿ. ದೀವರ ಕನ್ನ ಎಲ್ಲ ಗಂಟಿಗಳನ್ನ ಹೊಡೆದುಕೊಂಡು ಸಾಗರಕ್ಕೆ ಬಂದ. ಹೆಗ್ಗಡೆಯವರು ಗುಬ್ಬಗೋಡಿನ ಜಮೀನು ಮನೆಗೆ ಬಂದ ಪರಿಹಾರಕ್ಕೆ ಅನುಗುಣವಾಗಿ ಸಾಗರದಲ್ಲಿ ಒಂದು ಮನೆ ಕೊಂಡಿದ್ದರು. ಇನ್ನು ಹಿಂದಿನ ಹಾಗೆ ಅಡಕೆ ಪಡಕೆ ಮಾಡುವುದು ಅರ್ಥವಿಲ್ಲ ಅನ್ನುವ ನಿರ್ಧಾರಕ್ಕೆ ಅವರು ಬಂದಿದ್ದರು. ಮಗ ಕೂಡ ಈ ಕೃಷಿ ಸಾಕು ಅನ್ನುವ ನಿರ್ಧಾರಕ್ಕೆ ಬಂದಿದ್ದ. ಅವನು ಹವ್ಯಾಸ ಎಂದು ಕಲಿತ ರೇಡಿಯೋ ಟಿ. ವಿ. ರಿಪೇರಿ ಇತ್ಯಾದಿ ಅವನ ಕೈ ಹಿಡಿದಿತ್ತು. ಅವನು ಸಾಗರದಲ್ಲಿ "ಶರಾವತಿ ರೇಡಿಯೋ ಟಿ.ವಿ. ರಿಪೇರರ್ಸ್" ಎಂದೊಂದು ಅಂಗಡಿ ತೆರೆದ.

ಗುಬ್ಬಗೋಡಿನಿಂದ ಸಾಗರಕ್ಕೆ ಹೊಡೆದು ತಂದ ದನಕರುಗಳೆಲ್ಲ ಇಲ್ಲಿಗೆ ಹೊಂದಿಕೊಂಡವು. ಎಲ್ಲ ದನಕರುಗಳು, ಎಮ್ಮೆ ಗೊಲ್ಲ ಫಕೀರನ ಸುಪರ್ದಿನಲ್ಲಿ ಊರ ಹೊರಗೆ ಹೋಗಿ ಮೇಯ್ದುಕೊಂಡು ಬರುತ್ತಿದ್ದವು. ಫಕೀರ ಅಗ್ರಹಾರ, ಲಿಂಗಾಯತರ ಕೇರಿ, ಉಪ್ಪಾರ, ಮಡಿವಾಳರ ಕೇರಿ ಎಂದೆಲ್ಲ ಪ್ರತೀ ಮನೆಯ ದನ ಎಮ್ಮೆಗಳನ್ನ ತನ್ನ ಗೊಲ್ಲೆಗೆ ಸೇರಿಸಿಕೊಂಡು ದನ ಬಿಡದವರ ಮನೆ ಮುಂದೆ ನಿಂತು "ಅಮ್ಮಾ ದನ" ಎಂದು ಕೂಗಿ ಊರಿನ ಅಷ್ಟೂ ದನಕರುಗಳನ್ನು ಕರೆದುಕೊಂಡು ಸಣ್ಣ ಮನೆ ಸೇತುವೆಯ ಬಳಿ ಕಾಡು ಹೊಕ್ಕರೆ ಆತ ಗೊಲ್ಲೆಯೊಡನೆ ಬರುವುದು ಸಂಜೆಯೇ. ಮತ್ತೆ ಪ್ರತೀ ಮನೆಯ ಮುಂದೂ ನಿಂತು ಅವರವರ ದನಕರುಗಳು ಮತ್ತು ಎಮ್ಮೆಯನ್ನು ಒಪ್ಪಿಸಿ ಹೋಗುತ್ತಿದ್ದ. ಅವನ ಗೊಲ್ಲೆಯ ಅಷ್ಟೂ ಎಮ್ಮೆಗಳು, ದನಗಳು ತಪ್ಪದೇ ಮೇದು ಬರುತ್ತಿದ್ದವು. ಆದರೆ ದುಗ್ಗಪ್ಪನವರ ಈ ಅಮ್ಮಿ ಆಗಾಗ್ಗೆ ತಪ್ಪಿಸಿಕೊಂಡು ಬಿಡುತ್ತಿತ್ತು.

ನಾಲ್ಕು ದಿನಗಳಿಗೊಮ್ಮೆ ದುಗ್ಗಪ್ಪ "ಫಕೀರ, ನಮ್ಮ ಅಮ್ಮಿ ಬರಲಿಲ್ಲಲ್ಲೋ" ಎಂದು ಗೊಣಗುತ್ತಿದ್ದರು. "ಅದರ ಮ್ಯಾಲೆ ಒಂದು ಕಣ್ಣಿರಲಿ ಮಾರಾಯ" ಅನ್ನುತ್ತಿದ್ದರು. ಇವನು ಅಮ್ಮಿಯ ಮೇಲೆ ಒಂದು ಕಣ್ಣನ್ನ ಇರಿಸಿಕೊಂಡೂ ಇದ್ದ. ಆದರೂ ಯಾವುದೋ ಚಮತ್ಕಾರದಲ್ಲಿ ಅಮ್ಮಿ ಗೊಲ್ಲೆಯಿಂದ ಕಳಚಿಕೊಂಡು ಕಾನಿನಲ್ಲಿ ಉಳಿದುಬಿಡುವುದು. ಮತ್ತೆ ಗುಬ್ಬಗೋಡಿನ ಹುಲ್ಲು ಬ್ಯಾಣದಲ್ಲಿ ಹೋಗಿ ಅದು ಸಂತಸದಿಂದ ಮೇಯುವುದು. ಅದನ್ನ ಗುಬ್ಬಗೋಡಿನ ಮನೆಯಿಂದ ಸಾಗರದ ಹೊಸ ಮನೆಗೆ ಹೊಡೆದು ತಂದರೂ ಅದು ಸಾಗರದ ಕೊಟ್ಟಿಗೆಯಲ್ಲಿ ಇರಬಯಸದೆ ಗುಬ್ಬಗೋಡಿಗೆ ಹೋಗಿಬಿಡುತ್ತಿತ್ತು. ಈ ಎಮ್ಮೆಗೆ ಪಟ್ಟಣ, ಅಲ್ಲಿಯ ಗದ್ದಲ, ಗಲಾಟೆ, ಸೇರುತ್ತಿಲ್ಲ ಅನ್ನುವುದು ದುಗ್ಗಪ್ಪನವರಿಗೆ ತಿಳಿಯಿತು. ಆದರೆ ಏನು ಮಾಡುವುದು?

ಫಕೀರ ಅಮ್ಮಿಯ ಕುತ್ತಿಗೆಗೊಂದು ಗಳಗಂಟೆ ಕಟ್ಟಿ ನೋಡಿದ. ಅದು ಕಾಡಿನಲ್ಲಿ ಎಲ್ಲೇ ಇರಲಿ ಅದರ ಸದ್ದಿನಿಂದಾಗಿ ಅದು ಪತ್ತೆ ಆಗುತ್ತಿತ್ತು. ಆ ಗಂಟೆ ಹೊತ್ತುಕೊಂಡೇ ಅದು ತಿರುಗಾಡತೊಡಗಿತು. ಅದರ ತಪ್ಪಿಸಿಕೊಂಡು ಹೋಗುವ ಬುದ್ಧಿ ಬದಲಾಗಲಿಲ್ಲ. ಕೊನೆಗೆ ಕತ್ತಿಗೆ ಕಾಲಿಗೆ ಹಗ್ಗ ಕಟ್ಟಿ ನೋಡಿದರು. ಅದು ಹಗ್ಗ ಹರಿದುಕೊಂಡು ಹೋಯಿತು. ಎಮ್ಮೆಗಳನ್ನ ಎಷ್ಟು ದಿನ ಎಂದು ಹಗ್ಗ ಕಟ್ಟಿ ಇರಿಸುವುದು. ಕೊನೆಗೆ ಕುತ್ತಿಗೆಗೊಂದು ಕುಂಟೆ ಕಟ್ಟಿದರು.

# ನವಭಾರತ

**ಇದು** ಸ್ವಚ್ಛ ಭಾರತ ಕಂಡ್ರಿ
ನೆಲಕ್ಕೆ ಉಗಿಯುವಂತಿಲ್ಲ
ಉಗಿಯಬೇಕೆಂದರೆ ಇದ್ದಾರಲ್ಲ
ಗಾಂಧಿ ಎಂಬ ಚಂದ್ರ
ಬುದ್ಧ ಎಂಬ ಸುಂದ್ರ
ಬಸವ ಎಂಬ ಮಂದ್ರ

ಅವರಿಗೆ ಉಗಿದಿದ್ದು ಮತ್ತೆ
ನಿಮ್ಮ ಹಣೆಗೇ ಬಿತ್ತೆ
ಪರವಾಗಿಲ್ಲ ಮೆತ್ತಿ ಕುಂಕುಮ
ಬೃಹನ್ನಳೆಯ ಹಂಗಾಮ!

ವೃದ್ಧ ಜಟಾಯು ಕೊಕ್ಕಿನಲ್ಲಿ
ದ್ರಾವಿಡ ಸಂಸ್ಕೃತಿಯ ಕಳೇಬರ
ನೆಲ ಉಗಿದಿದೆ ನೆತ್ತರ
ಅದರಲ್ಲಿ ತೆಗೆದ ಫಸಲು
ಘೋರ ಕಾರ್ಕೋಟಕ ವಿಷ
ಬೆರೆತ ಮೃತ ಪರಿಸರ

ಕಣಿವೆಯಿಂದ ಹಾರಿ ಬಿದ್ದ
ಕಲ್ಲಲ್ಲಿ ಕಣ್ಣೀರ ಪಸೆಯಿದೆ
ಕಂಡೂ ಕಾಣದಂತೆ
ಉಗುಳು ನುಂಗುತ್ತ
ಹೋದ ತಪಸ್ವಿಯ ಕನಸುತ್ತ
ನಿಜ ಭಾರತೀಯ ಸತ್ತ

ಇನ್ನು ಪುರಾಣ ಪ್ರಯೋಗದಿಂದ
ಹುಟ್ಟಲಿದ್ದಾರೆ ದೇವತೆಗಳು
ಅವರಿಗೆ ಇರುವುದಿಲ್ಲ ಹೊಟ್ಟೆ
ಕೇವಲ ೫೬ ಇಂಚುಗಳ ಎದೆ
ಹೆಗಲ ಮೇಲೊಂದು ಗದೆ
ರತ್ನಗರ್ಭಾ ತುಳಿವ ಬಟ್ಟೆ

ಇಲ್ಲಿನ್ನು ಉಗುಳು ಉಚ್ಚೆ ಇರದು
ಬೆವರು ಭಾಗ್ಯ ತರದು
ಕಾರ್ಪೊರೇಟ್ ದೇವರಿಗೆ ನೈವೇದ್ಯ ಇಟ್ಟು
ಉಳಿದಿದ್ದು ಪ್ರಸಾದ
ಸಿಕ್ಕವರಿಗೆ ಸಿಕ್ಕಷ್ಟೆ!



**ಚಿ. ವಿ. ಚಂದ್ರಜ್ಯೋತಿ**
೩-೭೬, ೧೫ನೇ ಕ್ರಾಸ್, ಎಸ್. ಎಸ್. ಪುರಂ, ತುಮಕೂರು - ೫೭೨೧೦೨

ಅದು ಕುಂಟೆ ಹೊತ್ತುಕೊಂಡೇ ಓಡಿಹೋಯಿತು. ಒಂದು ಪ್ರಯೋಗ ಎಂದು ನಿತ್ಯ ತಪ್ಪಿಸಿಕೊಳ್ಳದೆ ಮನೆಗೆ ಬರುತ್ತಿದ್ದ ಇನ್ನೊಂದು ಎಮ್ಮೆಗೂ ಇದಕ್ಕೂ ಸೇರಿಸಿ ಹಗ್ಗ ಕಟ್ಟಿದರು. ಜೊತೆ ಜೊತೆಯಾಗಿ ತಿರುಗಾಡಿದವು ಇವು. ಊರ ಜನ "ಇದೇನ್ರಿ ಹೆಗ್ಗಡೆಯವರೇ" ಎಂದು ಕೇಳಿ ನಕ್ಕರು. ಎರಡು ದಿನ ಈ ಎರಡೂ ಎಮ್ಮೆಗಳು ಒಟ್ಟಿಗೇ ಇದ್ದವು, ನಾಲ್ಕನೇ ದಿನ ಅಮ್ಮಿ ತನ್ನ ಜೊತೆಗಿದ್ದ ಎಮ್ಮೆಯನ್ನ ಮೋರಿಗೆ ಎಳೆದು ಬೀಳಿಸಿ ತಾನು ಅದು ಹೇಗೋ ತಪ್ಪಿಸಿಕೊಂಡು ಹೋಯಿತು.

ದುಗ್ಗಪ್ಪ ಅಮ್ಮಿಯನ್ನ ಹುಡುಕಿಕೊಂಡು ಮಂಕಾಲೆ ಕಾಡು, ಮಕ್ಕಿ ಮನೆ, ಸಿಂಗಳೀಕ, ಅರಲಗೋಡು, ಗುಬ್ಬಗೂಡು, ಮಂಜಿನ ಮನೆ ಎಂದೆಲ್ಲ ತಿರುಗಾಡಿ ಬಂದರು. ಅಲ್ಲೂ ಅಮ್ಮಿ ಕಾಣಲಿಲ್ಲ.

ಎಲ್ಲೋ ಒಂದು ಕಡೆ ಬಿದಿರು ಮೆಳೆ ಹಿಂಬದಿಯಲ್ಲಿ ತನ್ನನ್ನು ನೋಡಿ ಒಂದು ಎಮ್ಮೆ ಗಿಡ ಬಿದ್ದು ಓಡಿ ಹೋದಂತೆ ಕಂಡಿತು. ದುಗ್ಗಪ್ಪ ಅದರ ಮೇಲೆ ನದರು ಇರಿಸಿ ಅಲ್ಲೆಲ್ಲ ತಿರುಗಾಡಿದರು. ಆದರೆ ಅಮ್ಮಿ ಸಿಗಲಿಲ್ಲ.

ಕಾಡು ಬಳ್ಳಿ ತರಲು ಕಾನಿಗೆ ಹೋದ ಕನ್ನ ಒಂದು ದಿನ,

"ಒಡೆಯಾ ನಿಮಗೆ ಗೊತ್ತ...." ಎಂದು ಕಂಬಳಿ ಕೊಪ್ಪೆ ಕೊಡವುತ್ತ ಕೇಳಿದ.

"ಎಂತಾದ್ದೋ ಅದು?"

"ಮುಳುಗಡೆಯೋರು ಇಲ್ಲಿ ಬಿಟ್ಟು ಹ್ವಾದ ಎಮ್ಮೆ ಈಗ ಕಾಡು ಸೇರಿ, ಪಕ್ಕಾ ಕಾಡೆಮ್ಮೆ ಆಗಿ ಬದಲಾಗವೆ...."

"ಹೌದನೋ....ನೀ ಬದ್ದ ಹೇಳತಿದಿ ಅಲ್ದಾ?"

"ನಾಯಾಕ ಸುಳ್ ಹೇಳಲಿ...."

– ಎಂದು ರಾಗ ಎಳೆದ. ಜೊತೆಗೆ ಹೀಗೆ ಕಾಡು ಸೇರಿದ ಎಮ್ಮೆಗಳು ಕಾಡೆಮ್ಮೆಗಳಾಗಿರುವ ವಿಷಯ ಬಣ್ಣಿಸಿದ. ಅವು ಜನರನ್ನ ಬೆದರಿಸಿಕೊಂಡು ಬರುವುದು, ಹೊಲ–ತೋಟಗಳಿಗೆ ನುಗ್ಗುವುದು, ಅಡಕೆ ಸಸಿ ತುಳಿಯುವುದು, ಅವುಗಳ ಮೈಮೇಲೆ ಉದ್ದ ಕೂದಲು ಬೆಳೆದಿರುವುದು, ಮೈ ಒರಟೊರಟಾಗಿ ಬದಲಾಗಿರುವುದು, ಅವುಗಳ ದನಿ, ನಡೆ, ಆಕಾರ ಎಲ್ಲ ಬೇರೆಯೇ ಆಗಿರುವುದನ್ನ ಆತ ಬಣ್ಣಿಸಿದಾಗ ದುಗ್ಗಪ್ಪ ಇದ್ದರೂ ಇರಬಹುದು ಅಂದುಕೊಂಡರು. ಹಾಗೆಯೇ ಕಾಡೆಮ್ಮೆ ಕಾಡು–ಕೋಣಗಳಾದ ಊರೆಮ್ಮೆ, ಕೋಣಗಳ ಕುರಿತೂ ಅವರ ಕುತೂಹಲ ಹೆಚ್ಚಿತು. ಈ ಮೂಕ ಜಂತುಗಳಿಗೆ ಕಾಡಿನಲ್ಲಿಯೇ ಸುಖ ಸ್ವಾತಂತ್ರ್ಯ ಸಿಗುತ್ತಿರಬಹುದೆ ಎಂದು ಯೋಚಿಸಿದರು.

ಅದೊಂದು ದಿನ ಇದು ಅವರ ಅನುಭವಕ್ಕೂ ಬಂದಿತು. ಅದಾರೋ ಹಾಲು ಮಾರಲು ಬಂದಿರುವವರು ಗುಬ್ಬಗೋಡಿನ ಬಳಿಯ ಹಿನ್ನೀರಿನಲ್ಲಿ ಕೆಲ ಎಮ್ಮೆಗಳು ಮೇಯುತ್ತಿವೆ ಎಂದು ಸುದ್ದಿ ತಂದರು. ದುಗ್ಗಪ್ಪ ಕುತೂಹಲದಿಂದ ಅತ್ತ ಹೋದರು. ಮನೆಯಿಂದ ಓಡಿ ಹೋದ ಅಮ್ಮಿ ಬಹಳ ದಿನಗಳಿಂದ ತಿರುಗಿ ಬಂದಿರಲಿಲ್ಲ. ಒಳ್ಳೆಯ ಹಾಲು ಕೊಡುತ್ತಿದ್ದ ಒಂದು ಎಮ್ಮೆ ಹೀಗೆ ತಪ್ಪಿಸಿಕೊಂಡರೆ ಯಾರಿಗೆ ಅದು ವ್ಯಥೆ ಅನಿಸುವುದಿಲ್ಲ. ನೋಡೋಣ ಎಂದು ಮಂಕಾಳೆ ಗುಡ್ಡ ಹತ್ತಿ ಅವರು ಗುಬ್ಬಗೂಡಿನ ಹಿನ್ನೀರಿಗೆ ಹೋಗಿ ತಲುಪಿದರು. ಎಲ್ಲ ಕಡೆ ನೀರು, ಕೊಳೆತ ಗಿಡ ಬಳ್ಳಿಗಳ ವಾಸನೆ. ನೀರು ಹಸಿರುಗಟ್ಟಿತ್ತು. ಅಲ್ಲಲ್ಲಿ ಅನ್ನುವ ಹಾಗೆ ನೀರ ನಡುವೆ ದ್ವೀಪಗಳು. ಈ ದ್ವೀಪಗಳಲ್ಲಿ ಮೇಯುವ ದನ, ಕರು, ಎಮ್ಮೆ ಇತ್ಯಾದಿ. ಇದರ ಈಚೆಗೆ ಮುರಿದುಬಿದ್ದ ಮನೆಗಳು, ಅರ್ಧಕ್ಕೆ ನಿಂತ ಮನೆಗಂಬಗಳು, ಒಡೆದ ಚರಂಡಿಯ ಚಪ್ಪಡಿ, ತೆಂಗಿನ ಮರ, ಮುಳುಗಡೆ ಆಗುವ ಮುನ್ನ ಎಲ್ಲವೂ ವ್ಯವಸ್ಥಿತವಾಗಿ ಇದ್ದುದು ಈಗ ಎಲ್ಲ ಸ್ಮಶಾನ, ಭಣಭಣ.

ಆ ಎಮ್ಮೆಗಳ ಗೊಲ್ಲೆಯಲ್ಲಿ ಅಮ್ಮಿಯನ್ನು ನೋಡಿದಂತಾಗಿ ದುಗ್ಗಪ್ಪ ಮೊಣಕಾಲವರೆಗೆ ಹಬ್ಬಿ ನಿಂತ ನೀರಿಗೆ ಇಳಿದರು. 'ಅಮ್ಮಿ ಅಮ್ಮಿ' ಎಂದು ಕೂಗಿದರು, ಬಾ ಬಾ ಎಂದು ಎದೆಯಲ್ಲಿನ ಎಲ್ಲ ಪ್ರೀತಿ ತುಂಬಿ ಕೂಗುತ್ತ ನೀರಿಗೆ ಇಳಿದರು.

ಅವರು ನಿರೀಕ್ಷಿಸಿರಲಿಲ್ಲ. ಮುಂದೆ ಹೋಯಿತು ಎಂದು ತಿಳಿದ ಎಮ್ಮೆಯ ಗೊಲ್ಲೆಯಿಂದ ಒಂದು ಎಮ್ಮೆ ತಿರುಗಿ ನಿಂತು, ಇವರತ್ತ ನುಗ್ಗಿತು, ಯಾವುದೋ ಹಳೆಯ ಸಿಟ್ಟು ತೀರಿಸಿಕೊಳ್ಳಲಿಕ್ಕಿದೆ ಅನ್ನುವಂತೆ ರಭಸದಿಂದ ಇವರ ಬಳಿ ಬಂದು ಬಿರುಸು ಕೊಂಬುಗಳನ್ನ ಇವರ ತೊಡೆಗಳ ನಡುವೆ ತೂರಿ ಇವರನ್ನ ಆಕಾಶಕ್ಕೆ ಎತ್ತಿ ನೀರಿಗೆ ಚೆಲ್ಲಿ ಮತ್ತೆ ಗೊಲ್ಲೆ ಸೇರಿ ಮಾಯವಾಯಿತು.

ದುಗ್ಗಪ್ಪ ಸಾವರಿಸಿಕೊಂಡು ಎದ್ದುನಿಂತರು.

ಅದು ಅಮ್ಮಿಯೇ. ಅನುಮಾನವಿಲ್ಲ. ಪ್ರೀತಿಯಿಂದ, ಮಮತೆಯಿಂದ, ನಿತ್ಯ ಅದರ ಗೋಣು ನೇವರಿಸಿ, ಅದರ ಮೈ ಸವರಿ ಅದಕ್ಕೆ ಕರಡ, ಕಲ್ಲಗಚ್ಚು, ನೀರು ಉಣಿಸಿ ಸಾಕಿದ ಎಮ್ಮೆಗೆ ತನ್ನ ಮೇಲೆ ಏಕೆ ಸಿಟ್ಟು? ಕೋಪ?

ದಂಡೆಯ ಮೇಲೆ ಕೊಂಚ ಹೊತ್ತು ಕುಳಿತು ಸಾವರಿಸಿಕೊಂಡು ಅವರು ಸಾಗರಕ್ಕೆ ಹಿಂತಿರುಗಿದರು. ಈ ಅಮ್ಮಿ ಯಾವತ್ತೂ ಸಾಗರವನ್ನು ಒಪ್ಪಿಕೊಂಡದ್ದಿಲ್ಲ. ಇಲ್ಲಿಯ ಜನ, ವಾಹನ, ಬಸ್ಸುಗಳು, ಆಟೋಗಳು, ಬುಲೆಟ್ ಅಂದರೆ ಅದಕ್ಕೆ ಹೆದರಿಕೆ ಆಗುತ್ತಿತ್ತೇನೋ. ಅದು ಸದಾ ಗುಬ್ಬಗೋಡಿನ ಆ ಶಾಂತತೆಯ ನಡುವೆಯೇ ಇರಬಯಸುತ್ತಿತ್ತು. ಈಗ ಅದು ಆ ಜಾಗ ಸೇರಿಕೊಂಡಿದೆ. ಆದರೂ ಅದರ ಮನಸ್ಸಿನಲ್ಲಿ ಒಂದು ಭೀತಿ ಉಳಿದುಬಿಟ್ಟಿದೆ. ತಾನು ಮತ್ತೆಲ್ಲಿ ಅದನ್ನ ಸಾಗರಕ್ಕೆ ಕರೆತಂದು ಅದು ಇಲ್ಲಿ ಬದುಕದ ಹಾಗೆ ಮಾಡುತ್ತೇನೋ ಎಂಬ ಆತಂಕ.

ಈ ಚಿಂತೆಯಲ್ಲಿಯೇ ಅವರು ದಿನ ಕಳೆಯತೊಡಗಿದರು. ಚಿಂತೆಯ ಜೊತೆಗೆ ಅಮ್ಮಿಯ ಆ ವರ್ತನೆ ಅವರನ್ನ ಆಗಾಗ್ಗೆ ಕಾಡದೇ ಇರಲಿಲ್ಲ. ಹೀಗೆ ದಿನ ಕಳೆಯಬೇಕಾದದರೇನೆ ಈ ಘಟನೆ ನಡೆಯಿತು.

ಒಂದು ಕಾಡೆಮ್ಮೆ ಬೆಳಗಿನ ಜಾವ ಯಾರನ್ನೋ ಹುಡುಕಿಕೊಂಡು ಬಂದಂತೆ ಊರಿಗೆ ಬಂದಿತು. ಊರ ಜನ ನಾಡಿಗೆ ಬಂದ ಕಾಡೆಮ್ಮೆಯನ್ನು ನೋಡಿ ಬೆದರಿ, ಹೆದರಿದರು. ಹೀಗೆ ನಾಡಿಗೆ ಬಂದ ಅದು ಅಮ್ಮಿಯೇ ಇರಬಹುದೆ?

ಅದಕ್ಕೆ ಈ ಊರು, ದಾರಿ, ತಮ್ಮ ಮನೆ ಎಲ್ಲವೂ ಗೊತ್ತಿದೆ. ಅದಕ್ಕೆ ಇಲ್ಲೆಲ್ಲ ತಿರುಗಾಡಿ ಅಭ್ಯಾಸವಿದೆ, ಆದರೂ ಅಮ್ಮಿಯನ್ನ ಕಾಡಿನಲ್ಲಿಯೇ ಬಿಡಬಾರದು ಅಂದುಕೊಂಡರು ದುಗ್ಗಪ್ಪ. ಒಂದಲ್ಲಾ ಒಂದು ರೀತಿಯಲ್ಲಿ ಅದನ್ನು ಊರಿಗೆ ತರಲೇಬೇಕು ಅಂದುಕೊಂಡರು.

ತಮ್ಮ ವಿಚಾರವನ್ನ ಫಕೀರನಿಗೂ ಹೇಳಿದರು. ಒಂದೆರಡು ಬಾರಿ ಆತ ತಾನು ಹೊಡೆದುಕೊಂಡು ಹೋದ ಗೊಲ್ಲೆಯನ್ನ ಮಂಕಾಳೆ ಬ್ಯಾಣದಲ್ಲಿ ಬಿಟ್ಟು ಹಿನ್ನೀರಿನಲ್ಲಿ ತಿರುಗಾಡಿ ಬಂದ. ಸಿಕ್ಕರೆ ಅಮ್ಮಿಯನ್ನ ಹೊಡೆದು ತಂದು ದುಗ್ಗಪ್ಪನವರ ಕೊಟ್ಟಿಗೆಯಲ್ಲಿ ಕಟ್ಟಬೇಕು ಅಂದುಕೊಂಡ. ಒಂದು ಎಮ್ಮೆಗೇ ಇಷ್ಟು ಸೊಕ್ಕಿರಬೇಕು ಅಂದರೆ ತನಗೆಷ್ಟು ಇರಬೇಡ, ಒಂದು ದಿನ ಅದನ್ನ ತಂದು ಕೊಟ್ಟಿಗೇಲಿ ಕಟ್ತೀನಿ ನೋಡಿ ಎಂದು ಸವಾಲೂ ಹಾಕಿದ.

ದುಗ್ಗಪ್ಪ ವೇಗವಾಗಿ ಸೈಕಲ್ ತಳ್ಳಿಕೊಂಡು ನೆಹರೂ ಮೈದಾನದತ್ತ ತಿರುಗಿದರು. ಆದರೂ ಅಮ್ಮಿಯ ಬದಲಾದ ಗುಣ ಸ್ವಭಾವದ ಬಗ್ಗೆ ಅವರಿಗೆ ಹೆದರಿಕೆ ಇತ್ತು.

* * *

ದುಗ್ಗಪ್ಪ ಈ ಭೀತಿಯಲ್ಲಿ ಇರಬೇಕಾದರೇನೆ ದನ ಮೇಯಿಸಲೆಂದು ಗೊಲ್ಲೆ ಹೊಡೆದುಕೊಂಡು ಹೋದ ಫಕೀರನ ಮೇಲೆ ಒಂದು ಕಾಡೆಮ್ಮೆ ಹತ್ತಿದ ಸುದ್ದಿ ಬಂದಿತು. ಫಕೀರನ ಜೀವಕ್ಕೆ ಏನೂ ತೊಂದರೆ ಆಗಲಿಲ್ಲ. ಆದರೆ ಆತನಿಂದ ಇನ್ನು ನಡೆಯಲಿಕ್ಕೆ ಆಗುವುದಿಲ್ಲ ಎಂದು ವೈದ್ಯರು ಹೇಳಿದ್ದು ಕೇಳಿ ಜನ ಬೇಸರ ಪಟ್ಟುಕೊಂಡರು. ದುಗ್ಗಪ್ಪ ಕೂಡ ಆಸ್ಪತ್ರೆಗೆ ಹೋಗಿ ಫಕೀರನನ್ನ ನೋಡಿ ಸಮಾಧಾನ ಹೇಳಿ ಬಂದರು.

ಮಾರನೇ ದಿನ ಮನೆ ಬಾಗಿಲಿಗೆ ಗೊಲ್ಲೆ ಹೊಡೆದುಕೊಂಡು ಹೋಗಲು ಬಂದ ಫಕೀರನ ಮಗ ನಂಜನನ್ನ ನಿಲ್ಲಿಸಿಕೊಂಡು ದುಗ್ಗಪ್ಪ ಹೇಳಿದರು, "ಅಮ್ಮೀನ ಹುಡುಕಲಿಕ್ಕೆ, ಹಿಡಿಯಲಿಕ್ಕೆ ನೀನೂ ಹೋಗಬೇಡ ನಂಜ... ಈ ಮುಳುಗಡೆ ಭಾಳ ಜನರ ಜೀವನವನ್ನ ಕಹಿ ಮಾಡಿದೆ... ಈ ಕಹಿ ಅಮ್ಮಿ ಮನಸ್ಸನ್ನ ಕೂಡ ಕೆಡಿಸಿದೆ. ಅದರ ಪಾಡಿಗೆ ಅದು ಕಾಡಲ್ಲೇ ಇರಲಿ ಬಿಡು... ಸುಖ ಅನ್ನೋದು ಅದಕ್ಕೆ ಅಲ್ಲೇ ಸಿಗುತ್ತೆ ಅನ್ನೋದಾದರೆ ಸಿಗಲಿ... ಅದರ ಸ್ವಾತಂತ್ರ್ಯಕ್ಕೆ ನಾವು ಯಾಕೆ ಅಡ್ಡ ಬರಬೇಕು... ಅಲ್ಲೇ ಇರಲಿ..."

ಹೆಗಲ ಮೇಲಿನ ಕಂಬಳಿಯನ್ನ ಸರಿಪಡಿಸಿಕೊಂಡು ನಂಜ ತಲೆಯಾಡಿಸಿದ.

**ಡಾ|| ನಾ. ಡಿಸೋಜ**
೨ನೇ ಅಡ್ಡರಸ್ತೆ, ನೆಹರು ನಗರ, ಸಾಗರ
ಶಿವಮೊಗ್ಗ ಜಿಲ್ಲೆ – ೫೭೭ ೪೦೧

# ಅಪಸವ್ಯವಿಲ್ಲದ ಮಾನವ್ಯ ಕವಿ

ಬಿ. ಎ. ಸನದಿಯವರು ಇಪ್ಪತ್ತು ಕವನ ಸಂಕಲನ, ಏಳು ಪ್ರಾತಿನಿಧಿಕ ಕವನ ಸಂಕಲನ, ಒಂಬತ್ತು ವಿಮರ್ಶಾ ಪುಸ್ತಕ, ಮೂರು ಸಣ್ಣ ಕಥಾ ಸಂಕಲನ, ಹನ್ನೆರಡು ಮಕ್ಕಳ ಸಾಹಿತ್ಯದ ಪುಸ್ತಕಗಳು, ಹದಿಮೂರು ಅನುವಾದಿತ ಕೃತಿಗಳು, ಆರು ಸಂಪಾದನ ಗ್ರಂಥಗಳು, ಎರಡು ನಾಟಕ, ಎರಡು ವ್ಯಕ್ತಿಚಿತ್ರ ಪುಸ್ತಕಗಳು, ಎರಡು ವಿನೋದ ಸಾಹಿತ್ಯದ ಪುಸ್ತಕಗಳನ್ನು ಬರೆದಿದ್ದಾರೆ. ಸನದಿ ಅವರಿಗೆ ಸಂದ ಅಭಿನಂದನಾ ಗ್ರಂಥಗಳು ೧೩. ೨೭ ವಿವಿಧ ಪ್ರತಿಷ್ಠಿತ ಪ್ರಶಸ್ತಿಗಳಿಂದ ಪುರಸ್ಕೃತರಾದ ಬಿ. ಎ. ಸನದಿಯವರ ಬರಹ, ಬದುಕಿನ ವಿಪುಲತೆ, ಸಫಲತೆ ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿದೆ.

೧೯೯೪ರಲ್ಲಿ ಮುಂಬೈ ಕರ್ನಾಟಕ ಸಂಘದ ವಿಶ್ವೇಶ್ವರಯ್ಯ ಸಭಾಗೃಹದಲ್ಲಿ ಸಂಘದ ವಜ್ರ ಮಹೋತ್ಸವ ಕಾರ್ಯಕ್ರಮ ಏರ್ಪಾಡಾಗಿತ್ತು. ಕಾರ್ಯಕ್ರಮದ ಸಂಚಾಲನೆಯ ಜವಾಬ್ದಾರಿ ಸನದಿಯವರದಾಗಿತ್ತು. ವೇದಿಕೆಯ ಮೇಲೆ ಅಂದಿನ ಮುಖ್ಯಮಂತ್ರಿ ಶ್ರೀ ಎಸ್. ಎಂ. ಕೃಷ್ಣ, ಮಹಾರಾಷ್ಟ್ರದ ರಾಜ್ಯಪಾಲ, ತಮಿಳುನಾಡಿನ ರಾಜ್ಯಪಾಲ ಹಾಗೂ ಸಂಘದ ಇನ್ನಿತರ ಗಣ್ಯರ ಉಪಸ್ಥಿತಿ ಇತ್ತು. ಸನದಿಯವರು ಕಾರ್ಯಕ್ರಮ ಪ್ರಾರಂಭಿಸಿದಾಗ ಕರ್ನಾಟಕದ ಅಂದಿನ ಕಾವೇರಿ ನಿಲುವನ್ನು ವಿರೋಧಿಸಲು ಅಚಾನಕ್ಕಾಗಿ ವೇದಿಕೆ ಹತ್ತಿದ ಒರಟು, ವಿವೇಚನಾರಹಿತ ಯುವಕನೊಬ್ಬ ಸನದಿಯವರ ಕೈಯಲ್ಲಿದ್ದ ಮೈಕನ್ನು ಕಿತ್ತುಕೊಳ್ಳಲು ಪ್ರಯತ್ನಿಸಿ ವಿಫಲನಾಗಿ ಸಿಟ್ಟಿನಿಂದ ಅವರ ಕೆನ್ನೆಗೆ ಬಾರಿಸಿದ. ಸನದಿಯವರ ಕನ್ನಡಕ ಸಿಡಿದು ಪ್ರೇಕ್ಷಕರ ಮೇಲೆ ಬಿದ್ದಿತ್ತು. ಇಡೀ ಸಭಾಗೃಹವೇ ಅನಿರೀಕ್ಷಿತ ಅಚಾತುರ್ಯಕ್ಕೆ ಸ್ತಂಭಿತವಾಗಿ ಕಸಿವಿಸಿಗೊಳಗಾಯಿತು. ಅಧ್ಯಕ್ಷರು ಸನದಿಯವರಿಗೆ ವಿರಮಿಸಲು ಹೇಳಿದರು. ಜೀವ ರೋಸಿಹೋಗುವಂತಹ ಆ ಘಟನೆಯ ನಂತರ ಸನದಿಯವರೇ ಎರಡೂವರೆ ಗಂಟೆಗಳ ಕಾಲ ಆ ಕಾರ್ಯಕ್ರಮದ ನಿರೂಪಣೆ ಮಾಡಿದರು. ಇವರ ಉತ್ಸಾಹ ಕಂಡ ಪ್ರೇಕ್ಷಕರಿಂದ ಚಪ್ಪಾಳೆಯ ಮಳೆ. ಬಿ. ಎ. ಸನದಿ ತಮ್ಮಿಡೀ ಬದುಕನ್ನು ಸ್ವೀಕರಿಸಿದ್ದು ಹೀಗೆಯೇ! 'ಸೂರ್ಯಪಾನ' ಮಾಡಿದ ಈ ಅನನ್ಯ ಕವಿಯ ಹತ್ತಿರ ಸುಳಿದ ನಂಜು ಕೂಡ ಮಂಜಿನಂತೆ ಕರಗಿ ಮುತ್ತಾಗಿ ಹೋಗುತ್ತಿತ್ತು.

ಕರ್ನಾಟಕದಲ್ಲಿಯೇ ಮೊತ್ತಮೊದಲಬಾರಿಗೆ ೧೯೯೮ರ ಡಿಸೆಂಬರ್‌ನಲ್ಲಿ ನಿಡಸೋಸಿಯ ಶ್ರೀ ನಿಜಲಿಂಗೇಶ್ವರ ಮಠದ ಆಶ್ರಯದಲ್ಲಿ ಡಾ॥ ಗುರುಪಾದ ಮರಿಗುದ್ದಿ ಬಿ. ಎ. ಸನದಿಯವರ 'ಸಾಹಿತ್ಯ ಸಮೀಕ್ಷೆ ವಿಚಾರ ಸಂಕಿರಣ'ವನ್ನು ಸಂಕೇಶ್ವರದಲ್ಲಿ ಏರ್ಪಡಿಸಿ ವಿಮರ್ಶಾ ಪುಸ್ತಕವನ್ನು ಪ್ರಕಟಿಸಿದರು."ಸನದಿ ಎಂದರೆ ಪ್ರೀತಿ, ಸಹೃದಯತೆ ಮತ್ತು ಸರಾಗವಾಗಿ ಒಳಗೊಳ್ಳುವಿಕೆ ಬಿಟ್ಟು ಮತ್ತೇನಿಲ್ಲ. ಹಿರಿಯರಾದರೂ ಯಾವ ತೋರಿಕೆಯೂ ಇಲ್ಲದೆ ಮನೆಗೇ ಬಂದು ಸಾಹಿತ್ಯದ ಕುರಿತು, ಇತ್ತೀಚಿನ ಬರಹಗಾರರ ಕುರಿತಾಗಿ ವಿಚಾರಿಸುವ ಅವರ ಕಳಕಳಿಯನ್ನು ಮರೆಯಲಾಗದು" ಎಂದು ಮರಿಗುದ್ದಿ ನೆನಪಿಸಿಕೊಳ್ಳುತ್ತಾರೆ."ಸನದಿ ಕವಿಯಾಗಿ ತಾವೊಬ್ಬರೇ ಬೆಳೆಯಲಿಲ್ಲ. ಸುತ್ತಲಿದ್ದವರನ್ನು ಬೆಳೆಸಿದರು. ಬದುಕು ಮತ್ತು ಬರಹ ಎರಡರಲ್ಲೂ ಎತ್ತರವನ್ನು ಕಾಯ್ದುಕೊಂಡಂತಹ ಅಪರೂಪದ ಲೇಖಕ" ಎಂದು ಪ್ರೊ॥ ಎಲ್. ವಿ. ಪಾಟೀಲ್ ಅಭಿಪ್ರಾಯ ಪಡುತ್ತಾರೆ.

ಬಿ. ಎ. ಸನದಿಯವರ ತಮ್ಮ ಕವಿ ಅಕಬರ ಸನದಿ ಅಣ್ಣನ ಕುರಿತು ಮಾತನಾಡುವಾಗ ಹನಿಗಣ್ಣಾಗುತ್ತಾರೆ. "ನಿನ್ನ ಕವಿತೆಗಳು ನಿನ್ನನ್ನು ಬೆಳೆಸಬೇಕೇ ಹೊರತು ನಾನಲ್ಲ" ಎಂದು ಹೇಳುವ ನಿಸ್ಪೃಹತೆ ಅಣ್ಣನಲ್ಲಿತ್ತು. ಆಕಾಶವಾಣಿಯಲ್ಲಿ ಅಧಿಕಾರಿಯುತ ಸ್ಥಾನದಲ್ಲಿದ್ದರೂ ಒಂದು ಸಲವೂ ತಮ್ಮ ಗೇಯ ಕವಿತೆಗಳನ್ನು ಹಾಡಿ ಎಂದು ಯಾವ ಕಲಾವಿದರಿಗೂ ಅಣ್ಣ ಹೇಳಲಿಲ್ಲ. ಅದು ಅವರ ದೊಡ್ಡತನ. ತಮ್ಮ ತಂದೆ ಆಶುಕವಿಗಳಾಗಿ, ಪಾರಿಜಾತ ಕಲಾವಿದರಾಗಿ, ಲಾವಣಿ, ಹಂತಿಪದ, ಜಾನಪದ ಕಾವ್ಯವನ್ನು ರಾಗವಾಗಿ ಹಾಡುತ್ತಿದ್ದರು. ಅವರ ಗುಣವೇ ಮುಂದೆ ಮಕ್ಕಳಲ್ಲಿ ಪ್ರಫುಲ್ಲವಾಗಿ ಪ್ರತಿಫಲಿತವಾಯಿತು. ಬಿ. ಎ. ಸನದಿ ಅವರ ಮೇಲೆ ಮನೆಯ ಹತ್ತಿರವಿದ್ದ ಕಲಾವಿದ ಗೋಸಾಯಿ ಅಪ್ಪಣ್ಣನದೂ ಪ್ರಭಾವವಾಗಿದೆ ಎನ್ನುತ್ತಾರೆ. ಬಿಡುವಿದ್ದಾಗ ತಮ್ಮನ ಮನೆಗೆ ಬಂದು ನಿಂತು ಹೋಗುತ್ತಿದ್ದ ಸನದಿ ತಮ್ಮ ಊರಿಗೆ ತಲುಪಿದ ಬಳಿಕ ತನ್ನನ್ನು ಚೆನ್ನಾಗಿ ನೋಡಿಕೊಂಡಿದ್ದಕ್ಕೆ ಮನೆಯವರೆಲ್ಲರಿಗೂ ಧನ್ಯವಾದ ತಿಳಿಸಿ ಇಳಿಗಾಲದಲ್ಲೂ ಕೃತಜ್ಞತೆ ತಿಳಿಸಿ ಪತ್ರ ಬರೆಯುತ್ತಿದ್ದರು. ಮೊಬೈಲಿನಲ್ಲಿ ಕನ್ನಡ ಅಕ್ಷರ ಟೈಪಿಸುವುದನ್ನು ಕಲಿಸಿದ ಅಕಬರರ ಮಗಳನ್ನು ಬಿ. ಎ. ಸನದಿ ಬಂದವರಿಗೆಲ್ಲ "ಇವಳು ನನ್ನ ಹೊಸಗನ್ನಡದ ಗುರು" ಎಂದು ಪರಿಚಯಿಸುತ್ತಿದ್ದ ಹೃದಯ ಸಂಪನ್ನತೆ ಅವರಿಗಿತ್ತೆಂದು ನೆನಪಿಸಿಕೊಳ್ಳುತ್ತಾರೆ.

ಸರಳತೆ, ನಿಷ್ಕಲ್ಮಶತೆಗೆ ಪ್ರತೀಕವೆಂಬಂತೆ ಬದುಕಿದ ಸನದಿ ಅವರ 'ಬದುಕಿನ ಬೇರು' ಮಾತ್ರ ಮಾನವತೆಯ 'ಗೀತ ಗುಂಜನ' ಮಾಡುತ್ತಾ ಭದ್ರವಾಗಿ ಹರಡಿ ಪರಂಪರೆಯ ಸತ್ವ–ತತ್ವಗಳನ್ನು ಹೀರಿ ಹುಲುಸಾಗಿ 'ಮರುಭೂಮಿ'ಯಲ್ಲೂ 'ನೆಲಸಂಪಿಗೆ' ಅರಳಿಸಿತು. ಅದಕ್ಕೆ ಜಿ. ಎಸ್. ಶಿವರುದ್ರಪ್ಪ "ಸನದಿ ನಮಗೆ ಸಾಹಿತ್ಯಕವಾಗಿ ಮಾತ್ರವಲ್ಲ ಸಾಂಸ್ಕೃತಿಕವಾಗಿಯೂ ಮುಖ್ಯರಾಗುತ್ತಾರೆ" ಎಂದು ಹೇಳುತ್ತಾರೆ. ಪಾಟೀಲ ಪುಟ್ಟಪ್ಪ "ಒಬ್ಬ ಒಳ್ಳೆಯ ಮುಸ್ಲಿಂ, ಒಬ್ಬ ಒಳ್ಳೆಯ ಕನ್ನಡಿಗ, ಒಬ್ಬ ಒಳ್ಳೆಯ ಭಾರತೀಯ ಹೇಗೆ ಇರುತ್ತಾನೆಂದು ಕೇಳಿದರೆ ನಾವು ಸನದಿಯವರ ಕಡೆಗೆ ಬೆರಳೆತ್ತಿ ತೋರಿಸಬಹುದು" ಎಂದು ಹೇಳಿದ್ದಾರೆ. ನೂರುವರ್ಷದ ಪಾಪು ಹುಬ್ಬಳ್ಳಿಯಿಂದ ಕುಮಟಾಕ್ಕೆ ಖುದ್ದಾಗಿ ಪ್ರಯಾಣಿಸಿ ತನ್ನ ಗೆಳೆಯನ ಅಗಲಿಕೆಯ ದುಃಖದಲ್ಲಿ ಹೆಗಲು ನೀಡಿದ್ದನ್ನು ಕಂಡಾಗ ಅವರ ಸ್ನೇಹದ ಆಳ ಆಶ್ಚರ್ಯವನ್ನುಂಟುಮಾಡುತ್ತದೆ. ಹೂ ಅರಳುವಾಗ, ಹೊರಳುವಾಗ, ಉರುಳುವಾಗ ಸದ್ದು ಮಾಡುವುದಿಲ್ಲ. ಇದ್ದಷ್ಟು ಕಾಲ ತನ್ನ ಚೆಂದದಿಂದ, ಗಂಧದಿಂದ ರಸ ಮನಸ್ಸುಗಳನ್ನು ಸೆಳೆದು ಒಂದು ಮಾಡುತ್ತದೆ. ಅಸಹನೆಯ ಉರಿಯಲ್ಲಿ ಕಾವ್ಯಾಮೃತ ಝುರಿ ಹರಿಸಿದ ಕವಿ ಸನದಿ ಮಾಡಿದ್ದು ಅದನ್ನೇ.



ಹಿರಿಯ ಸಾಧಕರ ನೆನಪಿನಲ್ಲಿ ಅವರ ಆತ್ಮೀಯರು, ಶಿಷ್ಯಂದಿರು, ಮಾರ್ಗದರ್ಶನ ಹೊಂದಿದವರು, ಕಿರಿಯರು ಕೃತಜ್ಞತಾಪೂರ್ವಕವಾಗಿ ಅಭಿನಂದನಾ ಗ್ರಂಥ, ಪ್ರತಿಷ್ಠಾನ ಸ್ಥಾಪಿಸುವುದು ವಾಡಿಕೆ. ಬೆಳಗಾವಿಯಲ್ಲಿ ಈಗ ಕಾರ್ಯಚಟುವಟಿಕೆ ಹೊಂದಿರುವ 'ಬಿ. ಎ. ಸನದಿ ಸಾಂಸ್ಕೃತಿಕ ಪ್ರತಿಷ್ಠಾನ'ವನ್ನು ಕಟ್ಟಿ ಬೆಳೆಸಿದವರು ದಿ. ಬ. ಗಂ. ತುರಮುರಿಯವರು ಸನದಿ ಅವರ ಗುರುಗಳು. ಗುರುಗಳಿಂದಲೇ ಶಿಷ್ಯನಿಗೆ ಕಾಣಿಕೆ! ಅವರ ಸ್ನೇಹ ಸಂಪದಕ್ಕೆ ಕವಿ ವಿಷ್ಣು ನಾಯ್ಕ

*"ಮುಗಿಯದ ಹಗಲಿದೇ ಈಗ ನಮಗೆ ನಡೆನಡೆದಷ್ಟೂ ಹಾದಿ*
*ಮಾಗಿ ಬಾಗಿದ ಮನಸೊಂದರ ಹಿತಕರೆ, ಹೆಸರಿದಕೆ ಸನದಿ"*

– ಎಂದು ಬರೆದಿರುವುದು ಅನುಭವಕ್ಕೆ ಬರುವ ಸಂಗತಿ.

**ರಾಜಕುಮಾರ ಸಂಕಪಾಳ ಗಳತಗಾ**
ಸರಕಾರಿ ಪ. ಪೂ. ಕಾಲೇಜು, ಮಜಲಟ್ಟಿ, ಚಿಕ್ಕೋಡಿ ತಾಲ್ಲೂಕು – ೫೯೧೨೨೬

ಬೆಂಗಳೂರು ಅಂತರರಾಷ್ಟ್ರೀಯ ಸಿನಿಮೋತ್ಸವ ಹಲವು ವೈಶಿಷ್ಟ್ಯಗಳನ್ನು ಉಳಿಸಿಹೋಗಿದೆ. ಒರಾಯನ್ ಮಾಲ್ ಫೆ. ೨೧ರಿಂದ ೨೮ರವರೆಗೆ ಮಧುರವಾದ ನೆನಪುಗಳಿಗೆ ಸಾಕ್ಷಿಯಾಗಿತ್ತು. ವಿಶ್ವದ ೬೦ ದೇಶಗಳಿಂದ ೨೨೫ ಚಿತ್ರಗಳು ಇಲ್ಲಿ ಪ್ರದರ್ಶನಗೊಂಡಿದ್ದವು. ಸಾಮಾಜಿಕ ವಿವಿಧ ಆಯಾಮದ ಅಂಶಗಳನ್ನು ಸಿನಿ ಪ್ರೇಕ್ಷಕರ ಮನದಾಳದಲ್ಲಿ ಅಚ್ಚಳಿಯದಂತೆ ಉಳಿಸಿದ ಹೆಗ್ಗಳಿಗೆ ಅಂತರರಾಷ್ಟ್ರೀಯ ಸಿನಿಮೋತ್ಸವದ್ದಾಗಿದೆ.

ಕಳೆದ ಫೆಬ್ರವರಿ ತಿಂಗಳು ಇಡೀ ವಿಶ್ವದ ಸಿನಿಮೋತ್ಸವಕ್ಕೆ ಸಾಕ್ಷಿಯಾಗಿತ್ತು. ಬೆಳಗ್ಗೆ ಒಂಬತ್ತು ಗಂಟೆಯಿಂದ ರಾತ್ರಿ ಹತ್ತು ಗಂಟೆಗಳವರೆಗೆ ಒರಾಯನ್ ಮಾಲ್ ಪ್ರೇಕ್ಷಕರಿಂದ ತುಂಬಿ ತುಳುಕಿ ಲಕಲಕ ಅಂತ ಹೊಳೆಯುತ್ತಿತ್ತು. ಫ್ರೆಂಚ್, ಜರ್ಮನ್, ಇಂಗ್ಲಿಷ್, ಅರೆಬಿಕ್, ಇಟಾಲಿಯನ್, ಅಮೆರಿಕನ್, ಕಜಕಿಸ್ತಾನ್, ರಷ್ಯನ್, ಜಪಾನ್... ಹೀಗೆ ವಿಶ್ವದ ಮೂಲೆ ಮೂಲೆಗಳ ಮೂವಿಗಳು ಸಿನಿಪ್ರೇಕ್ಷಕರಿಗೆ ರಸದೌತಣ ಉಣಬಡಿಸಿದ್ದವು. ಸಾಮಾಜಿಕ ಮೌಲ್ಯ, ರಾಜಕೀಯದ ಪಿತೂರಿ, ಪ್ರೇಮ ಪ್ರೀತಿಯ ಕಚಗುಳಿ, ಹಾರರ್ ಹಾಗೂ ವಿಧಿಯ ಹತ್ತಾರು ತಿರುವುಗಳ ತಿರುಳು, ಸರಸ, ಶೃಂಗಾರ ವಿರಹ, ಸಲಿಂಗಿಗಳ ಸಾಮಾಜಿಕ ನ್ಯಾಯ, ಮಿಲಿಟರಿ ಆಡಳಿತದ ಅಟ್ಟಹಾಸ, ಬಂದೂಕಿನ ಬರ್ಬರ ಕ್ರೌರ್ಯ, ಲೈಂಗಿಕ ಶೋಷಿತರ ಅವರ್ಣನೀಯ ನೋವು ಮುಂತಾದ ಪ್ರಕಾರಗಳಲ್ಲಿನ ಸಿನಿಮಾಗಳು ಬೆಂಗಳೂರಿನಲ್ಲಿ ಒಂದು ರೀತಿಯ ಬೆರಗಿನ ವಾತಾವರಣ ಸೃಷ್ಟಿಸಿದ್ದವು.

ಇದರಲ್ಲಿ ನಾವೇನೂ ಕಡಿಮೆ ಇಲ್ಲ ಅಂತ ಕನ್ನಡ ಚಿತ್ರಗಳೂ ಸೆಡ್ಡುಹೊಡೆದಿದ್ದು ವಿಶೇಷ. ಹಿಂದಿ, ತಮಿಳು, ಮಲಯಾಳಿ, ಮರಾಠಿ, ಗುಜರಾತಿ ಸೇರಿದಂತೆ ದೇಶದ ಅನೇಕ ಪ್ರಾದೇಶಿಕ ಭಾಷೆಗಳಿಗೇನೂ ಕೊರತೆ ಇರಲಿಲ್ಲ. ಕಥಾ ಹಂದರದ ವೈವಿಧ್ಯತೆ, ಚಿತ್ರಕತೆಯ ಸೊಗಸು, ಕಣ್ಣಿಗೆ ಇಂಪು ನೀಡುವ ಛಾಯಾಗ್ರಹಣದ ತಂಪು, ಒಂದಕ್ಕಿಂತ ಒಂದು ಮಾಧುರ್ಯ ಸೂಸುವ ಸೀನ್‌ಗಳು ಸಿನಿಮೋತ್ಸವದ ಸೊಗಸನ್ನು ಹೆಚ್ಚಿಸಿದ್ದವು. ಕಲಾತ್ಮಕ ಚಿತ್ರ, ಸಾಮಾಜಿಕ ಚಿತ್ರ ಹಾಗೂ ಸಂದೇಶಾತ್ಮಕ ಚಿತ್ರಗಳಂತೂ ಸಿನಿ ಪ್ರೇಕ್ಷಕರ ಮನದಾಳದಲ್ಲಿ ಪುಳಕಿತ ಅಲೆಗಳನ್ನೇಳಿಸಿದ್ದು ಉಲ್ಲೇಖನೀಯ. ಒಂದು ವಾರದಲ್ಲಿ ಇನ್ನೂರ ಇಪ್ಪತ್ತೈದು ಚಿತ್ರಗಳನ್ನು ವೀಕ್ಷಿಸುವುದೇ ಒಂದು ಸವಾಲು.

ವಿಶ್ವದ ಎಲ್ಲಾ ಐಡಿಯಾಲಜಿಗಳನ್ನು ಒಂದೇ ಸೂರಿನಡಿ ಅವಲೋಕಿಸುವ ಸುವರ್ಣಾಕಾಶ ಲಭಿಸಿದ್ದು ಖುಷಿ. ಸಿನಿಮಾವನ್ನು ಒಂದು ಫ್ಯಾಷನ್ ಆಗಿ ಅಧ್ಯಯನ ಮಾಡುವವರಿಗೆ, ಕಥಾವಸ್ತುವಿನ ಗ್ರಹಿಕೆಯ ನೆಲೆಗಳನ್ನು ಅರಿಯುವವರಿಗೆ, ಸಂಭಾಷಣೆಯ ಚಾತುರ್ಯ, ಸಂಗೀತದ ಸಪೋರ್ಟಿವ್ ಗುಣ ಮತ್ತು ಮುದ ನೀಡುವ ಛಾಯಾಗ್ರಹಣ ತಾಂತ್ರಿಕತೆಯನ್ನು ಶಾಸ್ತ್ರೀಯವಾಗಿ ಕಲಿಯುವ ಅಭ್ಯರ್ಥಿಗಳಿಗೆ ಅಂತರರಾಷ್ಟ್ರೀಯ ಸಿನಿಮೋತ್ಸವ ಉತ್ತಮ ವೇದಿಕೆ.

ಒಂದೊಂದು ಸಿನಿಮಾ ಒಂದೊಂದು ವೈವಿಧ್ಯತೆಯನ್ನು ಬಿಂಬಿಸುತ್ತಿದ್ದುದರಿಂದ ಹಲವೊಮ್ಮೆ ಚಿತ್ರದ ಗುಣಮಟ್ಟ ಅರ್ಥಮಾಡಿಕೊಳ್ಳುವುದರಲ್ಲೂ ಏರಿಳಿತ ಆಗುವ ಸಾಧ್ಯತೆಯನ್ನು ತಳ್ಳಿಹಾಕುವಂತಿರಲಿಲ್ಲ. ಅಂತಹ ಕೆಲವು ಚಿತ್ರಗಳನ್ನು ಸಂಕ್ಷಿಪ್ತವಾಗಿ ಈ ಕೆಳಗೆ ಅವಲೋಕಿಸಬಹುದು:

# ಬೆಂಗಳೂರಿನ ಬೊಗಸೆಯಲ್ಲರಳಿದ ಅಂತರರಾಷ್ಟ್ರೀಯ ಸಿನಿಮೋತ್ಸವ

ಡಾ॥ ಎಂ. ಮಹ್ಮದ್ ಬಾಷ ಗೂಳ್ಯಂ













### ಗಮನ ಸೆಳೆದ ಅಪರೂಪದ ಚಿತ್ರಗಳು

ರೆಸ್ಪೆಕ್ಟ್, ಕೋಲ್ಡ್ ವಾರ್, ಷಾಪ್ ಆಫ್ಟರ್, ಬ್ರಾ, ಡಾಗ್‌ಮನ್, ಎ ಲ್ಯಾಂಡ್ ಇಮ್ಯಾಜಿನ್ಡ್, ಒನ್ ಲಾಸ್ಟ್ ಡೀಲ್, ವಿಂಟರ್ ಫ್ಲೈಸ್, ಟೆಲ್ ಅವೀವ್ ಆನ್ ಪೈರ್, ದಿ ಏಂಜಲ್, ಇನ್‌ದ ಫೇಡ್, ಫತ್ವಾ.. ಮುಂತಾದ ಸಂಪೂರ್ಣ ಚಿತ್ರಗಳ ಬಗ್ಗೆ ಹೇಳಿದಷ್ಟು ಸರಕು ಇದೆ. ಇವೆಲ್ಲವುಗಳಿಗೆ ತಿಲಕವಿಟ್ಟಂತೆ ಕನ್ನಡದ ಹಲವಾರು ಚಿತ್ರಗಳೂ ಪ್ರದರ್ಶನಕ್ಕೆ ಆಯ್ಕೆಯಾಗಿದ್ದವು.

ಪೋಲಿಷ್ ಭಾಷೆಯ ಖ್ಯಾತ ನಿರ್ದೇಶಕ ಕಿಂಗ್‌ದೆಬ್ಸ್ಕಾ ಅವರ 'ಪ್ಲೇಯಿಂಗ್‌ಹಾರ್ಡ್' ಚಿತ್ರವು ಮದ್ಯಪಾನದ ದುರಂತ ಅವಸ್ಥೆಗೆ ಹಿಡಿದ ಕನ್ನಡಿ. ಮದ್ಯಪಾನದಿಂದ ಸರ್ವನಾಶವೇ ಹೊರತು ಪ್ರಗತಿಯಲ್ಲ ಎಂದಿದ್ದರು ಮಹಾತ್ಮ ಗಾಂಧಿ. ಈ ಒನ್‌ಲೈನ್ ತಿರುಳನ್ನೇ 'ಪ್ಲೇಯಿಂಗ್ ಹಾರ್ಡ್' ಮೂಲಕ ನಿರ್ದೇಶಕ ದೆಬ್ಸ್ಕಾ ಆಧುನಿಕ ನೆಲೆಯಲ್ಲಿ ತಾರ್ಕಿಕ ಅಂತ್ಯ ಹಾಡಿದ್ದಾರೆ. ಮೂವರು ಮಹಿಳೆಯರ ದಾರುಣತೆಯನ್ನು ವೈವಿಧ್ಯಮಯವಾಗಿ ಸೆರೆಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ. ಹಲವೆಡೆ ನಿರೂಪಣೆ ಲೆಂಗ್ತಿ ಅನ್ನಿಸಿದರೂ ಪಾತ್ರವರ್ಗದ ಭಾವುಕ ಅಭಿವ್ಯಕ್ತಿಗೆ ಫೋರ್ಸ್ ಅಗತ್ಯವಿಲ್ಲ ಎನ್ನುವ ಚಿಂತನೆಗೂ ಕಾರಣವಾಗುತ್ತಾರೆ. ದೊರೆತಾ ಎಂಬ ಹೆಸರಿನ ಮಹಿಳೆ ವಕೀಲೆಯಾಗಿದ್ದೂ ಕುಡಿತದಿಂದ ಉಂಟಾಗುವ ಕಲಹಕ್ಕೆ ಹೊಣೆ ತಾನಲ್ಲ ಅಂತ ವಾದಿಸುವುದು, ಸಮಾಜದಲ್ಲಿ ಮರ್ಯಾದೆಯ ಹಾಗೂ ಮಕ್ಕಳ ಸರ್ಜನ್ ತೆರೆಸಾ ಕುಡಿತದ ಕಾರಣಕ್ಕೇ ತನ್ನ ಕೌಟುಂಬಿಕ ಬದುಕನ್ನು ಕಳೆದುಕೊಳ್ಳುವುದು ಹಾಗೂ 'ಮಾಗ್ದಾ' ಹೆಸರಿನ ವಿದ್ಯಾರ್ಥಿನಿ ಎಲ್ಲವನ್ನೂ ಸರಿಪಡಿಸುವ ಹೊಣೆ ಹೊರುವುದು ಚಿತ್ರದ ಹೈಲೈಟ್. ಇಲ್ಲಿ ಈ ಮೂವರನ್ನು ಮೆಟಫರ್ ಆಗಿ ಬಳಕೆ ಮಾಡುವಲ್ಲಿ ದೆಬ್ಸ್ಕಾ ಯಶಸ್ವಿಯಾಗುತ್ತಾರೆ. ಕುಡಿತದಿಂದ ವಿನಾಶವೆಂಬ ಸಂದೇಶ ಸಾರುತ್ತಾರೆ ಒಂದು ಚಿತ್ರದ ತಾರ್ಕಿಕ ಅಂತ್ಯ ಎಲ್ಲರಿಗೂ ಇಷ್ಟವಾಗುವುದು ಆ ಕಾರಣಕ್ಕೆ ...!

ಖಾಸಗಿ ಶಿಕ್ಷಣ ವ್ಯವಸ್ಥೆಯ ಕರಾಳ ದಂಧೆಯಿಂದ ಸರಕಾರಿ ಶಾಲೆಗಳು ಅವಸಾನದ ಅಂಚಿಗೆ ತಲುಪಿವೆ. ಎಲ್ಲರಿಗೂ ಕಡ್ಡಾಯ ಶಿಕ್ಷಣ ಅಂತ ನಮ್ಮ ಸಂವಿಧಾನ ಹೇಳುತ್ತಿದೆ. ಆದರೆ ಆಗುತ್ತಿರುವುದೇನು...? ಈ ಪ್ರಶ್ನೆಗೆ ಉತ್ತರ ಇಲ್ಲಿ ಅನಗತ್ಯ. ಆದರೆ ಪರ್ಶಿಯನ್ ಭಾಷೆಯ 'ವೈಲ್ಡ್‌ಜಾಕ್ವಿಲ್ಸ್' ಚಿತ್ರವು ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣದ ಅಗತ್ಯತೆಗೆ ಪೂರಕವಾಗಿ ಸ್ಪಂದಿಸುತ್ತದೆ. ನಿರ್ದೇಶಕ ರಹ್ಬಾರ್ ಘನ್‌ಬಾರಿ ಶಿಕ್ಷಣದ ಮಹತ್ವದ ಜೊತೆಗೆ ಆಧುನಿಕ ಜಗತ್ತಿನಲ್ಲಿ ಅದರ ಅನಿವಾರ್ಯತೆಯನ್ನು ಪ್ರತಿಪಾದಿಸುತ್ತಾರೆ. ಒಪ್ಪೊತ್ತಿನ ಊಟಕ್ಕೂ ಪರದಾಡುವ ಸ್ಥಿತಿಯಲ್ಲಿ ಶಿಕ್ಷಣ ಯಾರಿಗೆ ಬೇಕು ಎಂಬ ಗ್ರಾಮೀಣ ಜನರ ಉಡಾಫೆತನಕ್ಕೆ ಶಿಕ್ಷಣದ ಮೂಲಕವೇ ಪ್ರಗತಿ ಎಂಬ ಮಂತ್ರ ಚಿತ್ರದುದ್ದಕ್ಕೂ ಕಾಣುವಂತೆ ನೋಡಿಕೊಳ್ಳುವಲ್ಲಿ ಘನ್‌ಬಾರಿ ಯಶಸ್ವಿಯಾಗುತ್ತಾರೆ.

ಕಾರ್ಖಾನೆಗಳಿಂದ ಯಾರಿಗೆ ನೆಮ್ಮದಿ ಸಿಕ್ಕಿದೆ...? ಪುರೋಭಿವೃದ್ಧಿಯ ಹೆಸರಲ್ಲಿ ನಡೆಯುವ ದೌರ್ಜನ್ಯ ನಿಜಕ್ಕೂ ಹಾನಿಕರ. ಇಂತಹ ವಿಚಾರಗಳ ವಿರುದ್ಧ ಪ್ರಜ್ಞಾವಂತರು ಸದಾ ಹೋರಾಡುತ್ತಲೇ ಬಂದಿದ್ದಾರೆ. ಐಸ್‌ಲ್ಯಾಂಡಿಕ್ ಭಾಷೆಯ 'ಉಮನ್ ಅಟ್ ವಾರ್' ಚಿತ್ರ ಕಾರ್ಖಾನೆಗಳ ದಾರುಣತೆಗೆ ಒಂದು ಉತ್ತಮ ಪ್ರತಿಮೆ. ಮಧ್ಯಮ ವಯಸ್ಸಿನ 'ಹಲಾ' ಎಂಬ ಮಹಿಳೆ ಅಲ್ಯೂಮಿನಿಯಂ ಕಾರ್ಖಾನೆಯ ವಿರುದ್ಧ ತಿರುಗಿ ಬೀಳುತ್ತಾಳೆ. ಅದರಿಂದಾಗುವ ಸಕಾರಾತ್ಮಕತೆಗಿಂತ ನಕಾರಾತ್ಮಕ ಅಂಶವನ್ನು ಪ್ರತಿಪಾದಿಸಿ 'ಯುದ್ಧ'ವನ್ನೇ ಮಾಡುತ್ತಾಳೆ. ಆಧುನಿಕ ಯುಗದಲ್ಲಿ ಇದರ ಅಗತ್ಯ ಮತ್ತು ಇಂತಹ ಕಲುಷಿತ ಕಾರ್ಖಾನೆಗಳನ್ನು ಕಿತ್ತೊಗೆದಾಗಲೇ ನೆಮ್ಮದಿ ಎಂಬುದನ್ನು ನಿರ್ದೇಶಕ ಓಲ್ಮೊ ಒಮೆರ್ಜೂ ಅರ್ಥಪೂರ್ಣವಾಗಿ ಕಟ್ಟಿಕೊಟ್ಟಿದ್ದಾರೆ.

ಪ್ರಾಚೀನ ಕಾಲದ ನೆಲ ಮೂಲ ಸಂಸ್ಕೃತಿಗೂ ಯಾಂತ್ರೀಕೃತ ಆಧುನಿಕತೆಗೂ ತಿಕ್ಕಾಟ ನಿರಂತರವಾಗಿ ನಡೆದೇ ಇದೆ. ಯಶಸ್ಸಿನ ಬೇರುಗಳು ಹಳ್ಳಿಗಳಲ್ಲಿ ಎನ್ನುವ ಮಾರ್ಕ್ಸ್‌ನ ಮಾತು ಸತ್ಯವೋ ತಂತ್ರಜ್ಞಾನದ ಪ್ರಗತಿ ಮಿಥ್ಯವೋ ಎಂಬ ಸಂಘರ್ಷಕ್ಕೆ ತಾರ್ಕಿಕ ವೇದಿಕೆ 'ಆಗಾ' ಚಿತ್ರ. ಬಲ್ಗೇರಿಯನ್ ಭಾಷೆಯ ನಿರ್ದೇಶಕ ಮಿಲ್ಕೋ ಲಾಜರೊವ್ ನಾಲ್ಕೈದು ಪಾತ್ರಗಳ ಮೂಲಕ ಇಡೀ ಜನಮುಖಿ ಸಂಸ್ಕೃತಿಗೆ ಚಿಂತನೆಯ ಎಳೆಯಾಗಿ ಕಾಡುತ್ತಾರೆ. ಬಲ್ಗೇರಿಯಾದಂಥ ಚಳಿ ಪ್ರದೇಶಗಳಲ್ಲಿ ಅದರಲ್ಲೂ ಗುಡ್ಡಗಾಡು ಜನಾಂಗ ಹಿಮಪ್ರದೇಶದಲ್ಲೇ ಬದುಕು ಕಟ್ಟಿಕೊಳ್ಳುವ ಪರಿ ಅಚ್ಚರಿ, ಅನನ್ಯ.

ಹಿಮಸಾರಂಗ ಪ್ರಾಣಿಗಳನ್ನು ಬೇಟೆಯಾಡಿ ಜೀವನ ಸಾಗಿಸುವ ನಾನೂಕ್ ಹಾಗೂ ಸೆಡ್ನು ದಂಪತಿ ಎಷ್ಟೇ ಕಷ್ಟ ಬಂದ್ರೂ ತಮ್ಮ ಸಂಪ್ರದಾಯದ ಬೇಟೆ ಆಡುವ ಕಸುಬು ತ್ಯಜಿಸಿದವರಲ್ಲ. ಮಗಳು 'ಆಗಾ' ಪೋಷಕರನ್ನು ಬಿಟ್ಟು ದೊಡ್ಡ ಕಂಪನಿಯಲ್ಲಿ ಅತ್ಯುತ್ತಮ ನೌಕರಿಯಲ್ಲಿದ್ದರೂ ನಾನಕ್, ಸೆಡ್ನು ಮಾತ್ರ ಹಿಮಪ್ರದೇಶ ಬಿಟ್ಟು ಬರಲ್ಲ. ವಿಧಿಯ ದುರಂತ ಹಲವು ಮಜಲುಗಳನ್ನು ಸೃಷ್ಟಿಸಿದರೂ ಕೊನೆಗೆ ಆಧುನಿಕತೆಗೆ ಒಗ್ಗಿಕೊಳ್ಳುವುದು ಅನಿವಾರ್ಯ ಎನ್ನುವುದು ಆಗಾ ಚಿತ್ರಕತೆಯ ಸಾರ. ಮಧ್ಯೆ ಮಧ್ಯೆ ಬೀಸುವ ಗಾಳಿ, ಅನಗತ್ಯ ಸೀನ್‌ಗಳು ಹಾಗೂ 'ಆಗಾ' ಪೂರಕವಲ್ಲದ ಸಂಭಾಷಣೆ ಇದ್ದರೂ ಸಂಪ್ರದಾಯದ ಗಟ್ಟಿತನದ ನಡುವೆ ಇಂತಹ ತಪ್ಪುಗಳು ನಗಣ್ಯವಾಗುತ್ತವೆ. ಚಿತ್ರದ ಯಶಸ್ಸಿನ ಮುಂದೆ ಪ್ರೇಕ್ಷಕ ತಪ್ಪು ಹುಡುಕದಂತೆ ಚಿತ್ರದ ಅಂತ್ಯ ಹಾಡಿರುವುದು ನಿರ್ದೇಶಕನ ಜಾಣ್ಮೆಗಳಲ್ಲಿ ಒಂದು..!

ಮಾನವ ಎಷ್ಟೇ ಮುಂದುವರಿದಿದ್ದರೂ ಕೌಟುಂಬಿಕ ಬಾಂಧವ್ಯದಲ್ಲಿ ಯಾವುದೇ ಬದಲಾವಣೆ ಆಗದು. ಅದು ಭಾರತವಾಗಿರಬಹುದು, ವಿದೇಶವಾಗಿರಬಹುದು ಅಥವಾ ಮತ್ತಾವುದೇ ಪ್ರದೇಶವಾಗಿರಬಹುದು ಮಾನವೀಯತೆಯ ಕೌಟುಂಬಿಕ ವ್ಯವಸ್ಥೆಯಲ್ಲಿ ಸಮಾನಾಂತರಗಳಿರುತ್ತವೆಯೇ ಹೊರತು ಭಿನ್ನತೆಗಳು ಕಡಿಮೆ. ಅದರಲ್ಲೂ ಒಬ್ಬ ತಂದೆ ಇಬ್ಬರು ಹೆಣ್ಣುಮಕ್ಕಳ ವಾತ್ಸಲ್ಯವನ್ನು ಕಣ್ಣಾರೆ ಕಂಡು ಅನುಭವಿಸುವ ರಸರೂಪಿ ಚಿತ್ರ ರಿಯಲ್‌ಲವ್. ದೂರವಾದ ಪತ್ನಿಯನ್ನು ಎಷ್ಟು ಪ್ರೀತಿಸಲು ಸಾಧ್ಯ ಎನ್ನುವುದಕ್ಕೆ ಚಿತ್ರದ ನಾಯಕ ಮಾರಿಯೋ ಉತ್ತಮ ಉದಾಹರಣೆ. ತಾಯಿ ದೂರವಾಗಲು ಕಾರಣ ತಂದೆ ಎನ್ನುವ ಕಾರಣಕ್ಕೆ ಆತನನ್ನು ದ್ವೇಷಿಸುವ ಚಿಕ್ಕ ಮಗಳು ಫ್ರಿದಾ, ಸಹಜ ಸನ್ನಿವೇಶದಲ್ಲಿ ದೂರವಾಗುವ ಹದಿ ಹರೆಯದ ಹಿರಿಯ ಮಗಳು ನಿಕಿ ಇವರನ್ನೆಲ್ಲಾ ಬಿಟ್ಟಿರಲಾರದ ತಂದೆ ಮಾರಿಯೋ ತುಮುಲವನ್ನು ಪ್ರೇಕ್ಷಕರ ಎದೆಯಾಳಕ್ಕೆ ಎರಕಹೊಯ್ಯುವಲ್ಲಿ ಫ್ರೆಂಚ್ ನಿರ್ದೇಶಕಿ ಕ್ಲೈಯರ್ ಬರ್ಗರ್ ಯಶಸ್ವಿಯಾಗಿದ್ದಾರೆ... ಹೀಗೆ ಬೆಂಗಳೂರಿನಲ್ಲಿ ನಡೆದ ಪ್ರತಿಯೊಂದು ವಿದೇಶಿ ಚಿತ್ರಗಳೂ ತನ್ನದೇ ಆದ ವೈಶಿಷ್ಟ್ಯಗಳಿಂದ ಕೂಡಿದ್ದವು. ಇವೆಲ್ಲವುಗಳ ನಡುವೆ ಕರ್ನಾಟಕ ಚಲನಚಿತ್ರ ವಾಣಿಜ್ಯ ಮಂಡಳಿ ಮತ್ತು ಆಯ್ಕೆ ಕಮಿಟಿ ನಡುವೆ ಸಣ್ಣಪುಟ್ಟ ಮನಸ್ತಾಪಗಳೂ ಇದ್ದವು. ಹಲವು ಚಿತ್ರಗಳ ಸಂವಾದಕ್ಕೆ ಬರಬೇಕಾದವರೇ ಬರಲಿಲ್ಲ ಎನ್ನುವ ದೂರುಗಳೂ ಇದ್ದವು. ಒಂದು ಯಶಸ್ವೀ ಸಿನಿಮೋತ್ಸವದ ಯಶೋಗಾಥೆಯಲ್ಲಿ ಇಂತಹ ಗೊಂದಲಗಳಿರುವುದು ಸಹಜ ಅಲ್ಲವೇ...?

### ಕನ್ನಡದ ಕಂಪು ಸೂಸಿದ ಸಿನಿಮಾಗಳು

ಸಿನಿಮೋತ್ಸವದಲ್ಲಿ ಕ್ರಮವಾಗಿ ಬಹುಮಾನಗಳನ್ನು ಪಡೆದ ಮೂಕಜ್ಜಿಯ ಕನಸುಗಳು, ಸಾವಿತ್ರಿಬಾ ಫುಲೆ, ರಾಮನ ಸವಾರಿ ಚಿತ್ರಗಳು ಕನ್ನಡಿಗರ ಔನತ್ಯವನ್ನು ಸಾರಿದರೆ ಪಾಂಡುಪುರ ಮಂಜು ಅವರು ನಿರ್ದೇಶಿಸಿದ್ದ 'ಸ್ಮಶಾನ ಮೌನ' ಚಿತ್ರವು ಸಿನಿಮೋತ್ಸವದಲ್ಲಿ ಪ್ರೇಕ್ಷಕರ ಮನದಲ್ಲಿ ಅಚ್ಚಳಿಯದ ಸ್ಥಾನವನ್ನು ಗಳಿಸಿದೆ. ಇದಕ್ಕೆ ಚಿತ್ರಕತೆ ಹಾಗೂ ಸಂಭಾಷಣೆಯನ್ನು ಬಿ. ಶಿವಾನಂದ ಬರೆದಿದ್ದಾರೆ. ಇನ್ನೂ ತಮಿಳು, ಮಲಯಾಳಿ, ಮರಾಠಿ, ಹಿಂದಿ ಸೇರಿದಂತೆ ಭಾರತದ ಪ್ರತಿಯೊಂದು ಪ್ರದೇಶದ ಚಿತ್ರಗಳೂ ಪ್ರೇಕ್ಷಕರ ಕಣ್ಮನ ತಣಿಸುವ ಕೆಲಸ ಮಾಡಿದ್ದವು.

ಡಾ॥ ಎಂ. ಮಹ್ಮದ್ ಬಾಷ ಗೂಳ್ಯಂ
ಐ–೫೭ ೧/೩, ೭ನೇ 'ಬಿ' ಮೈನ್, ೭ನೇ ಕ್ರಾಸ್, 'ಸಿ' ಬ್ಲಾಕ್, ಗಾಯತ್ರಿನಗರ, ಬೆಂಗಳೂರು–೨೧

ಇತ್ತೀಚೆಗಿನ ವರ್ಷಗಳಲ್ಲಿ ಭಾರತಕ್ಕೆ ಬರುವ ಆಫ್ರಿಕಾ ಮೂಲದ ವಿದ್ಯಾರ್ಥಿ ಸಮುದಾಯದ ಮೇಲೆ ದೇಶಾದ್ಯಂತ ಭಾರತೀಯ ನಾಗರಿಕರಲ್ಲಿ ಸಂಶಯ ಮತ್ತು ಅಸಹನೆ ಹೆಚ್ಚುತ್ತಿದೆ. ಸೋಮಾಲಿಯಾ, ಇಥಿಯೋಪಿಯಾ, ನೈಜೀರಿಯಾ, ಕೀನ್ಯ... ಹೀಗೆ ಆಗ್ನೇಯ ಮತ್ತು ಪಶ್ಚಿಮ ಆಫ್ರಿಕಾ ರಾಷ್ಟ್ರಗಳಿಂದ ಬರುತ್ತಿರುವ ಕೆಲವರು ವಿದ್ಯಾರ್ಥಿಗಳ ಸೋಗಿನಲ್ಲಿ ಭಾರತದ ಹಲವು ನಗರಗಳಲ್ಲಿ ಸೈಬರ್ ವಂಚನೆ, ಮೋಸ, ಅಫೀಮು ಮಾರಾಟ, ವೇಶ್ಯಾವಾಟಿಕೆಯಲ್ಲಿ ತೊಡಗಿಕೊಂಡಿರುವುದು ಇಂತಹ ಅಸಹನೆಗೆ ಕಾರಣವಾಗಿರುವುದರ ಜೊತೆಗೆ ಹಲ್ಲೆಯಂತಹ ಪ್ರಕರಣಗಳು ಸಹ ನಿರಂತರವಾಗಿ ನಡೆಯುತ್ತಿವೆ.

ಆಫ್ರಿಕಾ ಮೂಲದ ಕಪ್ಪು ಜನಾಂಗವೆಂದರೆ, ಮೋಸ, ವಂಚನೆಯಲ್ಲಿ ಪಳಗಿದವರು ಎಂಬ ನಂಬಿಕೆ ದಿನೇ ದಿನೇ ದಟ್ಟವಾಗುತ್ತಿದೆ. ಈ ಕಾರಣದಿಂದಾಗಿ ಕಪ್ಪು ಜನಾಂಗವನ್ನು ಸಂಶಯದ ಕಣ್ಣುಗಳಿಂದ ನೋಡುವ ಹವ್ಯಾಸ ಕೂಡ ಬೆಳೆಯುತ್ತಿದೆ. ಕಪ್ಪನೆಯ ಮೈ ಬಣ್ಣ, ಬಲಾಢ್ಯವಾದ ಹಾಗೂ ಹುರಿಗಟ್ಟಿದಂತಹ ದೇಹ, ದಪ್ಪನೆಯ ತುಟಿಗಳು ಮತ್ತು ದಟ್ಟವಾದ ಗುಂಗುರು ಕೂದಲು ಇಂತಹ ಲಕ್ಷಣವನ್ನು ಹೊಂದಿರುವ ಈ ಜನಾಂಗವನ್ನು ವಂಚಕರೆಂದು ನಾವೆಲ್ಲಾ ಭಾವಿಸಿರುವಾಗ, ಇದೇ ನೆಲದಲ್ಲಿ ಕಳೆದ ಒಂದು ಸಾವಿರದ ನಾಲ್ಕುನೂರು ವರ್ಷಗಳಿಂದ ಆಫ್ರಿಕಾದ ಆಗ್ನೇಯ ಭಾಗದ ಬಂಟು ಬುಡಕಟ್ಟು ಸಮುದಾಯಕ್ಕೆ ಸೇರಿದ ಸಿದ್ದಿ ಜನಾಂಗದ ಜನತೆ ಸ್ಥಳೀಯ ನೆಲಮೂಲ ಸಂಸ್ಕೃತಿಯನ್ನು ಒಪ್ಪಿಕೊಂಡು ನಮ್ಮೊಳಗಿದ್ದೂ ನಮ್ಮವ ರಾಗದೆ ಅನಾಮಿಕರಂತೆ ಬದುಕುತ್ತಿದೆ. ಭಾರತದ ಪಶ್ಚಿಮ ಕರಾವಳಿಯುದ್ದಕ್ಕೂ ಮತ್ತು ಆಂಧ್ರದ ಹೈದರಾಬಾದ್ ಹಾಗೂ ಪಶ್ಚಿಮ ಬಂಗಾಳದ ಕೊಲ್ಕತ್ತ ಸೇರಿದಂತೆ, ದೆಹಲಿ, ಲಕ್ನೋ ಹಾಗೂ ಪಾಕಿಸ್ತಾನದ ಕರಾಚಿ ನಗರ ಮತ್ತು ಬಲೂಚಿಸ್ತಾನ್ ಪ್ರಾಂತ್ಯದಲ್ಲಿ ಸಿದ್ದಿ ಜನಾಂಗವು ಹಿಂದೂ, ಇಸ್ಲಾಂ ಮತ್ತು ಕ್ರೈಸ್ತ ಧರ್ಮವನ್ನು ಅಳವಡಿಸಿಕೊಂಡು ಬದುಕುತ್ತಿದೆ. ಸ್ಥಳೀಯ ಭಾಷೆ, ಆಹಾರ, ಉಡುಗೆ ಮತ್ತು ತೊಡುಗೆಗಳ ಮೂಲಕ ಸ್ಥಳೀಯ ಸಮುದಾಯದ ಅನುಕಂಪದಲ್ಲಿ ಕೃಷಿ ಕೂಲಿಕಾರ್ಮಿಕರಾಗಿ, ಜೀತದಾಳು ಗಳಾಗಿ ಮತ್ತು ಅರಣ್ಯದ ನಡುವೆ ಗುಡಿಸಲು ಕಟ್ಟಿಕೊಂಡು ಅರಣ್ಯದ ಕಿರು ಉತ್ಪನ್ನಗಳನ್ನು ನಂಬಿ ಬದುಕುತ್ತಿರುವ ಸಿದ್ದಿ ಜನಾಂಗದ ಜನಸಂಖ್ಯೆ ಭಾರತದಲ್ಲಿ ಸುಮಾರು ಐವತ್ತಾರಿಂದ ಎಪ್ಪತ್ತು ಸಾವಿರವಿದ್ದರೆ, ನೆರೆಯ ಪಾಕಿಸ್ತಾನದಲ್ಲಿ ಎಂಬತ್ತು ಸಾವಿರ ಜನಸಂಖ್ಯೆಯಷ್ಟು ಇದ್ದಾರೆ.

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆಯ ಮುಂಡಗೋಡ, ಅಂಕೋಲ, ಯಲ್ಲಾಪುರ, ಹಳಿಯಾಳ, ಜೋಯಿಡ ಮತ್ತು ಬೆಳಗಾವಿಯ ಖಾನಾಪುರ ಹಾಗೂ ಮಹಾರಾಷ್ಟ್ರದ ರಾಯಗಡ ಜಿಲ್ಲೆಯ ಪಶ್ಚಿಮ ಕರಾವಳಿಯ ಹಳ್ಳಿಗಳು ಮತ್ತು ಗುಜರಾತಿನಲ್ಲಿ ಭರೂಚ್ ಜಿಲ್ಲೆಯಲ್ಲಿ ಬಹುತೇಕ ಮಂದಿ ನೆಲೆಗೊಂಡಿದ್ದಾರೆ. ಕರ್ನಾಟಕದಲ್ಲಿ ೧೦,೪೭೭ ಮಂದಿ, ಗುಜರಾತಿನಲ್ಲಿ ೮,೬೧೧, ಹೈದರಾಬಾದ್ ನಗರದಲ್ಲಿ ೧೮೦೦, ಗೋವಾ, ಡಿಯು, ಡಾಮನ್‌ನಲ್ಲಿ ೧೯೩ ಮಂದಿ ಸಿದ್ದಿಗಳು ವಾಸಿಸುತ್ತಿದ್ದಾರೆಂದು ಹೇಳಲಾಗಿದೆ. ಕರ್ನಾಟಕ ದಲ್ಲಿರುವ ಸಿದ್ದಿ ಜನಾಂಗವು ನಾನೂರು ವರ್ಷಗಳ ಹಿಂದೆ ಪೋರ್ಚುಗೀಸರ ಗುಲಾಮರಾಗಿ ಭಾರತಕ್ಕೆ ಬಂದವರಾಗಿದ್ದಾರೆ. ಆದರೆ, ದೆಹಲಿ, ಲಕ್ನೋ, ಗುಜರಾತ್ ಮತ್ತು ಮಹಾರಾಷ್ಟ್ರ ರಾಜ್ಯಗಳಲ್ಲಿ ವಾಸಿಸುತ್ತಿರುವ ಸಿದ್ದಿ ಜನಾಂಗವು ಏಳನೇ ಶತಮಾನದಲ್ಲಿ ಭಾರತಕ್ಕೆ ದಾಳಿ ಮಾಡಿದ ಮುಸ್ಲಿಂ ದಾಳಿಕೋರರ ಸೇನೆಯ ಕಾಲಾಳು ಗಳಾಗಿ ಬಂದ ಸುದೀರ್ಘವಾದ ಇತಿಹಾಸವಿದೆ. ಇವರಲ್ಲಿ ಅನೇಕರು ಸ್ಥಳೀಯ ಸಂಸ್ಥಾನಗಳಲ್ಲಿ ಜಮಾವಣೆಗೊಂಡರು. ಅರಬ್ಬರು ಆಫ್ರಿಕಾದ ಆಗ್ನೇಯ ಪ್ರಾಂತ್ಯದಿಂದ ಇವರನ್ನು ಕರೆತಂದು ಭಾರತದ

# ನಮ್ಮೊಳಗಿದ್ದೂ ನಮ್ಮವರಾಗದ ಸಿದ್ದಿ ಜನಾಂಗ



ಡಾ॥ ಎನ್. ಜಗದೀಶ್ ಕೊಪ್ಪ

ಹಲವು ಧರ್ಮಗಳ ನಡುವೆ ಹಂಚಿಹೋಗಿರುವ ಸಿದ್ದಿ ಜನಾಂಗದಲ್ಲಿ ತಮ್ಮ ಕುಟುಂಬದಿಂದ ಹೆಣ್ಣನ್ನು ಕೊಡುವ ಅಥವಾ ತರುವ ವಿಚಾರದಲ್ಲಿ ಧರ್ಮದ ಕಟ್ಟಳೆಯಿಲ್ಲದಿರುವುದು ವಿಶೇಷವಾಗಿದೆ. ಗಂಡು-ಹೆಣ್ಣು ಎರಡೂ ಧರ್ಮದ ಗುರುಗಳು ವಿವಾಹ ಸಂಸ್ಕಾರದ ವಿಧಿ ವಿಧಾನಗಳನ್ನು ನೆರವೇರಿಸಿ ಕೊಡುತ್ತಾರೆ. ವಿಧವಾ ವಿವಾಹ ಮತ್ತು ವಿವಾಹ ವಿಚ್ಛೇದಿತರ ಪುನರ್ ವಿವಾಹಕ್ಕೆ ಈ ಜನಾಂಗದಲ್ಲಿ ಅವಕಾಶವಿದೆ.



ಸಂಸ್ಥಾನದ ದೊರೆಗಳಿಗೆ ಮಾರಾಟ ಮಾಡುತ್ತಿದ್ದರು. ಕಠಿಣ ದುಡಿಮೆ, ಸಾಹಸ ಹಾಗೂ ಸ್ವಾಮಿನಿಷ್ಠೆಗೆ ಹೆಸರಾದ ಸಿದ್ದಿ ಜನಾಂಗದಲ್ಲಿ ಹಲವರು ಸೇನೆಯ ದಂಡನಾಯಕರಾಗಿ ಸೇವೆ ಸಲ್ಲಿಸಿದ ಇತಿಹಾಸ ಭಾರತದ ಚರಿತ್ರೆಯಲ್ಲಿ ದಾಖಲಾಗಿದೆ. ಹೈದರಾಬಾದಿನ ನಿಜಾಮನ ಸೇನೆಗೆ ಮತ್ತು ಬಂಗಾಳದ ನವಾಬನ ಸೇನೆಯಲ್ಲಿ ಸೈನಿಕರಾಗಿ ಸೇವೆ ಸಲ್ಲಿಸಲು ಬಂದ ಸಿದ್ದಿ ಜನಾಂಗದಲ್ಲಿ ಇದೀಗ ಕೇವಲ ಬೆರಳೆಣಿಕೆಯಷ್ಟು ಮಾತ್ರ ಉಳಿದಿದ್ದಾರೆ. ಇವರಿಗಿಂತ ಭಿನ್ನವಾದ ಇತಿಹಾಸ ನಮ್ಮ ಪಶ್ಚಿಮ ಘಟ್ಟದ ಕರಾವಳಿಯ ಸಿದ್ದಿ ಜನಾಂಗದ್ದಾಗಿದೆ. ಪೋರ್ಚುಗೀಸರ ಮೂಲಕ ಗುಲಾಮರಾಗಿ ಭಾರತಕ್ಕೆ ಬಂದು ಬದುಕು ಕಟ್ಟಿಕೊಂಡಿರುವ ಇವರನ್ನು ನತದೃಷ್ಟ ಜನಾಂಗ ಎನ್ನಬಹುದು. ಮುಗ್ಧತನ ಮತ್ತು ತಾಳ್ಮೆ ಹಾಗೂ ಸಹಿಷ್ಣುತೆಗೆ ಹೆಸರಾದ ಆಫ್ರಿಕಾದ ಈ ಜನಾಂಗವನ್ನು ಯುರೋಪಿಯನ್ನರು ತಮ್ಮ ಸಾಧನೆಗೆ, ಸಾಮ್ರಾಜ್ಯ ಸ್ಥಾಪನೆ ಮತ್ತು ವಿಸ್ತರಣೆಗೆ ದಾಳಗಳಂತೆ, ಪ್ರಾಣಿಗಳಂತೆ ಬಳಸಿಕೊಂಡಿದ್ದು ಜಗತ್ತಿನ ಮನುಕುಲದ ಇತಿಹಾಸದಲ್ಲಿ ಕ್ರೌರ್ಯದ ಪರಮಾವಧಿ ಎಂದು ಬಣ್ಣಿಸಬಹುದು.



ಇಂಗ್ಲೆಂಡಿನ ರಾಯ್ ಮೋಕ್ಸ್‌ಹ್ಯಾಂ ಎಂಬ ಲೇಖಕ ತನ್ನ ಯೌವ್ವನದ ದಿನಗಳಲ್ಲಿ ಪಶ್ಚಿಮ ಆಫ್ರಿಕಾದ ಚಹಾ ತೋಟದಲ್ಲಿ ಹದಿಮೂರು ವರ್ಷಗಳ ಕಾಲ ದುಡಿದು ತನ್ನ ತಾಯ್ನಾಡಿಗೆ ಹಿಂತಿರುಗಿದ ನಂತರ ಆಫ್ರಿಕಾ ಸಂಸ್ಕೃತಿ ಮತ್ತು ಕಲೆ ಕುರಿತಂತೆ ವಸ್ತು ಸಂಗ್ರಹಾಲಯವನ್ನು ಆರಂಭಿಸಿದ್ದಲ್ಲದೆ, ಲಂಡನ್ ವಿಶ್ವವಿದ್ಯಾಲಯದಲ್ಲಿ ಪ್ರಾಚೀನ ಇತಿಹಾಸ ಮತ್ತು ದಾಖಲೆಗಳ ಸಂರಕ್ಷಕನಾಗಿ ಸೇವೆ ಸಲ್ಲಿಸಿದ. ಈತ ತನ್ನ ನಿವೃತ್ತಿಯ ನಂತರ ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ಮತ್ತು ಪೋರ್ಚುಗೀಸರು ಭಾರತದಲ್ಲಿ ನಡೆಸಿದ ದಬ್ಬಾಳಿಕೆ, ವಂಚನೆ ಹಾಗೂ ಹಿಂಸೆಯ ಇತಿಹಾಸವನ್ನು ತನ್ನ "ಥೆಫ್ಟ್ ಇಂಡಿಯ" ಎಂಬ ಅಪರೂಪದ ಕೃತಿಯಲ್ಲಿ ವಿವರವಾಗಿ ದಾಖಲಿಸಿದ್ದಾನೆ. ಪ್ರತಿ ಸಮುದ್ರಯಾನದ ಸಂದರ್ಭದಲ್ಲಿ ಆಫ್ರಿಕಾದ ಈ ಮುಗ್ಧ ಜನಾಂಗವನ್ನು ಸೆರೆ ಹಿಡಿದು ಅವರನ್ನು ಸಮುದ್ರಯಾನದ ಸಂದರ್ಭದಲ್ಲಿ ಗುಲಾಮರಂತೆ ದುಡಿಸಿಕೊಂಡು ಆನಂತರ ಭಾರತದ ಸಂಸ್ಥಾನಗಳಿಗೆ ಮಾರಾಟ ಮಾಡಿದ ವಾಸ್ಕೋಡಿಗಾಮ ಹಾಗೂ ಅರಬ್ ವ್ಯಾಪಾರಿಗಳ ಇತಿಹಾಸವನ್ನು ದಾಖಲಿಸಿದ್ದಾನೆ.

ಭಾರತಕ್ಕೆ ಬಂದ ಸಿದ್ದಿ ಜನಾಂಗದಲ್ಲಿ ಗುಜರಾತಿನ ಭರೂಚ್ ಜಿಲ್ಲೆಯ ಬಳಿ ಸಚಿನ್ ಎಂಬ ಒಂದು ಪುಟ್ಟ ಸಂಸ್ಥಾನವನ್ನು ಆಳಿದ ಸಿದ್ದಿ ನವಾಬನ ಇತಿಹಾಸದ ಜೊತೆಗೆ ಮಹಾರಾಷ್ಟ್ರದ ರಾಯಗಡ ಜಿಲ್ಲೆಯಲ್ಲಿ ಅರಬ್ಬಿ ಸಮುದ್ರದ ಒಂದು ಕಿಲೋಮೀಟರ್ ದೂರದಲ್ಲಿದ್ದ ಒಂದು ಪುಟ್ಟ ದ್ವೀಪದಲ್ಲಿ ೨೨ ಎಕರೆ ವಿಸ್ತೀರ್ಣದ ಜಂಜಿರಾ ಕೋಟೆಯನ್ನು ಕಟ್ಟಿಕೊಂಡು ಆಳಿದ ಸಿದ್ದಿ ಜನಾಂಗದ ಇತಿಹಾಸವೂ ದಾಖಲಾಗಿದೆ. ಅಹಮದ್ ನಗರದ ಸುಲ್ತಾನನ ಬಳಿ ಮಲ್ಲಿಕ್ ಅಂಬರ್ ಎಂಬಾತ ಪ್ರಧಾನ ಮಂತ್ರಿಯಾಗಿದ್ದರೆ, ದೆಹಲಿಯ ರಜಿಯಾ ಸುಲ್ತಾನಳ ಬಳಿ ದಂಡನಾಯಕ, ಆಪ್ತ ಸಹಾಯಕ ಹಾಗೂ ಪ್ರೇಮಿ ಎಲ್ಲವೂ ಆಗಿದ್ದ ಜಮಾಲುದ್ದೀನ್ ಯಾಕಬ್ ಎಂಬ ಸಿದ್ದಿ ಯುವಕನ ರೋಚಕ ಇತಿಹಾಸವು ಭಾರತದ ಚರಿತ್ರೆಯ ಪುಟಗಳಲ್ಲಿ ಕುತೂಹಲಕಾರಿ ಅಧ್ಯಾಯವಾಗಿದೆ.

ಇಂತಹ ಭವ್ಯ ಇತಿಹಾಸದ ಪಳೆಯುಳಿಕೆಗಳಂತೆ ಬದುಕಿರುವ ಸಿದ್ದಿ ಜನಾಂಗದ ಜನರು ಯಾವುದೇ ಪೂರ್ವಗ್ರಹವಿಲ್ಲದೆ ತಾವು ನೆಲೆ ನಿಂತ ನೆಲದ ಭಾಷೆ ಮತ್ತು ಧರ್ಮವನ್ನು ಒಪ್ಪಿಕೊಂಡಿದ್ದಾರೆ. ಪಾಕಿಸ್ತಾನದಲ್ಲಿ ಸಿದ್ದೀಸ್ ಎಂದು ಕರೆಸಿಕೊಳ್ಳುವ ಇವರು ಉರ್ದು ಭಾಷೆ ಮತ್ತು ಇಸ್ಲಾಂ ಧರ್ಮವನ್ನು ಒಪ್ಪಿಕೊಂಡಿದ್ದಾರೆ. ಭಾರತದಲ್ಲಿ ಹಿಂದು–ಮುಸ್ಲಿಂ–ಕ್ರೈಸ್ತ – ಹೀಗೆ ಮೂರು ಧರ್ಮಗಳಿಗೆ ಹಂಚಿಹೋಗಿರುವ ಇವರು ಕನ್ನಡ, ಕೊಂಕಣಿ, ಮರಾಠಿ, ಸಿಂಧಿ, ಗುಜರಾತಿ, ಬಂಗಾಳಿ ಭಾಷೆಯನ್ನಾಡುತ್ತಾರೆ. ಕರ್ನಾಟಕದಲ್ಲಿರುವ ಬಹುತೇಕ ಸಿದ್ದಿ ಜನಾಂಗದ ಜನರು ಹಿಂದೂ ಧರ್ಮಕ್ಕೆ ಸೇರಿದವರಾಗಿದ್ದು ಕನ್ನಡ ಮತ್ತು ಕೊಂಕಣಿ ಭಾಷೆಯನ್ನಾಡುತ್ತಾರೆ. ತಮ್ಮ ಪೂರ್ವಿಕರ ಸಂಸ್ಕೃತಿಯನ್ನು ಹಾಡು ಮತ್ತು ನೃತ್ಯಗಳ ಮೂಲಕ ಇಂದಿಗೂ ಕಾಯ್ದಿಟ್ಟುಕೊಂಡು ಬಂದಿರುವ ಇವರು ಹಬ್ಬ ಹರಿದಿನಗಳಲ್ಲಿ, ನಿಧನರಾಗಿರುವ ಹಿರಿಯರ ಪೂಜೆಯನ್ನು ಬಲು ಕಟ್ಟುನಿಟ್ಟಾಗಿ ಆಚರಿಸುತ್ತಾರೆ. ವಿಶೇಷವಾಗಿ ಹೋಳಿ ಮತ್ತು ನವರಾತ್ರಿ ಹಬ್ಬದ ಸಂದರ್ಭದಲ್ಲಿ ಇಂತಹ ಪೂಜೆಗಳನ್ನು ನೆರವೇರಿಸುತ್ತಾರೆ. ಹಲವು ಧರ್ಮಗಳ ನಡುವೆ ಹಂಚಿಹೋಗಿರುವ ಸಿದ್ದಿ ಜನಾಂಗದಲ್ಲಿ ತಮ್ಮ ಕುಟುಂಬದಿಂದ ಹೆಣ್ಣನ್ನು ಕೊಡುವ ಅಥವಾ ತರುವ ವಿಚಾರದಲ್ಲಿ ಧರ್ಮದ ಕಟ್ಟಳೆಯಿಲ್ಲದಿರುವುದು ವಿಶೇಷವಾಗಿದೆ. ಗಂಡು–ಹೆಣ್ಣು ಎರಡೂ ಧರ್ಮದ ಗುರುಗಳು ವಿವಾಹ ಸಂಸ್ಕಾರದ ವಿಧಿ ವಿಧಾನಗಳನ್ನು ನೆರವೇರಿಸಿಕೊಡುತ್ತಾರೆ. ವಿಧವಾ ವಿವಾಹ ಮತ್ತು ವಿವಾಹ ವಿಚ್ಛೇದಿತರ ಪುನರ್ ವಿವಾಹಕ್ಕೆ ಈ ಜನಾಂಗದಲ್ಲಿ ಅವಕಾಶವಿದೆ.

ಇಲ್ಲಿಯವರೆಗೆ ಸಮಾಜದ ಕುಹಕದ ಕಣ್ಣಿಗೆ ಬಲಿಯಾಗಿ ಅಪಮಾನಿತರಂತೆ ಬದುಕುತ್ತಿದ್ದ ಸಿದ್ದಿ ಜನಾಂಗವನ್ನು ಭಾರತ ಸರ್ಕಾರ ಇತ್ತೀಚೆಗಿನ ವರ್ಷಗಳಲ್ಲಿ ಪರಿಶಿಷ್ಟ ವರ್ಗದ ಗುಂಪಿಗೆ ಸೇರಿಸಿದ್ದರ ಫಲವಾಗಿ ನಿಧಾನವಾಗಿ ಶಿಕ್ಷಣ, ಆರೋಗ್ಯ, ವಸತಿ ಮುಂತಾದ ಸೌಲಭ್ಯಗಳನ್ನು ಈ ಜನಾಂಗವು ಪಡೆಯುವಂತೆ ಆಗಿದೆ. ಇದರ ಜೊತೆಗೆ ಭಾರತದ ಸರ್ವೋಚ್ಚ ನ್ಯಾಯಾಲಯ ಅರಣ್ಯವಾಸಿಗಳನ್ನು ಅರಣ್ಯದಿಂದ ಒಕ್ಕಲೆಬ್ಬಿಸಬೇಕು ಎಂದು ನೀಡಿರುವ ಇತ್ತೀಚೆಗಿನ ತೀರ್ಪು ಬಹುತೇಕ ಸಿದ್ದಿ ಜನಾಂಗವನ್ನು ಬೀದಿಗೆ ದೂಡುವ ಸಾಧ್ಯತೆಗಳಿವೆ.

ಭಾರತದ ಬಹು ದೊಡ್ಡ ದುರಂತವೆಂದರೆ, ಆಫ್ರಿಕಾ ಮೂಲದ ಈ ಬುಡಕಟ್ಟು ಜನಾಂಗದ ದೈಹಿಕ ಸಾಮರ್ಥ್ಯವನ್ನು ಈವರೆಗೆ ಸರಿಯಾಗಿ ಗ್ರಹಿಸದೆ, ಆ ಜನಾಂಗವನ್ನು ಬಳಸಿಕೊಳ್ಳದೇ ಇರುವುದು. ಅಮೇರಿಕ ಮತ್ತು ಬ್ರೆಜಿಲ್ ದೇಶಗಳಿಗೆ ಶತಮಾನಗಳ ಹಿಂದೆ ಗುಲಾಮರಾಗಿ ಮಾರಾಟವಾದ ನಿಗ್ರೋ ಜನಾಂಗದ ಯುವ ಕ್ರೀಡಾ ಪಟುಗಳು ಇಂದು ಆ ದೇಶಗಳ ಕ್ರೀಡಾರಂಗದ ಅಮೂಲ್ಯ ಆಸ್ತಿಗಳಾಗಿ ಪರಿಗಣಿಸಲ್ಪಟ್ಟಿದ್ದಾರೆ. ೧೯೮೪ರ ಒಲಿಂಪಿಕ್ಸ್ ಕ್ರೀಡಾ ಕೂಟದಲ್ಲಿ ಕಾರ್ಲ್ ಲೂಯಿಸ್ ಓಟದ ಸ್ಪರ್ಧೆಯಲ್ಲಿ ನಿರ್ಮಿಸಿದ ದಾಖಲೆ (ನಾಲ್ಕು ಚಿನ್ನದ ಪದಕ) ಅಮೇರಿಕ ಸರ್ಕಾರದ ಕಣ್ಣನ್ನು ತೆರೆಸಿತು. ಇಂದು ಒಲಿಂಪಿಕ್ ಕ್ರೀಡಾ ಕೂಟದಲ್ಲಿ ಅಮೇರಿಕಾ ದೇಶಕ್ಕೆ ಪದಕ ತಂದುಕೊಡುವ ಕ್ರೀಡಾಪಟುಗಳಲ್ಲಿ ಶೇಕಡ ೭೫ರಷ್ಟು ಮಂದಿ ಕಪ್ಪು ಜನಾಂಗದ ಪ್ರತಿಭೆಗಳು ಎಂಬುದನ್ನು ನಾವು ಮರೆಯಬಾರದು. ಟೆನ್ನಿಸ್ ಕ್ರೀಡೆಯಲ್ಲಿ ಅರ್ಥರ್ ಆಶ್, ವಿಲಿಯಮ್ಸ್ ಸಹೋದರಿಯರು ಇತಿಹಾಸವನ್ನೇ ನಿರ್ಮಿಸಿದ್ದಾರೆ. ಇದರಿಂದ ಸ್ಫೂರ್ತಿಗೊಂಡ ಭಾರತದ ಕೇಂದ್ರ ಸರ್ಕಾರವು ಸಹ ೧೯೮೦ರ ದಶಕದಲ್ಲಿ ಮಾರ್ಗರೇಟ್ ಆಳ್ವ ನೇತೃತ್ವದಲ್ಲಿ ವಿಶೇಷ ಪ್ರಾಂತ್ಯ ಕ್ರೀಡಾ ಯೋಜನೆ ಎಂಬ ಕಾರ್ಯಕ್ರಮವನ್ನು ರೂಪಿಸಿತು. ಭಾರತದ ಬುಡಕಟ್ಟು ಜನಾಂಗದ ಯುವಕ ಯುವತಿಯರಿಗೆ ಶಿಕ್ಷಣದ ಜೊತೆಗೆ ಕ್ರೀಡೆಯಲ್ಲಿ ತರಬೇತು ನೀಡುವ ಯೋಜನೆಯನ್ನು ಆರಂಭಿಸಿತು. ಆದರೆ, ಆಳುವ ಸರ್ಕಾರಗಳ ನಿರ್ಲಕ್ಷ್ಯ ಮತ್ತು ಅಧಿಕಾರಿಗಳ ಭ್ರಷ್ಟಾಚಾರ, ಭಂಡತನದಿಂದ ಎಲ್ಲವೂ ಮಣ್ಣು ಪಾಲಾಗಿದೆ. ೧೯೯೦ರ ದಶಕದಲ್ಲಿ ಗೋವಾದ ಸಲ್‌ಗಾಂವಕರ್ ಫುಟ್‌ಬಾಲ್ ಕ್ಲಬ್‌ನಲ್ಲಿ ಆಟವಾಡುತ್ತಿದ್ದ ಜುಜೆ ಸಿದ್ದಿ ಎಂಬ ಆಟಗಾರ ರಾಷ್ಟ್ರೀಯ ತಂಡದ ಆಟಗಾರನಾಗಿ ಸೇವೆ ಸಲ್ಲಿಸಿದ್ದನ್ನು ಹೊರತು ಪಡಿಸಿದರೆ, ರಾಷ್ಟ್ರಮಟ್ಟದ ಕ್ರೀಡಾಪಟುಗಳಾಗಿ ಸಿದ್ದಿ ಜನಾಂಗ ಇನ್ನೂ ಹೊರಹೊಮ್ಮಿಲ್ಲ. ಈಗಿನ ಒಲಿಂಪಿಕ್ಸ್ ಕ್ರೀಡೆಗಳಲ್ಲಿ ದೂರದ ಕಾಲ್ನಡಿಗೆ, ಓಟ ಮುಂತಾದ ಸ್ಪರ್ಧೆಗಳಲ್ಲಿ ಇಥಿಯೋಪಿಯಾ ದೇಶದಂತಹ ಬಡತನ ಮತ್ತು ಹಸಿವನ್ನು ಹಾಸಿ ಹೊದ್ದು ಮಲಗುವ ದೇಶಗಳ ಕ್ರೀಡಾಪಟುಗಳು ಚಿನ್ನದ ಪದಕ ಗಳಿಸಿ ವಿಶ್ವದ ಗಮನ ಸೆಳೆಯುತ್ತಿದ್ದಾರೆ. ಇನ್ನಾದರೂ ನಮ್ಮ ಸರ್ಕಾರಗಳು ಸಿದ್ದಿ ಜನಾಂಗದ ದೈಹಿಕ ಸಾಮರ್ಥ್ಯವನ್ನು ಬಳಸಿಕೊಳ್ಳುವುದರ ಜೊತೆಗೆ ಅವರ ಸರ್ವತೋಮುಖ ಅಭಿವೃದ್ದಿಗೆ ಮನಸ್ಸು ಮಾಡಬೇಕಿದೆ. ಅವರ ಸಾಂಸ್ಕೃತಿಕ ಇತಿಹಾಸವನ್ನು ದಾಖಲಿಸುವ ನಿಟ್ಟಿನಲ್ಲಿ ದೆಹಲಿಯ "ಇಂದಿರಾ ಗಾಂಧಿ ಸೆಂಟರ್ ಫಾರ್ ಕಲ್ಚರಲ್ ಹಿಸ್ಟರೀಸ್ ಆಫ್ ಸಿದ್ದಿಸ್ ಆಫ್ ಕರ್ನಾಟಕ" ಎಂಬ ಯೋಜನೆಯ ಮೂಲಕ (ಬೆಂಗಳೂರು ಶಾಖೆ) ಸಿದ್ದಿ ಜನಾಂಗದ ಹಾಡುಗಳು, ಲಾವಣಿಗಳು, ನೃತ್ಯ ಇತ್ಯಾದಿಗಳನ್ನು ದಾಖಲಿಸಿದೆ. ಜೊತೆಗೆ ಇತ್ತೀಚೆಗಿನ ವರ್ಷಗಳಲ್ಲಿ ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡ ಸಿದ್ದಿ ಜನಾಂಗದ ಯುವಕ, ಯುವತಿಯರಲ್ಲಿ ಹಲವಾರು ಮಂದಿ ಪದವೀಧರರಾಗಿದ್ದು ತಮ್ಮ ಜನಾಂಗದ ಕುಂದುಕೊರತೆಗಳ ಕುರಿತಂತೆ ಸಮಾಜದ ಮತ್ತು ಸರ್ಕಾರದ ಗಮನ ಸೆಳೆಯುವಲ್ಲಿ ಯಶಸ್ವಿಯಾಗಿದ್ದಾರೆ.

ಡಾ॥ ಎನ್. ಜಗದೀಶ್ ಕೊಪ್ಪ
ನಂ. ೧೦೩, ಅಕ್ಷರ, ಆರೋಗ್ಯ ನಗರ ಬಡಾವಣೆ, ತೇಜಸ್ವಿನಗರ, ಧಾರವಾಡ – ೫೮೦ ೦೦೨

# ಕೃಷಿ ಕ್ಷೇತ್ರದಲ್ಲೊಂದು ಜೀತಪದ್ಧತಿ

ಭುವನೇಶ್ವರಿ ಕಾಂಬಳೆ

ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಆರ್ಥಿಕವಾಗಿ, ಸಾಮಾಜಿಕವಾಗಿ ತನ್ನ ಅಧೀನದಲ್ಲಿರಿಸಿಕೊಂಡು ಶೋಷಿಸುವುದು ಜೀತಪದ್ಧತಿ. ಇದು ಶತಮಾನಗಳಿಂದ ನಡೆದುಕೊಂಡು ಬಂದಿತ್ತು. ಪ್ರಜಾಪ್ರಭುತ್ವ ಜಾರಿಗೆ ಬಂದ ನಂತರ ಕಾನೂನಿನ ಚೌಕಟ್ಟಿನಲ್ಲಿ ಅದನ್ನು ನಿಷೇಧಿಸಿದರೂ ಪರೋಕ್ಷವಾಗಿ ಅಲ್ಲಲ್ಲಿ ಕಾಣಸಿಗುತ್ತದೆ. ಅಸಂಘಟಿತ ವಲಯದ ಕೃಷಿ, ಕಟ್ಟಡ, ರಸ್ತೆ ನಿರ್ಮಾಣ, ಗಾರ್ಮೆಂಟ್ ಕಾರ್ಖಾನೆಗಳಲ್ಲಿ, ದುಡಿಯುವ ಕಾರ್ಮಿಕರು, ಮನೆಗೆಲಸಗಳಲ್ಲಿ ದುಡಿಯುವ ಬಹುತೇಕ ಮಹಿಳೆಯರು ಜೀತಪದ್ಧತಿಯಂತಹ ವ್ಯವಸ್ಥೆಯೊಳಗೆ ದುಡಿಯುತ್ತಿದ್ದಾರೆ. ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಪ್ರದೇಶದಲ್ಲಿ ಇರುವ ಗ್ರಾಮಗಳಲ್ಲಿ ವಾಸಿಸುತ್ತಿರುವ ಮಹಿಳೆಯರ ದುಡಿಮೆ, ಪರಿಸ್ಥಿತಿ ಹಾಗೂ ಸಮಸ್ಯೆಗಳನ್ನು ಗಮನಿಸಿದರೆ ಅವರ ಸ್ಥಿತಿ ಯಾವ ಜೀತಪದ್ಧತಿಗೂ ಕಡಿಮೆ ಇಲ್ಲ ಅನಿಸುತ್ತದೆ. ಅವರ ಪರಿಸ್ಥಿತಿಯ ಸಂಕ್ಷಿಪ್ತ ಚಿತ್ರಣವನ್ನು ನೀಡುವುದು ಈ ಲೇಖನದ ಉದ್ದೇಶ.

ಕರ್ನಾಟಕ ಮತ್ತು ಮಹಾರಾಷ್ಟ್ರ ಗಡಿಭಾಗದ ಗ್ರಾಮೀಣ ಪ್ರದೇಶವು ಭೌಗೋಳಿಕವಾಗಿ ಅಧಿಕ ಉಷ್ಣಾಂಶವಿರುವ, ಮಳೆನೀರನ್ನು ಅವಲಂಬಿಸಿರುವ, ಆಗಾಗ್ಗೆ ಬರಕ್ಕೆ ತುತ್ತಾಗುವ ಪ್ರದೇಶವಾಗಿದೆ. ಭೀಮಾ ಮತ್ತಿತರ ನದಿಗಳು ಹರಿದರೂ ಅಕ್ಕಪಕ್ಕದ ಹಳ್ಳಿಗಳಿಗೆ ಮಾತ್ರ ನೀರಾವರಿ ಮತ್ತು ಹಸಿರಿನ ಸಂಪತ್ತಿರುತ್ತದೆ, ಅದೂ ಮಳೆ ಬಂದರೆ ಮಾತ್ರ. ಇನ್ನಿತರ ಹಳ್ಳಿಗಳಲ್ಲಿ ಮಳೆಯ ಕೊರತೆಯಿದ್ದು, ಹವಾಮಾನದ ವೈಪರೀತ್ಯದ ಜೊತೆಗೆ ಸಾಮಾಜಿಕ, ರಾಜಕೀಯ, ಆರ್ಥಿಕ ಪರಿಸ್ಥಿತಿಗಳು ಸಾಮಾನ್ಯ ಜನರಿಗೆ ವಿರುದ್ಧವಾಗಿವೆ. ಆದ್ದರಿಂದ ಅತ್ಯಂತ ಹಿಂದುಳಿದ ಪ್ರದೇಶವಾಗಿ ಉಳಿದಿದೆ. ಇಂತಹ ಪರಿಸ್ಥಿತಿಯಲ್ಲಿ ಮಹಿಳೆಯರ ಪರಿಸ್ಥಿತಿ ಹೇಗಿರಬಹುದೆಂದು ನೋಡಲು ಹೊರಟರೆ, ಅದು ಯಾವುದೇ ಜೀತದಾಳುಗಳ ಪರಿಸ್ಥಿತಿಗಿಂತ ಕಡಿಮೆ ಇಲ್ಲ. ಮೂಲಭೂತ ಸೌಕರ್ಯಗಳ ಕೊರತೆ, ನಿರುದ್ಯೋಗ, ಅಭಿವೃದ್ಧಿ ಕಾರ್ಯಗಳ ಅಭಾವ, ರಾಜಕೀಯ, ಆಡಳಿತ ವ್ಯವಸ್ಥೆಯ ದಿವ್ಯ ನಿರ್ಲಕ್ಷ್ಯ. ಇವು ಜನರು ವಲಸೆ ಹೋಗುವಂತೆ ಮಾಡುತ್ತಿವೆ. ವರ್ಷದಲ್ಲಿ ಆರು ತಿಂಗಳು ವಲಸೆ ಹೋಗುವುದು ಜನರ ಜೀವನದ ಅವಿಭಾಜ್ಯ ಅಂಗವಾಗಿಬಿಟ್ಟಿದೆ. ಭೌಗೋಳಿಕ, ಆರ್ಥಿಕ, ಸಾಮಾಜಿಕ ಅಂಶಗಳ ಜೊತೆಗೆ ಜೆಂಡರ್ ಕಾರಣದಿಂದ ಮಹಿಳೆಯರು ಎದುರಿಸುತ್ತಿರುವ ದುಃಸ್ಥಿತಿಯನ್ನು ನೋಡಿದರೆ ನಾವಿನ್ನು ಯಾವ ಶತಮಾನದಲ್ಲಿದ್ದೇವೆ ಎನಿಸುತ್ತದೆ.

ನೀರಾವರಿ ಅನುಕೂಲವಿರುವ ಮಹಾರಾಷ್ಟ್ರದ ಕರ್ನಾಟಕದ ಗಡಿ ಗ್ರಾಮಗಳಲ್ಲಿ ಹೆಚ್ಚಾಗಿ ಕಬ್ಬು ಬೆಳೆಯುತ್ತಾರೆ. ಸುತ್ತಮುತ್ತ ಸಕ್ಕರೆ ಕಾರ್ಖಾನೆಗಳೂ ಇವೆ. ಜಮೀನು ಇಲ್ಲದೆ, ಶಿಕ್ಷಣವೂ ಇಲ್ಲದೆ, ಸ್ಥಳೀಯ ಉದ್ಯೋಗಾವಕಾಶಗಳೂ ಇಲ್ಲದೆ ಜನರು ಕಬ್ಬನ್ನು ಕಟಾವು ಮಾಡಲು ಮತ್ತು ಇಟ್ಟಿಗೆ ತಯಾರಿಸುವ ಕೆಲಸಗಳನ್ನು ಹುಡುಕಿಕೊಂಡು ವಲಸೆ ಹೋಗುತ್ತಾರೆ. ವಲಸೆ ಹೋದ ಸಮಯದಲ್ಲಿ ಅವರು ಪಡುವ ಪಡಿಪಾಟಲು ಹೇಳಲಿಕ್ಕೆ ಅಸಾಧ್ಯವೆನಿಸುವಷ್ಟಿದೆ. ಅವರು ಜಾತಿಪದ್ಧತಿ, ಜೆಂಡರ್, ಜಮೀನ್ದಾರಿ, ಬಂಡವಾಳಶಾಹಿ ಮತ್ತು ಪುರುಷಪ್ರಧಾನ ವ್ಯವಸ್ಥೆಗಳ ಹಿಡಿತದಲ್ಲಿ ನಲುಗುತ್ತಿದ್ದಾರೆ. ಮಹಿಳೆಯರು ವಲಸೆಯಂತಹ ಬಲೆಯೊಳಗೆ ಸಿಲುಕಿಕೊಂಡು ಅವಿರತ ದುಡಿತ ಮತ್ತು ಸಂಕಷ್ಟಕ್ಕೆ ಗುರಿಯಾಗುತ್ತಾರೆ. ಬಾಲ್ಯವಿವಾಹಕ್ಕೆ ಒಳಗಾಗಿ ೧೪-೧೫ ವರ್ಷಕ್ಕೇ ವಲಸೆ ಹಾಗೂ ದುಡಿತ ಪ್ರಾರಂಭಗೊಂಡು ಮುಪ್ಪಿನತನಕವೂ ಮುಂದುವರಿಯುತ್ತದೆ. ಮನೆಯಲ್ಲಿ ಪುರುಷಾಧಿಪತ್ಯ (ಗಂಡ, ಮಾವ, ಅತ್ತೆ), ಹೊರಗೆ





ಜಮೀನುದಾರ, ಕಾರ್ಖಾನೆಗಳ ಮಾಲೀಕರು ಹಾಗೂ ವಾಹನಗಳ ಮಾಲೀಕರು... ಹೀಗೆ ಈ ನಾಲ್ಕು ಜನರಿಂದ ಶೋಷಣೆಗೆ ಒಳಗಾಗುತ್ತಾರೆ. ಮದುವೆಗೆಂದು ಅಥವಾ ಇನ್ಯಾವುದೋ ತುರ್ತು ಖರ್ಚಿಗೆ ಜಮೀನುದಾರರು ಅಥವಾ ಕಾರ್ಖಾನೆ ಮಾಲೀಕರಿಂದ ಮುಂಗಡ ಹಣ ಪಡೆಯಲು ಮುಂದಾಗುತ್ತಾರೆ. ಮುಂಗಡ ಹಣ ತೆಗೆದುಕೊಂಡು ಕೆಲಸ ಪ್ರಾರಂಭಿಸುತ್ತಾರೆ. ಮುಂಗಡ ಹಣವನ್ನು ದಿನಗೂಲಿಗೆ ಲೆಕ್ಕ ಹಾಕಿದರೆ ೫೦,೦೦೦/– ೬ ತಿಂಗಳಿಗೆ ಸಿಗುತ್ತದೆ. ಅಂದರೆ ಗಂಡ, ಹೆಂಡತಿ ಇಬ್ಬರಿಗೂ ಸೇರಿ ೮,೩೩೩ ರೂ. ಒಬ್ಬರಿಗೆ ತಿಂಗಳಿಗೆ ೪,೧೬೬ ರೂ. ಸಿಗುತ್ತದೆ. ಅಂದರೆ ದಿನಕ್ಕೆ ಒಬ್ಬರಿಗೆ ೧೩೮ ರೂ. ಇಷ್ಟು ಸಂಪಾದಿಸಲು ದಿನಕ್ಕೆ ೧೩ರಿಂದ ೧೪ ಗಂಟೆಗಳ ಕಾಲ ದುಡಿಯುತ್ತಾರೆ. ಇದು ಕನಿಷ್ಠ ಕೂಲಿಗಿಂತ ಕಡಿಮೆ. ಇನ್ನು ಆರು ತಿಂಗಳಿಗೆ ಬೇಕಾಗುವಷ್ಟು ದಿನಸಿ, ಕಾಯಿಪಲ್ಲೆ ಮತ್ತು ಇತರ ಅಗತ್ಯ ವಸ್ತುಗಳನ್ನು ಇವರೇ ಪೂರೈಸಿಕೊಳ್ಳಬೇಕು. ಊರುಗಳಿಂದ ಮೂರು ನಾಲ್ಕು ಕಿ.ಮೀ. ದೂರದಲ್ಲಿ ತಾತ್ಕಾಲಿಕ ಶೆಡ್ ಕಟ್ಟಿಕೊಳ್ಳಬೇಕು. ಕೆಲವೊಮ್ಮೆ ಮಾಲೀಕರು ಪತ್ರಾಸ್ ಹಾಕಿಸಿಕೊಡುತ್ತಾರೆ. ಮುಂಗಡ ಹಣ ತೆಗೆದುಕೊಳ್ಳುವುದರಿಂದ ವಲಸೆ ಹೋದ ಸಮಯದಲ್ಲಿ ಮಾಲೀಕರು ಹೇಳಿದಷ್ಟು ಕೆಲಸ ಮಾಡಲೇಬೇಕು. ಗಂಡ ಹೆಂಡತಿಯರಿಬ್ಬರೂ ಒಬ್ಬರ ಬಳಿಯೇ ಕೆಲಸ ಮಾಡಬೇಕು. ಹಣದ ವ್ಯವಹಾರವೆಲ್ಲ ಗಂಡನದೆ. ಹೆಂಡತಿ ಏನಿದ್ದರೂ ಜೀತದಾಳಿನಂತೆ ದುಡಿಯಬೇಕು. ಗಂಡಸರು ಕೇವಲ ಕಬ್ಬಿನ ಗದ್ದೆ / ಇಟ್ಟಿಗೆ ಗೂಡು/ಕಾಲುವೆ ಕೆಲಸ ಮಾಡುತ್ತಾರೆ. ಮಹಿಳೆಯರು ಈ ಕೆಲಸಗಳ ಜೊತೆಗೆ ಮನೆಗೆಲಸವೂ ಅಲ್ಲದೆ ಮಕ್ಕಳನ್ನು ನೋಡಿಕೊಳ್ಳಬೇಕು. ಇಬ್ಬರಿಂದ ದಿನಕ್ಕೆ ೨೭೬ ರೂ.ಗಳಾದರೆ ಗಂಡ, ಹೆಂಡತಿ ಇಬ್ಬರು ಮಕ್ಕಳು, ತಂದೆ ತಾಯಿಯರಿರುವ ಕುಟುಂಬ ನಿರ್ವಹಿಸಲು ಸಾಧ್ಯವಾ?

ಕಬ್ಬು ಕಡಿದು, ಗುಡ್ಡೆ ಕಟ್ಟಿ, ಲಾರಿಗೆ ತುಂಬಿಸಬೇಕು. ಕಡಿಯುವಾಗ ಸಿಗುರು ಆಳವಾಗಿ ಚುಚ್ಚುತ್ತದೆ, ನೆಲದಲ್ಲಿರುವ ಕತ್ತರಿಸಿದ ಕಬ್ಬಿನ ತುಂಡು ಕಾಲಿಗೆ ಒತ್ತುತ್ತದೆ, ಲಾರಿಗೆ ತುಂಬುವಾಗ ಏಣಿಯಿಂದ ಬಿದ್ದು ಕೈಕಾಲು ಮುರಿದುಕೊಳ್ಳುವ ಸಾಧ್ಯತೆಯಿರುತ್ತದೆ. ಇಷ್ಟೆಲ್ಲ ಶ್ರಮವಿದ್ದರೂ ಕನಿಷ್ಠ ದಿನಗೂಲಿ ದೊರಕುವುದಿಲ್ಲ. ಲೋಡ್ ತುಂಬಿಸಿಕೊಂಡು ಕಾರ್ಖಾನೆಗೆ ಹೋದ ಲಾರಿ ಯಾವ ಹೊತ್ತಿನಲ್ಲಾದರೂ ಬರಬಹುದು. ಮಧ್ಯರಾತ್ರಿ ಬಂದು ಲೋಡ್ ಮಾಡಿ ಎಂದು ಹೇಳುತ್ತಾರೆ. ದೀಪದ ಬೆಳಕಿಲ್ಲದೆ ಕತ್ತಲೆಯಲ್ಲೆ ಮೂರು ನಾಲ್ಕು ಕಿಲೋಮೀಟರ್ ನಡೆದುಕೊಂಡು ಹೋಗಿ ಕಬ್ಬು ಕತ್ತರಿಸಿ ಲೋಡ್ ಮಾಡುತ್ತಾರೆ. ಕೆಲವೊಮ್ಮೆ ಅಕ್ಕಪಕ್ಕದ ಊರಿನ ಗಂಡಸರು, ಹುಡುಗರು ಕತ್ತಲೆಯಲ್ಲೇ ಅಟ್ಟಿಸಿಕೊಂಡು ಬರುವುದೂ ಉಂಟಂತೆ.

ಈ ಮಹಿಳೆಯರು ೧೫–೨೦ ವರ್ಷಗಳಿಂದ ದುಡಿಯುತ್ತಿದ್ದಾರೆ. ಬದುಕುಳಿಯಲು ಸಾಧ್ಯವಾಗುತ್ತಿದೆ, ಅಷ್ಟೆ. ಆದರೆ ಅವರ ಜೀವನ ಸುಧಾರಣೆಯಾಗಿಲ್ಲ. ಮದುವೆ, ಕಾಯಿಲೆ, ಮಕ್ಕಳ ಶಿಕ್ಷಣಕ್ಕೆ ಒಂದು ಅವಧಿಯ ದೊಡ್ಡ ಮೊತ್ತ ಸಿಗುತ್ತದೆ ಅನ್ನುವುದನ್ನು ಬಿಟ್ಟರೆ ಬದುಕುಳಿಯುವ ಹೋರಾಟ ಮುಂದುವರಿದಿದೆ. ಬಡ್ಡಿಯಿಲ್ಲದೆ, ಕೇಳಿದ ತಕ್ಷಣ ದೊರಕುವ ಹಣ ೪೦–೫೦ ಸಾವಿರ ರೂ.ಗಳನ್ನು ತೆಗೆದುಕೊಂಡಿದ್ದಕ್ಕೆ ವರ್ಷವಿಡೀ ದುಡಿತಕ್ಕೆ ಒಳಗಾಗುತ್ತಾರೆ (೬ ತಿಂಗಳು ತಮ್ಮ ಊರಿನಲ್ಲಿ, ೬ ತಿಂಗಳು ವಲಸೆ ಸ್ಥಳದಲ್ಲಿ). ಕೆಲಸದ ಕಾರಣದಿಂದ ಕಾಯಿಲೆಗೆ ತುತ್ತಾದರೆ, ಅಪಘಾತಕ್ಕೊಳಗಾದರೆ ಪರಿಹಾರ ದೊರಕುವುದಿಲ್ಲ. ಕೆಲಸ ಕಳೆದುಕೊಂಡು ಪರಾವಲಂಬಿಯಾಗುತ್ತಾರೆ. ನಿಯಮಿತ ವೇತನ, ಬೋನಸ್, ಪರಿಹಾರ, ರಜೆ, ಪಿಂಚಣಿ, ವೇತನ ಬಡ್ತಿ, ಎಲ್ಲ ದೊರೆತರೂ ಇನ್ನೂ ಸಾಲದು ಎಂದು ಸಂಘಟಿತ ವಲಯದವರು ಕೊರಗುತ್ತಾರೆ. ಈ ಅಸಂಘಟಿತ ವಲಯದವರು ಯಾರ ಬಳಿ ತಮ್ಮ ಅಳಲನ್ನು ತೋಡಿಕೊಳ್ಳಬೇಕು? ಇಷ್ಟೆಲ್ಲ ಅಭಿವೃದ್ಧಿ ಸಾಧಿಸಿದ್ದರೂ, ತಂತ್ರಜ್ಞಾನ ಮುಂದುವರಿದಿದ್ದರೂ, ಆರ್ಥಿಕವಾಗಿ ದಾಪುಗಾಲು ಇಡುತ್ತಿದ್ದರೂ ಗ್ರಾಮೀಣ ಮಹಿಳೆಯರ ಬದುಕು ಇನ್ನೂ ಅತಂತ್ರ ಸ್ಥಿತಿಯಲ್ಲಿಯೇ ಇದೆ. ಇವರು ಬದುಕಿಗಾಗಿ ಹೋರಾಡುವುದನ್ನು ನೋಡಿದರೆ ಯಾವ ಶತಮಾನದಲ್ಲಿ ಇದ್ದೇವೆ ಎಂದೆನಿಸುತ್ತದೆ. ಸಂಶೋಧನ ಅಧ್ಯಯನದ ಮಾಹಿತಿ ಸಂಗ್ರಹಣೆಗಾಗಿ ಕ್ಷೇತ್ರ ಕಾರ್ಯಕ್ಕೆಂದು ಹೋದಾಗ ಕೆಲವು ಪ್ರಕರಣ ಅಧ್ಯಯನಗಳನ್ನು ಮಾಡಲಾಯಿತು. ಅದರಲ್ಲಿರುವ ೪ ಪ್ರಕರಣಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಅಸಂಘಟಿತ ವಲಯದ ವಲಸೆ ಪ್ರದೇಶದಲ್ಲಿ ಕಾರ್ಮಿಕರನ್ನು ನೋಡಿದಾಗ ಜೀತಪದ್ಧತಿ ಇನ್ನೂ ಜೀವಂತವಾಗಿದೆ.

ಒಟ್ಟಾರೆ ಇವರ ಪರಿಸ್ಥಿತಿಯ ವಿಶ್ಲೇಷಣೆಯಿಂದ ಕಂಡುಬರುವ ಮುಖ್ಯ ಅಂಶಗಳೆಂದರೆ :

✴ ಉದ್ಯೋಗ ಅರಸಿ ವಲಸೆ ಹೋಗುವವರೆಲ್ಲ ಪರಿಶಿಷ್ಟ ಜಾತಿಗೆ ಸೇರಿದವರೇ ಹೆಚ್ಚಾಗಿದ್ದಾರೆ.

✴ ಊರಲ್ಲಿ ಕೃಷಿ ಕೂಲಿ ಬಿಟ್ಟು ಇವರಿಗೆ ಯಾವುದೇ ಪರ್ಯಾಯ ಉದ್ಯೋಗವಿಲ್ಲ.

✴ ಬಿತ್ತನೆ, ಸುಗ್ಗಿಗಳಿರುವಾಗ ಮಾತ್ರ ಊರುಗಳಲ್ಲಿ ಕೆಲಸ ಸಿಗುತ್ತದೆ. ಈಗ ಅದು ಸಹ ಯಾಂತ್ರೀಕರಣವಾಗಿ ಉತ್ತುವುದು, ಬಿತ್ತುವುದು, ಕೊಯ್ಯುವುದು, ಕಾಳುಗಳನ್ನು ಬಿಡಿಸುವುದು ಎಲ್ಲವೂ ಸಹ ಯಂತ್ರಗಳ ನೆರವಿನಿಂದಲೇ ಮಾಡಿಸುತ್ತಿದ್ದಾರೆ.

✴ ಜಿಲ್ಲೆಯಲ್ಲಿ ರಾಷ್ಟ್ರೀಯ ಉದ್ಯೋಗ ಖಾತ್ರಿ ಯೋಜನೆ ಇದ್ದರೂ ಸಹಿತ ಕಾರ್ಮಿಕರಿಗೆ ಉಪಯೋಗವಾಗುತ್ತಿಲ್ಲ. ಕೆಲವರಿಗೆ ಇದರ ಬಗ್ಗೆ ಮಾಹಿತಿಯಿಲ್ಲ. ಇನ್ನೂ ಕೆಲವರಿಗೆ ಗ್ರಾಮ ಪಂಚಾಯಿತಿ ಮೆಂಬರ್ ಚೇರ್‌ಮನ್‌ಗಳು ಜಾಬ್ ಕಾರ್ಡ್ ಮಾಡಿಸಿ ಅವರ ಹತ್ರನೇ ಇಟ್ಟುಕೊಂಡು ಯಂತ್ರಗಳ ಮುಖಾಂತರ ಕೆಲಸ ಮಾಡಿಸಿ ಅವರೇ ಹಣ ತಗೊಂಡು ಕೃಷಿ ಕಾರ್ಮಿಕರಿಗೆ ನಮ್ಮ ಖಾತೆಯ ಹಣ ನಿಮಗೆ ಬಂದಿದೆ ಅಂತ ಏನೇನೋ ಸುಳ್ಳು ಹೇಳಿ ೧೦೦–೫೦೦ ಹಣ ಕೊಟ್ಟು ಅವರ ಕಡೆಯಿಂದಲೇ ಖಾತೆಯಿಂದ ಹಣ ತೆಗೆದುಕೊಂಡು ಜನರಿಗೆ ಮೋಸ ಮಾಡುತ್ತಿರುವುದು ಕಂಡುಬರುತ್ತದೆ.

✴ ವಲಸೆ ಕಾರ್ಮಿಕರಿಗೆ ವಲಸೆ ಹೋದ ಪ್ರದೇಶದಲ್ಲಿ ವಸತಿ, ನೀರು, ಶೌಚಾಲಯ, ಅಪಘಾತ ಪರಿಹಾರ, ವೈದ್ಯಕೀಯ ಸೌಲಭ್ಯ ಹಾಗೂ ಶಾಲಾ ಸವಲತ್ತುಗಳು ಇರುವುದಿಲ್ಲ.

✴ ಭಾಷೆ ಬರುವುದಿಲ್ಲ. ಹೊಸ ಸ್ಥಳದೊಂದಿಗೆ ಮತ್ತು ಬೇರೆಬೇರೆ ಕಡೆಯಿಂದ ಬಂದ ಕೂಲಿ ಕಾರ್ಮಿಕರೊಂದಿಗೆ ಮಾಲಿಕ ಅಥವಾ ಮಕಾದಮಗಳೊಂದಿಗೆ ಹೊಂದಾಣಿಕೆಯಾಗಬೇಕು. ಇಂತಹ ಅನೇಕ ಸಮಸ್ಯೆಗಳನ್ನು ವಲಸೆ ಹೋದ ಶುರುವಿನಲ್ಲೆ ಅನುಭವಿಸುತ್ತಾರೆ.

ವಲಸೆ ಹೋದ ಪ್ರದೇಶದಲ್ಲಿ ಕೃಷಿ ಕೂಲಿ ಕಾರ್ಮಿಕರು ದಿನಕ್ಕೆ ೧೩ರಿಂದ ೧೪ ಗಂಟೆ ದುಡಿಯುತ್ತಾರೆ. ಮುಂಗಡ ಹಣವನ್ನು ದಿನಗೂಲಿಗೆ ಲೆಕ್ಕ ಹಾಕಿದರೆ ೫೦,೦೦೦/ ೬. ತಿಂಗಳಿಗೆ ೮,೩೩೩ ರೂ. ಗಂಡ ಹೆಂಡತಿ ಇಬ್ಬರಿಗೂ ಸೇರಿ. ಒಬ್ಬರಿಗೆ ತಿಂಗಳಿಗೆ ೪,೧೬೬ ರೂ. ಸಿಗುತ್ತದೆ. ಅಂದರೆ ದಿನಕ್ಕೆ ಒಬ್ಬರಿಗೆ ೧೩೮ ರೂ. ಆಗುತ್ತದೆ. ಕನಿಷ್ಠ ಕೂಲಿಗಿಂತ ಕಡಿಮೆಯಾಗುತ್ತದೆ. ಕೃಷಿ ಕಾರ್ಮಿಕರಿಗೆ ಮುಂಗಡ ಹಣ ಕೊಟ್ಟು ೬–೭ ತಿಂಗಳವರೆಗೆ ಅವರ ಅಧೀನದಲ್ಲಿಯೇ ಇರಿಸಿಕೊಳ್ಳುತ್ತಾರೆ. ಈ ದುಡಿಮೆ ಯಾವ ಜೀತಪದ್ಧತಿಗಿಂತ ಕಡಿಮೆಯಿದೆ ? ಅವರ ಸ್ಥಿತಿ ಪ್ರತಿವರ್ಷ ಹೀಗೆಯೇ ಮುಂದುವರಿದಿದೆ. ಸರಕಾರದ ಕೆಲಸಗಳು ಕಾರ್ಯ ಯೋಜನೆಗಳು ಕೃಷಿ ಕೂಲಿ ಕಾರ್ಮಿಕರಿಗೆ ತಲುಪದೇ ವಿಫಲವಾಗಿವೆ. ಭವಿಷ್ಯದಲ್ಲಿ ಇವರಿಗೆ ಭರವಸೆ ಇಲ್ಲದಿರುವುದು ವಿಷಾದದ ಸಂಗತಿ.

**ಭುವನೇಶ್ವರಿ ಕಾಂಬಳೆ**
ಸಂಶೋಧನಾ ವಿದ್ಯಾರ್ಥಿನಿ, ಅಹಲ್ಯಾಬಾಯಿ ಸ್ನಾತಕೋತ್ತರ ಮಹಿಳಾ ಅಧ್ಯಯನ
ಸಂಶೋಧನಾ ಮತ್ತು ವಿಸ್ತರಣಾ ಕೇಂದ್ರ, ಅಕ್ಕಮಹಾದೇವಿ ಮಹಿಳಾ ವಿಶ್ವವಿದ್ಯಾನಿಲಯ
ವಿಜಯಪುರ – ೫೮೬ ೧೦೧



# “ದುಡಿಯುವ ವರ್ಗದ ಸಂಯುಕ್ತ ಹೋರಾಟ ವರ್ತಮಾನದ ತುರ್ತು..”

– ಕಾಂ। ಎಚ್. ವಿ. ಅನಂತಸುಬ್ಬರಾವ್




ಸಂದರ್ಶಕರು
**ಡಾ॥ ಸಿದ್ದನಗೌಡ ಪಾಟೀಲ,**
**ಡಾ॥ ಎನ್. ಗಾಯತ್ರಿ,**
**ಮ. ಶ್ರೀ. ಮುರಳಿ ಕೃಷ್ಣ**

ಲೇಖನ ಸಿದ್ಧಪಡಿಸಿದವರು
**ಮ. ಶ್ರೀ. ಮುರಳಿ ಕೃಷ್ಣ**

ಶ್ರೀ ಎಚ್. ವಿ. ಅನಂತಸುಬ್ಬರಾವ್ ಮೂಲತಃ ಹಾಸನ ಜಿಲ್ಲೆಯ ಅರಕಲಗೂಡಿನವರು. ಶಾಲಾ ಮುಖ್ಯೋಪಾಧ್ಯಾಯರಾಗಿದ್ದ ತಂದೆ ವೆಂಕಟರಾಮಯ್ಯ ಮತ್ತು ತಾಯಿ ನರಸಮ್ಮನವರ ಹಿರಿಯ ಪುತ್ರನಾಗಿ ಅವರು ಹುಟ್ಟಿದ್ದು ೧೯೪೨ ಜುಲೈ ೨೦ರಂದು ಚೆನ್ನರಾಯಪಟ್ಟಣದ ಹಿರೀಸಾವೆ ಗ್ರಾಮದಲ್ಲಿ. ೧೯೬೧ರಲ್ಲಿ ಹಾಸನದ ಪ್ರಥಮ ದರ್ಜೆ ಕಾಲೇಜಿನಲ್ಲಿ ಬಿಎಸ್‌ಸಿ ಪದವಿ ಪಡೆದು ಅದೇ ವರ್ಷದಲ್ಲಿ ಭಾರತೀಯ ಜೀವ ವಿಮಾ ನಿಗಮದಲ್ಲಿ (ಎಲ್‌ಐಸಿ) ಕೆಲಸಕ್ಕೆ ಸೇರಿ ೧೯೯೯ ಸೆಪ್ಟೆಂಬರ್‌ನಲ್ಲಿ ಸ್ವಯಂನಿವೃತ್ತಿ ಪಡೆದಿರುತ್ತಾರೆ. ಕಾಲೇಜು ದಿನಗಳಂದಲೇ ಅನ್ಯಾಯದ ವಿರುದ್ಧ ಧ್ವನಿ ಎತ್ತುತ್ತ ಹೋರಾಟಗಾರನಾಗಿ ರೂಪುಗೊಂಡ ಅನಂತಸುಬ್ಬರಾವ್ ಕಾರ್ಮಿಕ ಚಳವಳಿಯಲ್ಲಿ ಆಸಕ್ತಿ ಬೆಳೆಸಿಕೊಂಡು ೧೯೬೪ರಲ್ಲಿ ಸಕ್ರಿಯವಾಗಿ ಎಲ್‌ಐಸಿಯ ಕಾರ್ಮಿಕ ಸಂಘದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು. ರಾಜ್ಯದ ಯುವಜನ ಚಳವಳಿಯಲ್ಲೂ ಸಕ್ರಿಯವಾಗಿದ್ದ ಅವರು ಕಾರ್ಮಿಕ ಚಳವಳಿಯನ್ನು ಆಯ್ದುಕೊಂಡು ಭಾರತ ಕಮ್ಯುನಿಸ್ಟ್ ಪಕ್ಷವನ್ನು ಸೇರಿದರು. ಎಐಟಿಯುಸಿಯಲ್ಲಿ ಹೆಚ್ಚೆಚ್ಚು ಒಳಹೊಕ್ಕು ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯಲ್ಲಿ ಕಾರ್ಮಿಕ ಸಂಘಟನೆಯನ್ನು ಕಟ್ಟಿ ನಿರಂತರವಾಗಿ ನಾಲ್ಕು ದಶಕಗಳ ಕಾಲ ಈ ಹೆಮ್ಮೆಯ ಸಂಘಟನೆಯನ್ನು ಮುನ್ನಡೆಸಿಕೊಂಡು ಬಂದಿದ್ದಾರೆ, ಸಾರಿಗೆ ಸಂಸ್ಥೆಯ ರಕ್ಷಣೆಗಾಗಿ ಮತ್ತು ಅಲ್ಲಿನ ಕಾರ್ಮಿಕರ ಉತ್ತಮ ಬದುಕಿಗಾಗಿ ಧೀರೋದಾತ್ತ ಹೋರಾಟ ನಡೆಸಿದ್ದಾರೆ. ಅನಂತಸುಬ್ಬರಾವ್ ಅವರು ಎಐಟಿಯುಸಿ ನಾಯಕತ್ವದಲ್ಲಿ ವಿವಿಧ ಕ್ಷೇತ್ರಗಳ ಅಸಂಖ್ಯಾತ ಕೈಗಾರಿಕಾ ಕಾರ್ಮಿಕರ ಸಂಘಗಳಿಗೆ ಬೆನ್ನೆಲುಬಾಗಿದ್ದಾರೆ. ಇವರ ಹೋರಾಟದ ಬದುಕಿನಲ್ಲಿ ಹಲವು ಬಾರಿ ಪೊಲೀಸರ ಲಾಠಿ ಏಟುಗಳನ್ನು ತಿಂದು, ಮೊಕದ್ದಮೆಗಳನ್ನೆದುರಿಸಿ ಜೈಲುವಾಸವನ್ನೂ ಅನುಭವಿಸಿದ್ದಾರೆ. ಹೋರಾಟದ ಭಾಗವಾಗಿ ಅನೇಕ ಸಂದರ್ಭಗಳಲ್ಲಿ ದಿನಗಟ್ಟಲೆ ಉಪವಾಸ ಸತ್ಯಾಗ್ರಹಗಳನ್ನು ಕೈಗೊಂಡಿದ್ದಿದೆ.

ಎಐಟಿಯುಸಿಯ ಪ್ರಧಾನ ಕಾರ್ಯದರ್ಶಿಯಾಗಿ ಸುದೀರ್ಘ ಕಾಲ ಸೇವೆ ಸಲ್ಲಿಸಿರುವ ಎಚ್. ವಿ. ಅನಂತಸುಬ್ಬರಾವ್ ಇದೀಗ

ಎಐಟಿಯುಸಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಭಾರತ ಕಮ್ಯುನಿಸ್ಟ್ ಪಕ್ಷದ ರಾಷ್ಟ್ರೀಯ ಮಂಡಳಿ ಸದಸ್ಯರಾಗಿದ್ದ ಅವರು ಈಗ ರಾಜ್ಯ ಕಾರ್ಯದರ್ಶಿ ಮಂಡಳಿಯ ಸದಸ್ಯರಾಗಿದ್ದಾರೆ. ಸರ್ಕಾರ ರಚಿಸಿರುವ ಗುತ್ತಿಗೆ ಕಾರ್ಮಿಕರ ಸಲಹಾ ಮಂಡಳಿಯ ಸದಸ್ಯರಾಗಿ ಮತ್ತು ಪ್ರಾದೇಶಿಕ ಭವಿಷ್ಯ ನಿಧಿ ಮಂಡಳಿಯ ಸದಸ್ಯರಾಗಿ ಹಲವು ಅವಧಿಗಳಿಗೆ ಸೇವೆ ಸಲ್ಲಿಸಿದ್ದಾರೆ. ಕಾರ್ಮಿಕ ಚಳವಳಿ ಸಾಮಾಜಿಕ ಹೊಣೆಗಾರಿಕೆ ಹೊಂದಿದೆ ಎಂದು ದೃಢವಾಗಿ ನಂಬಿರುವ ಎಚ್. ವಿ. ಅನಂತಸುಬ್ಬರಾವ್, ಅವರು ಎಐಟಿಯುಸಿಯ ರಾಷ್ಟ್ರೀಯ ಉಪಾಧ್ಯಕ್ಷರಲ್ಲೊಬ್ಬರಾಗಿದ್ದು ರಾಷ್ಟ್ರಮಟ್ಟದ ಸಾರಿಗೆ ಸಂಸ್ಥೆಗಳ ಕಾರ್ಮಿಕರ ಒಕ್ಕೂಟದ (ಎನ್‌ಎಫ್‌ಐಆರ್‌ಟಿಡಬ್ಲ್ಯು) ಅಧ್ಯಕ್ಷರಾಗಿ ದುಡಿಯುತ್ತಿದ್ದಾರೆ.

ಎಪ್ಪತ್ತೇಳರ ಹರೆಯದ ಈ ಕಾರ್ಮಿಕ ಮುಖಂಡ, ಕಮ್ಯುನಿಸ್ಟ್ ಹೋರಾಟಗಾರನ ಜೊತೆ 'ಹೊಸತು' ಪತ್ರಿಕೆ ಮೇ ದಿನದ ವಿಶೇಷ ಸಂದರ್ಶನ ನಡೆಸಿತು.

**ಹೊಸತು :** ಭಾರತದಲ್ಲಿ ಕಾರ್ಮಿಕ ಸಂಘಟನೆಗೆ ಒಂದು ನೂರು ವರ್ಷಗಳ ಇತಿಹಾಸವಿದೆ. ವರ್ಗ ಹೋರಾಟವನ್ನು ಪ್ರತಿಪಾದಿಸುವ ಈ ಸಂಘಟನೆ/ ಚಳುವಳಿ ಜಾತಿ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿಲ್ಲ ಎಂಬ ಆರೋಪವಿದೆ. ಇದನ್ನು ಕುರಿತು ನಿಮ್ಮ ಅಭಿಪ್ರಾಯ?

**ಎಚ್‌ವಿಎ :** ನಮ್ಮ ಕಾರ್ಮಿಕ ಸಂಘಟನೆಯ ಸಂವಿಧಾನದಲ್ಲೇ ಸಮಾಜವಾದಿ ಆಶಯಗಳಿವೆ. ಆದ್ದರಿಂದ ನಮ್ಮ ಕಾರ್ಮಿಕ ಸಂಘಟನೆಯೊಳಗೆ ಜಾತಿಯ ಆಧಾರದ ಮೇಲೆ ಚಟುವಟಿಕೆಗಳು ನಡೆದಿಲ್ಲ. ನಾವು ಎತ್ತಿಕೊಳ್ಳುವ ಆರ್ಥಿಕ ಬೇಡಿಕೆಗಳು ಎಲ್ಲ ಕಾರ್ಮಿಕರಿಗೂ ಸಮಾನವಾಗಿರುತ್ತದೆ. ನಾವು ಜಾತಿಯಾಧಾರಿತ ಬೇಡಿಕೆಗಳನ್ನು ಇಟ್ಟುಕೊಂಡು ಯಾವತ್ತೂ ಹೋರಾಟ ಮಾಡಿಲ್ಲ. ಹೌದು, ಆಗ ನಾವು ಜಾತಿಯ ಬಗ್ಗೆ ಯೋಚನೆಯನ್ನು ಮಾಡಿರಲಿಲ್ಲ. ಇದು ಕ್ರಮೇಣ ಸಮಾಜವಾದಿ ಸರ್ಕಾರ ಬಂದಾಗ ತನಗೆ ತಾನೇ ಹೊರಟುಹೋಗುತ್ತದೆ. ಈ ಜಾತಿಯ ಅಂಶ ಕಾರ್ಮಿಕ ಸಂಘಟನೆಯ ಚುನಾವಣೆಯ ಸಂದರ್ಭದಲ್ಲಿ ಪ್ರಮುಖ ಪಾತ್ರ ವಹಿಸಿರುವುದನ್ನು ಕಾಣುತ್ತಿದ್ದೇವೆ.

**ಹೊಸತು :** ಇದನ್ನು ಇನ್ನೂ ವಿಸ್ತರಿಸಿ ಹೇಳುವುದಾದರೆ, ಡಾಂಗೆಯವರೇ ಒಂದು ಕಡೆ ಹೇಳಿದ್ದಾರೆ: ಕಾರ್ಮಿಕ ಸಂಘಟನೆಯ ಆರಂಭದ ಕಾಲದಲ್ಲಿ ಹಿಂದೂಗಳಿಗೆ, ಮುಸ್ಲಿಮರಿಗೆ, ಕ್ರೈಸ್ತರಿಗೆ ಪ್ರತ್ಯೇಕ ಕ್ಯಾಂಟೀನುಗಳು ಇದ್ದವು ಅಂತ. ಹಾಗೆಯೇ ಜಾತಿಯಾಧಾರಿತ ಕ್ಯಾಂಟೀನುಗಳ ಬೇಡಿಕೆ ಬಂದರೆ...

**ಎಚ್‌ವಿಎ :** ಇಲ್ಲ. ಅಂತಹುದೇನಿಲ್ಲ. ಜಾತಿಯಾಧಾರಿತ ಕ್ಯಾಂಟೀನುಗಳು ಕಾರ್ಮಿಕ ಸಂಘಟನೆಯಲ್ಲಿ ಇಲ್ಲ, ಇನ್ನು ಪರ್ಮನೆಂಟ್ ಕಾರ್ಮಿಕರಿಗೆ, ಕಾಂಟ್ರಾಕ್ಟ್ ಕಾರ್ಮಿಕರಿಗೆ ಅಂತ ಇರಬಹುದೇನೋ. ನನಗೆ ಅನ್ನಿಸುವುದು ಹೋರಾಟಗಳು ನಡೆಯುವಾಗ ಜಾತಿ, ಭಾಷೆಯಂತಹ ವಿಷಯಗಳು ಪ್ರಚ್ಛನ್ನವಾಗಿರುತ್ತವೆ. ನಮ್ಮ ಹೋರಾಟಗಳು ಹೆಚ್ಚಿನ ವೇತನ, ಡಿ.ಎ., ಇತರ ಸೌಕರ್ಯಗಳು ಎಲ್ಲ ನೌಕರರಿಗೂ ಸಮಾನವಾದುವಾಗಿರುತ್ತವೆ.

**ಹೊಸತು :** ಅದಿರಲಿ, ಸಂಘಟನೆಯ ಪದಾಧಿಕಾರಿಗಳಾಗಿ ಮತ್ತು ನೇತೃತ್ವವನ್ನು ವಹಿಸುವಂತಹ ಜವಾಬ್ದಾರಿಗಳನ್ನು ಮೇಲ್ಜಾತಿಯವರೇ ವಹಿಸುತ್ತಾರೆ ಎಂಬ ಆಪಾದನೆಗೆ ಏನು ಹೇಳುವಿರಿ?

**ಎಚ್‌ವಿಎ :** ಆರಂಭದಲ್ಲಿ ಇದ್ದಿರಬಹುದೇನೋ. ಇವತ್ತು ಇದು ನಿರಾಧಾರವಾದುದು. ಸಂಘಟನೆಯ ಹೊರಗಿರುವ ಸಮಾಜದ ಬದಲಾವಣೆಗಳು ಏನು ಆಗುತ್ತಿವೆ, ಅದು ಸಂಘಟನೆಯ ಒಳಗೂ ಪ್ರಭಾವ ಬೀರುತ್ತವೆ. ಹೌದು, ಇವತ್ತು ಸಮಾಜದಲ್ಲಿ ಜಾತಿ ಪ್ರಜ್ಞೆ ಹೆಚ್ಚು ಪ್ರಖರವಾಗಿ ಕಾಣಿಸಿಕೊಳ್ಳುತ್ತಿದೆ. ಇದು ವಾಸ್ತವ ಕೂಡ. ಆದ್ದರಿಂದ ನಾವು ಪ್ರಜ್ಞಾಪೂರ್ವಕವಾಗಿ ಎಲ್ಲ ಜಾತಿಯವರನ್ನು ಸಂಘಟನೆಯೊಳಗೆ ತರಲು ಪ್ರಯತ್ನಿಸುತ್ತೇವೆ. ಸಂಘಟನೆ ನಡೆಸುವುದು ಒಂದು ರೀತಿಯಲ್ಲಿ ಸರ್ಕಾರ ನಡೆಸಿದಂತೆಯೇ. ಎಐಟಿಯುಸಿಯ ತತ್ವವನ್ನು ಒಪ್ಪಿಕೊಳ್ಳುವ ಯಾವ ಜಾತಿಯವರಾದರೂ ನಾವು ಅವರನ್ನು ಸಂಘಟನೆಯೊಳಗೆ ಸೇರಿಸಿಕೊಂಡೇ ಇದ್ದೇವೆ.

**ಹೊಸತು :** ಹಾಗಾದರೆ ಜಾತಿಯಾಧಾರಿತ ಕಾರ್ಮಿಕ ಸಂಘಟನೆಗಳು ಏಕೆ ಹುಟ್ಟಿಕೊಂಡಿವೆ?

**ಎಚ್‌ವಿಎ :** ಏನು ಹೇಳುವುದು? ಅವರೂ ಮಾಲೀಕರ ಹತ್ತಿರ ನಾವು ಕೇಳುವ ಆರ್ಥಿಕ ಬೇಡಿಕೆಗಳನ್ನೇ ಕೇಳಬೇಕು. ಕೆಲವೊಮ್ಮೆ ಸ್ವಾರ್ಥದ ಕಾರಣ ಕ್ಕಿರಬಹುದು. ಅವರ ಜಾತಿಯ ನಾಯಕತ್ವವೇ ಇರಬೇಕು ಎಂದೆನಿಸಿರಬಹುದು.

**ಹೊಸತು :** ಸ್ವಾತಂತ್ರ್ಯ ಚಳುವಳಿಯಲ್ಲಿ ಅಪಾರ ಸಂಖ್ಯೆಯಲ್ಲಿ ಕಾಣಿಸಿಕೊಂಡ ಮಹಿಳೆಯರನ್ನು ನಂತರದಲ್ಲಿ ಕಾರ್ಮಿಕ ಸಂಘಟನೆಗಳು ಹೇಗೆ ಬಳಸಿಕೊಂಡವು? ನೀವು ಮಹಿಳೆಯರ ಬೇಡಿಕೆಗಳನ್ನು ಹೇಗೆ ಕೈಗೆತ್ತಿಕೊಂಡಿರಿ?

**ಎಚ್‌ವಿಎ :** ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ದುಡಿಮೆಗೆ ಬಂದರೂ ಸಂಘಟನೆಯೊಳಗೆ ಕೆಲಸ



ಮಾಡಲು ಬರಲಿಲ್ಲ. ಅದಕ್ಕೆ ಅವರದೇ ಆದ ಸಾಂಸಾರಿಕ, ಸಾಮಾಜಿಕ ಕಾರಣಗಳು ಇದ್ದವು. ಆದರೆ ನಮ್ಮ ಸಂಘಟನೆ ಪ್ಲಾಂಟೇಶನ್ ಮಹಿಳೆಯರು, ಬೀಡಿ ಕಟ್ಟುವ ಮಹಿಳೆಯರು, ಅಂಗನವಾಡಿ ಮಹಿಳೆಯರು, ಗಾರ್ಮೆಂಟ್ ಮಹಿಳೆಯರೇ ಮುಂತಾದವರನ್ನು ಸಂಘಟಿಸಿದ್ದೇವೆ. ಒಂದಂತೂ ನಿಜ, ಮಹಿಳೆಯರು ಮುಂದೆ ಬರದೇ ಇರೋದಕ್ಕೆ ಅವರು ಎಷ್ಟು ಕಾರಣರೋ ಅದಕ್ಕಿಂತ ಹೆಚ್ಚಾಗಿ ಪುರುಷರು ಕಾರಣ. ಅದೊಂದು ರೀತಿಯ ಒಳಗೇ ಇರುವ ಭಾವನೆ. ಮಹಿಳೆಯರಿಗೆ ಅಂತಹ ತಿಳುವಳಿಕೆ ಇಲ್ಲ, ಸಂಘಟಿಸುವ ಶಕ್ತಿಯಿಲ್ಲ, ಅಂತ ಅವರೇ ಅಂದ್ಕೊಂಡು ಬಿಟ್ಟಿರುತ್ತಾರೆ. ಅದೊಂದು ರೀತಿಯ ಮಾನಸಿಕ ಸ್ಥಿತಿ. ಈ ಮೈಂಡ್ ಸೆಟ್ ಬದಲಾಗದೆ ಪರಿಸ್ಥಿತಿ ಸುಧಾರಿಸುವುದಿಲ್ಲ. ಇದೊಂದು ಕಷ್ಟಸಾಧ್ಯವಾದ ಕೆಲಸ. ಮಹಿಳೆಯರನ್ನು ಸೇರಿಸಿಕೊಂಡರೂ ಅದು ಆಲಂಕಾರಿಕವಾಗಿ ಮಾತ್ರ. ಅವರಿಗೆ ನೀತಿ ನಿರ್ಣಯ ಕೈಗೊಳ್ಳುವ ಅವಕಾಶ/ ಅಧಿಕಾರ ಕೊಡುವುದಿಲ್ಲ. ಅದಕ್ಕೆ ನಾವು ನಮ್ಮ ಬೈಲಾಗಳಲ್ಲೇ ತಿದ್ದುಪಡಿ ತಂದು ಮಹಿಳಾ ಪದಾಧಿಕಾರಿಗಳಿಗೆ ಮೀಸಲಾತಿಯನ್ನು ತಂದಿದ್ದೇವೆ.

**ಹೊಸತು** : ಇತ್ತೀಚಿನ ದಿನಗಳಲ್ಲಿ ಕಾರ್ಮಿಕ ಶಕ್ತಿ ರಾಜಕೀಯ ಶಕ್ತಿಯಾಗುತ್ತಿಲ್ಲ, ಏಕೆ?

**ಎಚ್‌ವಿಎ** : ಎಐಟಿಯುಸಿಯ ಉದ್ದೇಶವೇ ಕಾರ್ಮಿಕ ಶಕ್ತಿ ರಾಜಕೀಯ ಶಕ್ತಿಯೂ ಆಗಬೇಕು ಎಂಬುದು. ಆದರೆ ವಸ್ತು ಸ್ಥಿತಿ ಬೇರೆಯೇ ಆಗುತ್ತಿದೆ. ಈ ದಿಸೆಯಲ್ಲಿ ನಾವು ಸಾಕಷ್ಟು ತರಬೇತಿಯನ್ನು ಕೊಡುತ್ತಿದ್ದೇವೆ. ಆದರೂ ನಮ್ಮ ಹೋರಾಟಗಳು ಆರ್ಥಿಕ ಬೇಡಿಕೆಗಳಿಗೆ ಸಂಬಂಧಪಟ್ಟುವಾಗಿರುತ್ತವೆ. ಈಗ ಮೇ ದಿನಾಚರಣೆಯ ಸಂದರ್ಭಗಳಲ್ಲಿ 'ಫ್ಯಾಸಿಸಂಅನ್ನು ಸೋಲಿಸಿ' ಎಂದು ಕರೆಕೊಡುತ್ತೇವೆ. ಅದು ರಾಜಕೀಯ ಬೇಡಿಕೆ ಅಂತ ಅನ್ಸೊಳ್ಳತ್ತೆ. ಅದು ಯಾರಿಗೂ ಇಷ್ಟವಾಗಲ್ಲ. ಹೌದು. ಕಾರ್ಮಿಕ ಚಳುವಳಿ ರಾಜಕೀಯವಾಗಿ ಪರಿಣಾಮ ಬೀರುತ್ತಿಲ್ಲ. ಈಗ ಸರ್ಕಾರಿ ಉದ್ದಿಮೆಗಳು/ ಸಾರ್ವಜನಿಕ ಉದ್ದಿಮೆಗಳಲ್ಲಿ ಅವರ ಸೇವಾನಿಯಮಗಳಲ್ಲಿಯೇ ಅವರು ರಾಜಕೀಯ ಚಟುವಟಿಕೆಗಳಲ್ಲಿ ಭಾಗಿಯಾಗಬಾರದು ಎನ್ನುವ ನಿಯಮವಿದೆ. ಇದನ್ನು ಬಳಸಿಕೊಂಡು ಧರಣಿ, ಪ್ರತಿಭಟನೆಗಳಲ್ಲಿ ಭಾಗವಹಿಸುವವರನ್ನು ಹಿಂಸೆಗೆ ಗುರಿಪಡಿಸಲಾಗುತ್ತಿದೆ. ಆದ್ದರಿಂದಲೂ ಇದನ್ನು ನೋಡಿದ ಇತರ ಕಾರ್ಮಿಕರು ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುವುದಿಲ್ಲ. ಕೆಲವೊಮ್ಮೆ ಅವರ ರಾಜಕೀಯ ನಿಷ್ಠೆ ಬದಲಾಗುತ್ತಿರುತ್ತದೆ. ಇವತ್ತು ಸರ್ಕಾರದ ಅಕ್ಟೋಪಸ್ ಹಿಡಿತದಲ್ಲಿ ಅವರನ್ನು ರಾಜಕೀಯ ಚಟುವಟಿಕೆಗಳಿಗೆ ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ.

**ಹೊಸತು** : ಅಂದರೆ ಹಿಂದೆ ಸ್ವಾತಂತ್ರ್ಯಾನಂತರದ ಕಾಲದಲ್ಲಿ ನೌಕರರು ರಾಜಕೀಯ ಚಟುವಟಿಕೆಯಲ್ಲಿ ಭಾಗವಹಿಸುತ್ತಿದ್ದಷ್ಟು ಈಗ ಭಾಗವಹಿಸುತ್ತಿಲ್ಲ, ಎನ್ನುವಿರಾ?

**ಎಚ್‌ವಿಎ** : ಈಗ ಇರುವುದು ಡ್ರೆಕೋನಿಯನ್ ಕಾನೂನುಗಳು. ಜೊತೆಗೆ ತಂತ್ರಜ್ಞಾನವನ್ನೂ ಬಳಸಿಕೊಂಡು ನಮ್ಮ ನೌಕರರನ್ನು ಹಿಂಸಿಸಲಾಗುತ್ತದೆ. ನಮ್ಮ ಕೆ.ಎಸ್.ಆರ್.ಟಿ.ಸಿ.ಯಲ್ಲೇ ಮೆರವಣಿಗೆ, ಧರಣದಲ್ಲಿ ಭಾಗವಹಿಸಿದರೆಂದು ಅದೆಷ್ಟು ನೌಕರರನ್ನು ಸಸ್ಪೆಂಡು ಮಾಡಿದ್ದಾರೆ. ಅವರಿಗೆ ಚಾರ್ಜ್ ಶೀಟ್ ಕೊಟ್ಟಿದ್ದಾರೆ. ಇನ್ನು ಎಲ್.ಐ.ಸಿ., ಸಾರ್ವಜನಿಕ ಉದ್ದಿಮೆಗಳಲ್ಲೂ ಈ ಪದ್ಧತಿ ಇದೆ.

**ಹೊಸತು** : ಸಂಘಟಿತರ ಪಾಡೇ ಹೀಗಾದರೆ, ಇನ್ನು ಅಸಂಘಟಿತರ ಗತಿಯೇನು?

**ಎಚ್‌ವಿಎ** : ಹೌದು. ಪಂಚಾಯತಿ ಚುನಾವಣೆಯಲ್ಲಿ ಸ್ಪರ್ಧಿಸಿದ್ದಕ್ಕೆ ಇತ್ತೀಚೆಗೆ ಅಂಗನವಾಡಿ ಕಾರ್ಯಕರ್ತೆಯನ್ನು ಸಸ್ಪೆಂಡ್ ಮಾಡಿದ್ದರು.

**ಹೊಸತು** : ಕಾರ್ಮಿಕ ಸಂಘಗಳು ಸಾಮಾಜಿಕ ಬದಲಾವಣೆಯ ಸಾಧನಗಳು ಎಂಬ ಮಾತುಗಳು ಕೇಳಿಬರುತ್ತಿದ್ದವು. ಇತ್ತೀಚಿನ ದಶಕಗಳಲ್ಲಿ ಕಾರ್ಮಿಕ ಸಂಘಗಳ ಮೇಲೆ ಒಂದು ಆಪಾದನೆಯಿದೆ. ಅದೇನೆಂದರೆ ಅವು ಸದಸ್ಯರ ಆರ್ಥಿಕ ವಿಷಯಗಳಿಗಷ್ಟೇ ಸ್ಪಂದಿಸುತ್ತಿವೆ. ಅವುಗಳಿಗಿದ್ದ ಸಾಮಾಜಿಕ ಆಶಯಗಳು ಹಿನ್ನೆಲೆಗೆ ಸರಿದಿವೆ ಎಂಬುದಾಗಿದೆ. ನೀವೇನಂತಿರಾ?

**ಎಚ್‌ವಿಎ** : ಈ ವಿಷಯದ ಅರ್ಥೈಸುವಿಕೆಯಲ್ಲೇ ಒಂದು ಗೊಂದಲವಿದೆ. ನೋಡಿ, ಎಐಟಿಯುಸಿ ಸಂಘವಿದೆ. ಸ್ಥಾಪನೆಗೊಂಡ ಸಮಯದಿಂದಲೂ ಅದು ಕಾರ್ಮಿಕ ಸಂಘ ಸಾಮಾಜಿಕ ಸಾಧನ ಎಂಬ ತತ್ವವನ್ನು ಕರ್ತವ್ಯದ ರೀತಿಯಲ್ಲಿ ಪಾಲಿಸಿಕೊಂಡು ಬಂದಿದೆ. ಕಳೆದ ಐದು ವರ್ಷಗಳಲ್ಲಿ ಮೋದಿ ನೇತೃತ್ವದ ಕೇಂದ್ರ ಸರ್ಕಾರದ ಜನವಿರೋಧಿ ನೀತಿಗಳ ವಿರುದ್ಧ ನಡೆದಿರುವಷ್ಟು ದುಡಿಯುವ ವರ್ಗದ ಮುಷ್ಕರಗಳು/ಹೋರಾಟಗಳು ಎಂದೂ ಜರುಗಿರಲಿಲ್ಲ. ಅವರ ಸರ್ಕಾರ ಅಸ್ತಿತ್ವಕ್ಕೆ ಬಂದ ಐದಾರು ತಿಂಗಳುಗಳಲ್ಲೇ ರಾಷ್ಟ್ರೀಯ ಮಟ್ಟದ ಮುಷ್ಕರವನ್ನು ಕಾರ್ಮಿಕ ಸಂಘಗಳು ಹಮ್ಮಿಕೊಂಡವು. ಎಐಟಿಯುಸಿ ಸಹ ಭಾಗವಹಿಸಿತ್ತು. ರಾಷ್ಟ್ರಮಟ್ಟದಲ್ಲಿ ಕೇಂದ್ರ ಕಾರ್ಮಿಕ ಸಂಘಗಳ ಜಂಟಿ ವೇದಿಕೆಯಿದೆ. ಅದು ನಲವತ್ತೈದು ಬೇಡಿಕೆಗಳನ್ನು ಕೇಂದ್ರ ಸರ್ಕಾರದ ಮುಂದೆ ಇರಿಸಿದ್ದವು. ಅವುಗಳಲ್ಲಿ ಕಾರ್ಮಿಕರಿಗೆ ಸಂಬಂಧಿಸಿದ ಬೇಡಿಕೆಗಳು ಮಾತ್ರ ಇರಲಿಲ್ಲ. ರೈತರಿಗೆ ಸಂಬಂಧಿಸಿದ ಡಾ. ಸ್ವಾಮಿನಾಥನ್ ವರದಿ ಜಾರಿಯಾಗಬೇಕು, ಏರುತ್ತಿರುವ ಬೆಲೆಗಳನ್ನು ನಿಯಂತ್ರಿಸಬೇಕು, ಸಾರ್ವಜನಿಕ ಕ್ಷೇತ್ರದ ಘಟಕಗಳನ್ನು ಖಾಸಗೀಕರಿಸಬಾರದು ಎಂಬಿತ್ಯಾದಿ ಬೇಡಿಕೆಗಳೂ ಇದ್ದವು. ಸರ್ಕಾರದ ಜನವಿರೋಧಿ ನೀತಿಗಳನ್ನು ಪ್ರಶ್ನಿಸುವಂತಹ ಮಟ್ಟಕ್ಕೆ ಕಾರ್ಮಿಕ ಸಂಘಗಳ ಆಶಯಗಳು ಕಾಲಕ್ರಮೇಣ ವಿಸ್ತರಣೆಗೊಂಡಿವೆ. ಅಂದರೆ ಆರ್ಥಿಕ ಬೇಡಿಕೆಗಳ ಜೊತೆ ಸಾಮಾಜಿಕ ಕಳಕಳಿಯುಳ್ಳ ಬೇಡಿಕೆಗಳನ್ನು ಮಂಡಿಸಿ, ಅವುಗಳ ಈಡೇರಿಕೆಗಾಗಿ ಹೋರಾಟಗಳನ್ನು ಮಾಡುತ್ತ ಬಂದಿವೆ. ಕಳೆದ ಜನವರಿ ೮, ೯ ರಂದು ಜರುಗಿದ ಅಖಿಲ ಭಾರತ ಕೈಗಾರಿಕಾ ಮುಷ್ಕರದಲ್ಲಿ ದುಡಿಯುವ ಜನರ ಅನೇಕ ವಿಭಾಗಗಳ ಕಾರ್ಮಿಕರು, ಉದ್ಯೋಗಿಗಳು ಮತ್ತಿತರು ಭಾಗವಹಿಸಿದ್ದರು.. ಆದರೆ ಒಂದು ಅಂಶವನ್ನು ಗಮನಿಸಬೇಕು. ಅದೇನೆಂದರೆ ಈ ನಿಟ್ಟಿನಲ್ಲಿ ಮುಂಬರುವ ದಿನಗಳಲ್ಲಿ ಕಾರ್ಮಿಕ ಸಂಘಗಳ ಕಾರ್ಯಾಚರಣೆಗಳು ಹೆಚ್ಚಿನ ವೇಗವನ್ನು ಪಡೆದುಕೊಳ್ಳಬೇಕು.

**ಹೊಸತು** : ಕಳೆದ ಐದು ವರ್ಷಗಳ ಕೇಂದ್ರ ಸರ್ಕಾರದ ಆಡಳಿತದಲ್ಲಿ ಕಾರ್ಮಿಕ ಕಾನೂನುಗಳನ್ನು ಸುಧಾರಣೆಗೆ ಒಳಪಡಿಸಬೇಕೆಂಬ ನೆಪದಲ್ಲಿ ಅವುಗಳನ್ನು ಮೊಟಕುಗೊಳಿಸಲಾಗುತ್ತಿವೆ. ಇದಕ್ಕೆ ದುಡಿಯುವ ವರ್ಗದಿಂದ ಪ್ರತಿರೋಧವೂ ಇದೆ. ಆದರೆ ಇದು ನಿರೀಕ್ಷಿತ ಮಟ್ಟದಲ್ಲಿದೆಯೇ?

**ಎಚ್‌ವಿಎ** : ಹಿಂದಿನ ಸುಮಾರು ನೂರು ವರ್ಷಗಳಲ್ಲಿ ಕಾರ್ಮಿಕರು ಹೋರಾಟಗಳನ್ನು ಮಾಡಿ ಗಳಿಸಿದ ಕಾನೂನುಗಳನ್ನು ಕೇಂದ್ರ ಸರ್ಕಾರ ಬದಲಾಯಿಸಲು ಶತಾಯಗತಾಯ ಪ್ರಯತ್ನಿಸುತ್ತಿದೆ. ಇದು ಕಾರ್ಪೋರೇಟ್ ಹಿತಗಳ ಪರವಾಗಿರುವ, ಅವುಗಳು ಹೇಳಿದಂತೆ ಕೇಳುವ ಒಂದು ಸರ್ಕಾರ. ಪ್ರಸ್ತುತ ಕಾರ್ಮಿಕ ಸಂಘಗಳಲ್ಲಿ ಹೊರಗಡೆಯ ನಾಯಕರಿರಬಾರದು ಎಂಬ ವಿಷಯಕ್ಕೆ ಸಂಬಂಧಿಸಿದಂತೆ ಸರ್ಕಾರ ಕಾನೂನುಗಳನ್ನು ಮಾರ್ಪಡಿಸಲು ಹುನ್ನಾರಗಳನ್ನು ಹೂಡಿದೆ. ಹಿಂದೆ ಜರುಗಿದ ಒಂದು ಘಟನೆಯತ್ತ ಗಮನವನ್ನು ಹರಿಸೋಣ. ಅಕ್ಟೋಬರ್ ೩೧, ೧೯೨೦ರಂದು ಎಐಟಿಯುಸಿಯ ಪ್ರಥಮ ಸಮ್ಮೇಳನ ಜರುಗಿತು. ಅದರ ಅಧ್ಯಕ್ಷತೆಯನ್ನು ಲಾಲಾ ಲಜಪತ್ ರಾಯ್ ವಹಿಸಿದ್ದರು. ಅವರು ಹೊರಗಡೆಯವರೇ ಆಗಿದ್ದರು. ೧೯೨೬ರಲ್ಲಿ ಜಾರಿಯಾದ ಟ್ರೇಡ್ ಯೂನಿಯನ್ ಕಾಯಿದೆಯಲ್ಲಿ ಹೊರಗಡೆಯವರು ಕಾರ್ಮಿಕ ಸಂಘಗಳ ನಾಯಕತ್ವದ ಸ್ಥಾನವನ್ನು ಹೊಂದಬಹುದು ಎಂಬ ಅಂಶವಿತ್ತು. ಸಾಮಾನ್ಯ ಕಾರ್ಮಿಕರಿಗೆ ಪ್ರಜ್ಞೆಯ ಕೊರತೆಯಿರುತ್ತದೆ. ಅದುದರಿಂದ ಅವರ ಹಿತಾಸಕ್ತಿಗಳನ್ನು ರಕ್ಷಿಸಲು ಸೂಕ್ತ ವ್ಯಕ್ತಿಗಳು, ಅವರು ಹೊರಗಡೆಯವರಾಗಿದ್ದರೂ ನಾಯಕರನ್ನಾಗಿ ಚುನಾಯಿಸಲ್ಪಡಬಹುದೆಂಬ ಬೇಡಿಕೆಯನ್ನು ಈಡೇರಿಸಲಾಯಿತು. ಈಗ ಮೋದಿ ಸರ್ಕಾರ ಇದಕ್ಕೆ ತದ್ವಿರುದ್ಧವಾಗಿ ನಡೆಯಲು ಹವಣಿಸುತ್ತಿದೆ. ಅಂದರೆ ೧೯೨೦ರ ದಶಕದಲ್ಲಿ ಮಾಲೀಕರು ಕಾರ್ಮಿಕ ಸಂಘಗಳಲ್ಲಿ ಹೊರಗಡೆಯ ನಾಯಕತ್ವವಿರಬಾರದು ಎಂದು ಸಾರಿದ್ದರು. ಪ್ರಸ್ತುತ ಕೇಂದ್ರ ಸರ್ಕಾರ ಇದನ್ನು ಕಾರ್ಯರೂಪಕ್ಕೆ ತರಲು ಸಜ್ಜಾಗುತ್ತಿದೆ. ೧೯೪೭ರಲ್ಲಿ ಜಾರಿಯಾದ ಕೈಗಾರಿಕಾ ವಿವಾದಗಳ ಕಾಯಿದೆಯಲ್ಲಿ ಕಾರ್ಮಿಕರ ಹಿತಾಸಕ್ತಿಗಳಿಗೆ ಇಂಬು ಕೊಡುವಂತಹ ಅಂಶಗಳಿದ್ದವು. ಏಕೆಂದರೆ ನಮ್ಮ ದೇಶ ಸ್ವಾತಂತ್ರ್ಯವನ್ನು ಗಳಿಸಿತ್ತು. ಸಾಮ್ರಾಜ್ಯಶಾಹಿ ಬ್ರಿಟಿಷ್ ಸರ್ಕಾರ ನಮ್ಮನ್ನು ಎಲ್ಲ ಬಗೆಯಿಂದಲೂ ಲೂಟಿ ಮಾಡಿತ್ತು. ಆಗ ಉತ್ಪಾದನೆ ಹೆಚ್ಚಬೇಕಿತ್ತು. ಆದುದರಿಂದ ಕಾರ್ಮಿಕರ ಪರವಾದ ಬೇಡಿಕೆಗಳಿಗೆ ಅಂದಿನ ಸರ್ಕಾರ ಸಕಾರಾತ್ಮಕವಾಗಿ ಸ್ಪಂದಿಸುವುದು ಅನಿವಾರ್ಯವಾಗಿತ್ತು. ಸ್ವತಃ ನೆಹರು, ಸುಭಾಶ್‌ಚಂದ್ರ ಬೋಸ್ ಮತ್ತು ವಿ ವಿ ಗಿರಿ ಎಐಟಿಯುಸಿಯ ಅಧ್ಯಕ್ಷರಾಗಿದ್ದರು. ಅಂದರೆ ಹೊರಗಡೆಯವರು ಕಾರ್ಮಿಕ ಸಂಘಗಳ ನಾಯಕರಾಗಬಹುದಿತ್ತು.

ಕಾನೂನಿನ ಅನ್ವಯ ಬಂಡವಾಳಗಾರರು/

ಕೈಗಾರಿಕೋದ್ಯಮಿಗಳು ತಾವು ಸ್ಥಾಪಿಸಿದ ಉದ್ದಿಮೆಯನ್ನು ಮುಚ್ಚುವ ಸಂದರ್ಭದಲ್ಲಿ ಸರ್ಕಾರದ ಅನುಮತಿಯನ್ನು ಪಡೆಯಬೇಕು. ಆದರೆ ಈಗ ಸರ್ಕಾರ ಇದನ್ನು ತೆಗೆದುಹಾಕಲು ಪ್ರಯತ್ನಿಸುತ್ತಿದೆ. ಅಂದರೆ ಕಾರ್ಮಿಕರನ್ನು ನಿಯೋಜಿಸುವುದು ಮತ್ತು ಕಿತ್ತೊಗೆಯುವುದು ಸರಾಗವಾಗಬೇಕು ಎಂಬುದು ಅದರ ನಿಲುವಾಗಿದೆ. ಇವುಗಳೆಲ್ಲದರ ವಿರುದ್ಧ ಹೋರಾಟಗಳು ಜರುಗುತ್ತಿವೆ.

**ಹೊಸತು :** ನವೆಂಬರ್ ೮,೨೦೧೬ರಂದು ಕೇಂದ್ರ ಸರ್ಕಾರ ಏಕಾಏಕಿ ನೋಟು ರದ್ದತಿಯನ್ನು ಘೋಷಿಸಿತು. ಈ ಕ್ರಮ ಅನೇಕ ಲುಕ್ಸಾನುಗಳಿಗೆ ಎಡೆಮಾಡಿಕೊಟ್ಟಿತು. ಬ್ಯಾಂಕ್ ಉದ್ಯೋಗಿಗಳ ಮತ್ತು ಅಧಿಕಾರಿಗಳ ಸಂಘಗಳು ಪ್ರತಿಭಟಿಸಿದವು. ಆದರೆ ಜನಸಾಮಾನ್ಯರಿಂದ ನಿರೀಕ್ಷಿತ ಮಟ್ಟದಲ್ಲಿ ಪ್ರತಿಭಟನೆಗಳು ವ್ಯಕ್ತವಾಗಲಿಲ್ಲ. ನಿಮ್ಮ ಅಭಿಪ್ರಾಯ?

**ಎಚ್‌ವಿಎ :** ನಿಜ, ಈ ಅನಿಸಿಕೆಯಲ್ಲಿ ಸತ್ಯಾಂಶ ಇದೆ. ಈ ಕ್ರಮವನ್ನು ಜಾರಿಮಾಡಿದಾಗ ಸರ್ಕಾರ ಇನ್ನೂ ಪ್ರಾರಂಭಿಕ ಹಂತದಲ್ಲಿತ್ತು. ಜನರಿಗೂ ಮೋದಿ ಸರ್ಕಾರ ಒಳ್ಳೆಯದು ಮಾಡುತ್ತದೆ ಎಂಬ ನಿರೀಕ್ಷೆಯಿತ್ತು. ಅಲ್ಲದೆ ಹಿಂದಿದ್ದ ಸರ್ಕಾರದ ಆಡಳಿತ ಹೊಲಸಾಗಿತ್ತು. ಆದುದರಿಂದ ಜನರು ಮೃದುಭಾವನೆಯನ್ನು ತಳೆದಿರಬಹುದು. ಎಡಪಕ್ಷಗಳು ಕೆಲವು ದಶಕಗಳ ಹಿಂದೆ ನೋಟು ರದ್ದತಿಯನ್ನು ಜಾರಿ ಮಾಡಬೇಕೆಂದು ಒತ್ತಾಯಿಸಿದ್ದವು. ಆದುದರಿಂದ ಅವು ತಾಳುವ–ಗಮನಿಸುವ ಕಾರ್ಯಕ್ಕೆ ಮುಂದಾದವು. ಆದರೆ ದಿನಕಳೆದಂತೆ ನೋಟು ರದ್ದತಿಯ ಉದ್ದೇಶಗಳು ವಿಫಲವಾಗತೊಡಗಿದಾಗ, ಪ್ರತಿಭಟನೆಗಳು ಜರುಗಿದವು. ಆದರೆ ಅವು ಪ್ರಚಾರ ರೂಪದಲ್ಲಿದ್ದವು. ಆದರೆ ಬ್ಯಾಂಕ್ ಉದ್ಯೋಗಿಗಳು ಪ್ರಬಲವಾದ ಪ್ರತಿರೋಧವನ್ನು ಒಡ್ಡಿದರು. ೬೦ಕ್ಕೂ ಹೆಚ್ಚು ಉದ್ಯೋಗಿಗಳು ಒತ್ತಡ ಹಾಗೂ ಇತರ ಕಾರಣಗಳಿಂದ ಅಸುನೀಗಿದರು. ಅನೇಕ ಬ್ಯಾಂಕ್ ಉದ್ಯೋಗಿಗಳು ಸ್ವಯಂ–ನಿವೃತ್ತಿಯನ್ನು ಪಡೆದರು.

**ಹೊಸತು :** ಕೃತಕ ಬುದ್ಧಿಮತ್ತೆ (ಆರ್ಟಿಫಿಶಿಯಲ್ ಇಂಟೆಲಿಜೆನ್ಸ್) ದಾಪುಗಾಲು ಹಾಕುತ್ತ ಮುನ್ನಡೆಯುತ್ತಿರುವ ಈ ದಿನಮಾನಗಳಲ್ಲಿ ಸಾರ್ವತ್ರಿಕ ಮೂಲ ವರಮಾನ (ಯೂನಿವರ್ಸಲ್ ಬೇಸಿಕ್ ಇನ್‌ಕಮ್– ಒಂದು ದೇಶದಲ್ಲಿ/ಭೌಗೋಳಿಕ ಪ್ರದೇಶದಲ್ಲಿ ವಾಸಿಸುತ್ತಿರುವ ನಾಗರಿಕರಿಗೆ, ಅವರಿಗೆ ಉದ್ಯೋಗ, ವರಮಾನ ಇರಲಿ ಅಥವಾ ಇಲ್ಲದಿರಲಿ, ಸರ್ಕಾರ ಒಂದು ನಿಗದಿತ ಮೊತ್ತವನ್ನು ನೀಡುವ ಮಾದರಿ–ಸ್ಥೂಲ ವಿವರಣೆ)ದ ಪರಿಕಲ್ಪನೆಯನ್ನು ಹರಿಬಿಡಲಾಗುತ್ತಿದೆ. ಉದ್ಯೋಗಾವಕಾಶಗಳು ತೀರ ಕಡಿಮೆಯಾಗುತ್ತಿವೆ. ಒಂದರ್ಥದಲ್ಲಿ ಇದು ಬಂಡವಾಳಶಾಹಿ ವ್ಯವಸ್ಥೆಯ ಸೋಲು ಎಂದು ವಿಶ್ಲೇಷಿಸುತ್ತಾರೆ. ಇಂತಹ ವಿಷಯಗಳ ಬಗೆಗೆ ಕಾರ್ಮಿಕರ ನಡುವೆ ಚರ್ಚೆಗಳಾಗುತ್ತಿವೆಯೇ?

**ಎಚ್‌ವಿಎ :** ಪ್ರಾಮಾಣಿಕವಾಗಿ ಹೇಳುವುದಾದರೆ ಇಂತಹ ವಿಷಯಗಳು ಚರ್ಚೆಗಳಿಗೆ ಒಳಪಡುತ್ತಿಲ್ಲ. ಅದಕ್ಕೆ ಕಾರಣವೂ ಇದೆ. ಕನಿಷ್ಠ ವೇತನದ ವಿಷಯ ತೆಗೆದುಕೊಳ್ಳೋಣ. ನಾವು ನೋಟಿಫಿಕೇಶನ್ ಕೊಡೋದು ಕಷ್ಟ. ಕೊಟ್ಟರೇ, ಆಡಳಿತ ಮಂಡಲಿಗಳು ಉಚ್ಚನ್ಯಾಯಾಲಯಗಳ ಮೊರೆಹೋಗುತ್ತವೆ. ಆದರೆ ನ್ಯಾಯಾಲಯಗಳ ಮಧ್ಯಪ್ರವೇಶದಿಂದ ಕೆಲವು ಅನುಕೂಲಕರ ಬೆಳವಣಿಗೆಗಳು ಜರುಗಿವೆ. ಪ್ರಸ್ತುತ ನಮ್ಮ ದೇಶದಲ್ಲಿ ಕನಿಷ್ಠ ವೇತನದ ವಿಚಾರದಲ್ಲಿ ಏಕರೂಪತೆಯಿಲ್ಲ. ಉದಾಹರಣೆಗೆ ಕೇರಳದಲ್ಲಿ ಬೀಡಿ ಉದ್ಯಮದಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಹೆಚ್ಚಿನ ವೇತನ ಸಿಗುತ್ತದೆ. ಆದರೆ ಕರ್ನಾಟಕ ಮತ್ತು ಇತರ ರಾಜ್ಯಗಳಲ್ಲಿ ಈ ಪರಿಸ್ಥಿತಿಯಿಲ್ಲ. ಕೇರಳ, ತಮಿಳುನಾಡುಗಳಲ್ಲಿ ಅಸಂಘಟಿತ ಕಾರ್ಮಿಕರ ವೇತನದ ವಿಷಯದಲ್ಲಿ ಕೆಲವು ಸ್ವಾಗತಾರ್ಹ ಕ್ರಮಗಳು ಜಾರಿಯಾಗಿವೆ. ಅಷ್ಟೇಕೆ ನಮ್ಮ ದೇಶದ ಸುಪ್ರೀಂ ಕೋರ್ಟ್ 'ಸಮಾನ ಕೆಲಸಕ್ಕೆ ಸಮಾನ ವೇತನ'ವನ್ನು ಕೊಡಬೇಕು ಎಂದು ಸಾರಿದೆ. ಆದರೆ ಇದು ಜಾರಿಯಾಗಿದೆಯೇ? ವೇತನ/ಕೂಲಿ ನೀಡುವುದರಲ್ಲಿ ಲಿಂಗ ತಾರತಮ್ಯವಿದೆ! ಕರ್ನಾಟಕದ ನಮ್ಮ ಟ್ರಾನ್ಸ್ ಪೋರ್ಟ್ ಕ್ಷೇತ್ರದಲ್ಲಿ (ಕೆಎಸ್‌ಆರ್‌ಟಿಸಿ) ಸುಮಾರು ೧೦,೦೦೦ ಮಹಿಳೆಯರು ದುಡಿಯುತ್ತಿದ್ದಾರೆ. ಅವರಲ್ಲಿ ಮೆಕಾನಿಕ್‌ಗಳು ಮತ್ತು ನಿರ್ವಾಹಕರು ಜಾಸ್ತಿಯಿದ್ದಾರೆ. ಮಹಿಳೆಯರು ಹೆರಿಗೆ ರಜೆಯನ್ನು ಪಡೆದರೇ ಅಧಿಕಾರಿ ವರ್ಗದವರು ಬೊಮ್ಮಾ ಹೊಡೆಯುತ್ತಾರೆ. ಅಲ್ಲದೆ ಉದ್ಯೋಗದಲ್ಲಿ ಮಹಿಳೆಯರಿಗೆ ಶೇ೩೩ರಷ್ಟು ಮೀಸಲಾತಿ ಇರಬೇಕು ಎಂಬ ಆಡಳಿತ ಮಂಡಲಿಯ ತೀರ್ಮಾನ ಜಾರಿಯಾದದ್ದು ಹೀಗೆ: ಡ್ರೈವರ್ ಕಮ್ ಕಂಡೆಕ್ಟರ್ ಹುದ್ದೆಯನ್ನು ಸೃಷ್ಟಿಸಲಾಯಿತು. ಅದು ಮಹಿಳಾ ಉದ್ಯೋಗದ ಮೇಲಿನ ಪ್ರಹಾರವೇ ಆಗಿತ್ತು. ಹಲವು ಕಾರಣಗಳಿಂದ ಮಹಿಳೆಯರು ಚಾಲಕರಾಗಿ ಕೆಲಸ ಮಾಡಲು ಮುಂದಾಗುವುದಿಲ್ಲ. ಆದುದರಿಂದ ಅವರು ನಿರ್ವಾಹಕರಾಗುವ ಅವಕಾಶ ನೆಗೆದು ಬಿದ್ದಿತು. ನೋಡಿ... ಎಷ್ಟು ಸೂಕ್ಷ್ಮವಾಗಿ, ಚೆನ್ನಾಗಿ ಕಡ್ಡಿ ಹಾಕುತ್ತಾರೆ!

ನಾನು ಈ ಯೂನಿವರ್ಸಲ್ ಬೇಸಿಕ್ ಇನ್‌ಕಮ್ ಬಗೆಗೆ ಓದಿದ್ದೀನಿ. ಆದರೆ ಅದು ಸದ್ಯಕ್ಕೆ ಜಾರಿಯಾಗುವುದು ಕಷ್ಟ. ಇದರ ಹಿಂದಿನ ಉದ್ದೇಶವನ್ನು ಅರಿಯಬೇಕು. ಅಷ್ಟೇಕೆ ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆಯ ಕೆಲವು ಕನ್ವೆನ್ಷನ್ಸ್/ಚಾರ್ಟರ್‌ಗಳಿವೆ. ಕೇಂದ್ರ ಸರ್ಕಾರ ಕೆಲವಕ್ಕೆ ಅನುಮೋದನೆಯನ್ನು ನೀಡಿಲ್ಲ. ಅನುಮೋದಿಸಲ್ಪಟ್ಟಿದ್ದನ್ನು ಜಾರಿ ಮಾಡಿಲ್ಲ. ಸಂಘಟಿಸುವ, ಮುಷ್ಕರ ಮಾಡುವ ಹಕ್ಕುಗಳಿವೆ. ಆದರೆ ಅವುಗಳ ಅನುಷ್ಠಾನದಲ್ಲಿ ಹಲವು ತಡೆಗಳನ್ನು ಹಾಕಲಾಗುತ್ತದೆ. ಸಂಘಗಳನ್ನು ಸ್ಥಾಪಿಸುವುದು ಕಷ್ಟಕರ ಆಗಿದೆ. ಈ ಹಿನ್ನೆಲೆಯಲ್ಲಿ ಯೂನಿವರ್ಸಲ್ ಬೇಸಿಕ್ ಇನ್‌ಕಮ್ ಯೋಜನೆ ಹೇಗೆ ಜಾರಿಮಾಡುತ್ತಾರೆ?

**ಹೊಸತು :** ಕಾರ್ಮಿಕರಿಗೆ ದುಡಿಯುವ ವರ್ಗದ ಪ್ರಜ್ಞೆಯನ್ನು ಬೆಳೆಸುವುದರಲ್ಲಿ ಶಿಕ್ಷಣದ ಅಗತ್ಯ ತುಂಬ ಇದೆ. ಈ ನಿಟ್ಟಿನಲ್ಲಿ ಕಾರ್ಮಿಕ ಸಂಘಗಳು ಪ್ರಯತ್ನಗಳನ್ನು ಮಾಡಿವೆ. ಇನ್ನೂ ಬಹಳಷ್ಟು ಮಾಡಬೇಕಿವೆ. ನಿಮ್ಮ ಅಂಬೋಣ?

**ಎಚ್‌ವಿಎ :** ನಮ್ಮ ಅನುಭವದಲ್ಲಿ, ಕಾರ್ಖಾನೆ/ಇತರೆಡೆಗಳಲ್ಲಿ ಒಬ್ಬ ಕಾರ್ಮಿಕ/ನೌಕರ ಎಂಟು

## ಓದುಗರಲ್ಲೊಂದು ವಿಶೇಷ ಮನವಿ

'ಹೊಸತು' ಪತ್ರಿಕೆ ಜಾಹಿರಾತುಗಳಗಿಂತ ಹೆಚ್ಚಾಗಿ ಚಂದಾದಾರರ ಮೇಲೆ ಅವಲಂಬಿಸಿರುವುದರಿಂದ ಅದು ಆರ್ಥಿಕವಾಗಿ ಇನ್ನೂ ಸ್ವಾವಲಂಬಿಯಾಗಿಲ್ಲ. ಆದುದರಿಂದ ಆರ್ಥಿಕ ಬೆಂಬಲ ನೀಡುವ ಪ್ರಾಯೋಜಕರ ನೆರವಿನ ಅಗತ್ಯವಿದೆ. ಕನಿಷ್ಠ ರೂ. ೫೦೦೦/– ಹಣ ನೀಡಿ ಪ್ರಾಯೋಜಕರಾಗುವವರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲಾಗುವುದು. ಹಾಗೆಯೇ, ಅವರು ಸೂಚಿಸುವ ಯಾವುದಾದರೂ ಇಬ್ಬರು ವ್ಯಕ್ತಿಗಳಿಗೆ / ವಿಳಾಸಗಳಿಗೆ ತಲಾ ಮೂರು ವರ್ಷಗಳ ಅವಧಿಗೆ 'ಹೊಸತು' ಪತ್ರಿಕೆಯನ್ನು ಉಚಿತವಾಗಿ ಕಳಿಸಲಾಗುವುದು (ಅಥವಾ ನಾಲ್ಕು ವ್ಯಕ್ತಿಗಳಿಗೆ ತಲಾ ಒಂದು ವರ್ಷ). ಹಿತೈಷಿಗಳು ಈ ರೀತಿ ಪ್ರಾಯೋಜಕರಾಗುವ ಮೂಲಕ ಪತ್ರಿಕೆ ಆರ್ಥಿಕವಾಗಿ ಸದೃಢಗೊಳ್ಳಲು ಸಹಾಯವಾಗುವುದು.

ನಮ್ಮ ಓದುಗರು ಸ್ವತಃ ಪ್ರಾಯೋಜಕರಾಗಬಹುದು ಅಥವಾ ಅಂತಹವರನ್ನು ಗುರುತಿಸಿ ಅವರು ಪ್ರಾಯೋಜಕರಾಗುವಂತೆ ಪ್ರೇರೇಪಿಸಬಹುದು. ಪ್ರಾಯೋಜಕರಾಗಬಹುದಾದ ಸಮಾನಮನಸ್ಕರ ಹೆಸರು, ವಿಳಾಸ ತಿಳಿಸಿದಲ್ಲಿ ನಾವೇ ಅವರನ್ನು ಸಂಪರ್ಕಿಸುತ್ತೇವೆ.

ಈ ನಿಟ್ಟಿನಲ್ಲಿ ನಮ್ಮ ಓದುಗರು ಹೆಚ್ಚಿನ ಮುತುವರ್ಜಿ ವಹಿಸಿ ಪತ್ರಿಕೆಯ ಬೆಳವಣಿಗೆಗೆ ನೆರವಾಗಬೇಕೆಂದು ನಮ್ಮ ಕಳಕಳಿಯ ಮನವಿ.

ಪ್ರಾಯೋಜಕತ್ವದ ರೂ. ೫,೦೦೦ ಮೊಬಲಗನ್ನು 'ಹೊಸತು' ಹೆಸರಿಗೆ ಚೆಕ್ ಅಥವಾ ನಗದು ಮೂಲಕ ಇಲ್ಲವೇ ಕೆನರಾ ಬ್ಯಾಂಕ್, ಮಾಧವನಗರ ಶಾಖೆ, Current A/c No. 0788201015590, IFSC code CNRB0000788 ಇಲ್ಲಿಗೆ ನೇರವಾಗಿ ವರ್ಗಾಯಿಸಬಹುದು.

– ಪ್ರಕಾಶಕ

ಗಂಟೆಗಳ ಕಾಲ ಯೂನಿಫಾರಂ ಹಾಕಿಕೊಂಡು ದುಡಿಯುತ್ತಾನೆ. ಆಗ ಆತನಲ್ಲಿ ನೀವು ತಿಳಿಸಿದ ಪ್ರಜ್ಞೆ ಇರುತ್ತದೆ. ಯೂನಿಫಾರಂ ತೆಗೆದ ನಂತರ ಈ ಪ್ರಜ್ಞೆ ಮರೆಯಾಗುತ್ತದೆ! ಉಳಿದ ೧೬ ಗಂಟೆಗಳನ್ನು ಬೇರೆ ಜನರೊಡನೆ ಬೆರೆಯುತ್ತಾನೆ. ಚುನಾವಣೆಯ ಸಂದರ್ಭದಲ್ಲಿ ಜಾತಿ ಪ್ರಜ್ಞೆಯೂ ಕೆಲಸ ಮಾಡುತ್ತದೆ. ಇದು ಅಸ್ಮಿತೆಯ ರಾಜಕಾರಣದ ಭಾಗವಾಗಿದೆ. ನೋಡಿ... ಒಂದು ದೃಷ್ಟಾಂತವನ್ನು ಗಮನಿಸೋಣ... ನಾವು ಎಲ್ಲ ಕಾರ್ಮಿಕರ ಹಿತದಲ್ಲಿ ಮುಷ್ಕರದ ಕರೆಯನ್ನು ಕೊಡುತ್ತೇವೆ. ಇಂತಹ ಸಂದರ್ಭದಲ್ಲಿ ಜಾತಿ ಆಧಾರಿತ ಕಲ್ಯಾಣ ಸಂಘಗಳು ಮುಷ್ಕರದಲ್ಲಿ ಭಾಗವಹಿಸಬಾರದೆಂದು ತಮ್ಮ ಸದಸ್ಯರಿಗೆ ಸಂದೇಶವನ್ನು ರವಾನಿಸುತ್ತವೆ. ಎಷ್ಟೇ ಶಿಕ್ಷಣವನ್ನು ನೀಡಿದರೂ ದುಡಿಯುವ ವರ್ಗದ ಪ್ರಜ್ಞೆಯನ್ನು ನಿರೀಕ್ಷಿತ ಮಟ್ಟದಲ್ಲಿ ಬೆಳೆಸಲು ಸಾಧ್ಯವಾಗುತ್ತಿಲ್ಲ.

**ಹೊಸತು :** ನೀವು ಮೊದಲು ಆರ್‌ಎಸ್‌ಎಸ್‌ನಲ್ಲಿ ಇದ್ದವರು, ಅದರ ಕಟ್ಟಾ ಕಾರ್ಯಕರ್ತರಾಗಿದ್ದವರು. ನಂತರ ಎಲ್‌ಐಸಿ ಸಂಘದ ಸಂಪರ್ಕಕ್ಕೆ ಬಂದು ಕಮ್ಯುನಿಸ್ಟ್ ನಾಯಕರಾಗಿ ರೂಪುಗೊಂಡಿರಿ. ಆರ್‌ಎಸ್‌ಎಸ್ ಬಿಟ್ಟು ಬರುವುದಕ್ಕೆ ಕಾರಣವೇನು? ಎರಡನೆಯದಾಗಿ, ಆಗಿನ ಆರ್‌ಎಸ್‌ಎಸ್‌ಗೂ ಇಂದಿನದಕ್ಕೂ ವ್ಯತ್ಯಾಸವಿದೆಯೇ?

**ಎಚ್‌ವಿಎ :** ಮುಖ್ಯವಾದ ಪ್ರಶ್ನೆಯಿದು. ನಾನು ಯಾವುದೇ ಸಿದ್ಧಾಂತದಡಿ ತತ್ವನಿಷ್ಠೆಯಿಂದ ಕೆಲಸವನ್ನು ಮಾಡಿದ್ದೇನೆ; ಮಾಡುತ್ತಿದ್ದೇನೆ. ನನ್ನ ಹೈಸ್ಕೂಲ್ ದಿನಗಳಲ್ಲಿ ಕ್ರಿಕೆಟ್, ಟೆನಿಸ್ಸನ್ನು ಆಡುವಷ್ಟು ಆರ್ಥಿಕ ಶಕ್ತಿಯಿರಲಿಲ್ಲ. ಆರ್‌ಎಸ್‌ಎಸ್ ಶಾಖೆಯಲ್ಲಿ ದೇಶ, ದೇಶಪ್ರೇಮ ಇತ್ಯಾದಿಗಳ ಆಕರ್ಷಣೆಯಿತ್ತು. ಅಲ್ಲಿ ಒಂದಿಷ್ಟು ಆಟಗಳನ್ನು ಆಡಿಸುತ್ತಿದ್ದರು, ಹಾಡುಗಳನ್ನು ಹೇಳಿ ಕೊಡುತ್ತಿದ್ದರು. ಆಗ ಸಂಘದ ವಿನಾಶಕಾರಿ ವಿಚಾರಧಾರೆಯ ಅರಿವಿರಲಿಲ್ಲ. ನಂತರ ಶಾಖೆಯ ಪ್ರಮುಖನೂ ಆಗಿದ್ದೆ. ಎಲ್‌ಐಸಿಯ ಕೆಲಸವನ್ನು ಮುಗಿಸಿಕೊಂಡು ಪ್ರತಿದಿನ ಬೆಂಗಳೂರಿನಲ್ಲಿರುವ ಆರ್‌ಎಸ್‌ಎಸ್‌ನ ಕೇಶವ ಕೃಪಕ್ಕೆ ಹೋಗುತ್ತಿದ್ದೆ. ಗುರುದಕ್ಷಿಣೆಯನ್ನೂ ನೀಡುತ್ತಿದ್ದೆ. ಒಮ್ಮೆ ಕಾಶ್ಮೀರದ ವಿಷಯಕ್ಕೆ ಸಂಬಂಧಿಸಿದಂತೆ ಭೇಟಿ ನೀಡಿದ ಒಂದು ತಂಡದ ಮುಂದೆ ಭಾಷಣ ಮಾಡಬೇಕೆಂದು ಆರ್‌ಎಸ್‌ಎಸ್‌ನವರು ತಿಳಿಸಿದರು. ನಾನು ಮಾತನಾಡಿದೆ. ಆಗ ಆ ತಂಡದವರು, "ಸೋವಿಯತ್ ಯೂನಿಯನ್ ಇದೆಯಲ್ಲ.. ಕಾಶ್ಮೀರದ ವಿಷಯದಲ್ಲಿ ಅದು ನಮ್ಮ ಪರವಾಗಿರುತ್ತದೆ." ಎಂದರು! ೧೯೬೩ರಲ್ಲಿ ನಾನು ಎಲ್‌ಐಸಿ ಉದ್ಯೋಗಿಗಳ ಸಂಘದ ಸಮಿತಿಯ ಸದಸ್ಯನಾದೆ. ಆ ಸಂಘದ ಕಾರ್ಯಕ್ರಮಗಳು, ಮುಷ್ಕರಗಳಲ್ಲಿ ಭಾಗವಹಿಸಿದೆ. ನನ್ನ ಮನಸ್ಸಿನಲ್ಲಿ ಆರ್‌ಎಸ್‌ಎಸ್ ಬಗೆಗೆ ಸಂದೇಹಗಳು ಮೂಡಲು ಶುರುವಾದವು. ಅದರ ಸಿದ್ಧಾಂತದ ಅಪಾಯದ ಅರಿವಾಗತೊಡಗಿತು. ಅಲ್ಲದೆ ಜವಹರ್‌ಲಾಲ್ ನೆಹರು ಗತಿಸಿದಾಗ, ಒಂದು ಅಧಿಕಾರಿಗಳ ತರಬೇತಿ ಶಿಬಿರ ನಡೆಯುತ್ತಿತ್ತು. ಅಂದು ಅಲ್ಲಿದ್ದ ಆರ್‌ಎಸ್‌ಎಸ್ ಸದಸ್ಯರು ನೆಹರು ಇನ್ನಿಲ್ಲ ಎಂಬ ವಿಷಯ ತಿಳಿದು ಹಾಲನ್ನು ಕುಡಿದರು! "



ನೆಹರು ಕಮ್ಯುನಿಸ್ಟರು, ಈಗ ಲಾಲ್ ಬಹದ್ದೂರ್ ಶಾಸ್ತ್ರಿ ಪ್ರಧಾನಿಯಾಗಬಹುದು. ಅವರು ನಮ್ಮವರೇ.." ಎಂದು ಮಾತನಾಡಿಕೊಳ್ಳುತ್ತಿದ್ದರು! ನಂತರ ನಾನು ನಮ್ಮ ಸಂಘದ ಹಿರಿಯರೊಡನೆ ಮಾತನಾಡಿದೆ. ೧೯೬೪ರ ಕೊನೆಯಲ್ಲಿ ಆರ್‌ಎಸ್‌ಎಸ್‌ನಿಂದ ಹೊರಬಂದೆ. ಎಲ್‌ಐಸಿಯಲ್ಲಿ ಮೊದಲು ನಾನು ಸಿಪಿಎಂ ಸಂಗಾತಿಗಳ ಸಂಪರ್ಕಕ್ಕೆ ಬಂದೆ. ನಂತರ ನಮ್ಮ ಇಲಾಖೆಯಲ್ಲೇ ಕೆಲಸ ಮಾಡುತ್ತಿದ್ದ ಸಿಪಿಐ ನಾಯಕರಾಗಿದ್ದ ಸಂಗಾತಿ ಜಯತೀರ್ಥರವರ ಪರಿಚಯವಾಯಿತು. ಅವರೊಡನೆ ಚರ್ಚೆಗಳನ್ನು ಮಾಡುತ್ತಿದ್ದೆ. ಅವರು ಎಡಪಂಥೀಯ ವಿಚಾರಧಾರೆಯ ಸೋವಿಯತ್ ಯೂನಿಯನ್‌ನ ಕೆಲವು ಪುಸ್ತಕಗಳನ್ನು ಓದಲು ಕೊಟ್ಟರು. ೧೯೬೬ರಲ್ಲಿ ನಾನು ಸಿಪಿಐ ಸೇರಿದೆ.

ಅಂದಿನ ಆರ್‌ಎಸ್‌ಎಸ್‌ಗೂ ಇಂದಿನದ್ದಕ್ಕೂ ವಿಚಾರಧಾರೆಯ ವಿಷಯದಲ್ಲಿ ವ್ಯತ್ಯಾಸವಿಲ್ಲ. ಅಲ್ಲಿ ವರ್ಣಾಶ್ರಮ ಧರ್ಮ ಮೆರೆಯುತ್ತಿದೆ. ಆದರೆ ಅಂದಿನ ಆರ್‌ಎಸ್‌ಎಸ್ ನಾಯಕರಿಗೆ ಒಂದು ಗುರಿಯಿತ್ತು. ಈಗ ಕಾಲ ಬದಲಾಗಿದೆ. ಕಾರ್ಪೋರೇಟ್ ಹಣ ದೇಣಿಗೆಯ ರೂಪದಲ್ಲಿ ಆರ್‌ಎಸ್‌ಎಸ್‌ಗೆ ಹರಿದು ಬರುತ್ತದೆ. ಗುರುದಕ್ಷಿಣೆ ಅದರ ಮುಂದೆ ಏನೂ ಇಲ್ಲ! ಸಂಘ ಪರಿವಾರದ ಬಿಜೆಪಿಯ ಸದಸ್ಯರಾಗುವುದಕ್ಕೆ ಒಂದು ಮಿಸ್ಡ್ ಕಾಲ್ ಸಾಕು!

**ಹೊಸತು :** ಹಿಟ್ಲರ್ ಜರ್ಮನಿಯಲ್ಲಿ ಕಾರ್ಮಿಕ ವರ್ಗವನ್ನೇ ತನ್ನ ಆಯುಧವನ್ನಾಗಿ ಮಾಡಿಕೊಂಡ. ಭಾರತದಲ್ಲೂ ಈ ಆರ್‌ಎಸ್‌ಎಸ್/ಫ್ಯಾಸಿಸ್ಟರು ಇದೇ ಹಾದಿಯಲ್ಲಿ ಇದ್ದಾರೆ..

**ಎಚ್‌ವಿಎ :** ಇದರ ಮೊದಲ ನಡೆಯಾಗಿ ಕಾರ್ಮಿಕ ಕಾನೂನುಗಳನ್ನು ಬದಲಾಯಿಸಲು ಹೊರಟಿದ್ದಾರೆ. ಹೀಗೆ ಮಾಡುವುದರ ಮೂಲಕ ಅವರು ಕಾರ್ಮಿಕ ಶಕ್ತಿಯನ್ನು ಕುಗ್ಗಿಸಿ, ಕಾರ್ಪೋರೇಟ್ ವಲಯಕ್ಕೆ ಕುಮ್ಮಕ್ಕು ನೀಡುತ್ತಿದ್ದಾರೆ. ದೇಶ ಭಕ್ತಿಯ ಹೆಸರಿನಲ್ಲಿ ಹುಸಿ ರಾಷ್ಟ್ರವಾದವನ್ನು ಬಿತ್ತುತ್ತಿದ್ದಾರೆ. ಮಾಧ್ಯಮಗಳೂ ಸಾಥ್ ನೀಡುತ್ತಿವೆ. ಪ್ರಜ್ಞೆ ಕಡಿಮೆ ಇರುವ ಕಾರ್ಮಿಕರು ಈ ಹುನ್ನಾರಕ್ಕೆ ಬಲಿಯಾಗುತ್ತಾರೆ. ಮೋದಿ ಸರ್ಕಾರ ತುಂಬ ಆಳವಾಗಿ ಷಡ್ಯಂತ್ರಗಳನ್ನು ಹೂಡಿದೆ. ಆದುದರಿಂದಲೇ ದುಡಿಯುವ ವರ್ಗದಿಂದ ಸಂಯುಕ್ತ ಹೋರಾಟಗಳು ಜಾಸ್ತಿಯಾಗುತ್ತಿವೆ. ಇದು ಎಷ್ಟರಮಟ್ಟಿಗೆ ಕಾರ್ಮಿಕರ ಪ್ರಜ್ಞೆಯನ್ನು ವಿಸ್ತರಿಸುತ್ತಿದೆ ಎಂಬುದು ಚರ್ಚಾಸ್ಪದ ವಿಚಾರ.

**ಹೊಸತು :** ಇನ್ನೊಂದು ವರ್ಷದಲ್ಲಿ ಎಐಟಿಯುಸಿ ಒಂದು ಶತಮಾನದ ಅಸ್ತಿತ್ವವನ್ನು ಪೂರೈಸುತ್ತದೆ. ಪ್ರಸ್ತುತ ನಮ್ಮ ದೇಶದಲ್ಲಿ ಮಹತ್ವದ ಚುನಾವಣೆ ಜರುಗುತ್ತಿದೆ. ಈ ಸಂದರ್ಭದಲ್ಲಿ ಒಬ್ಬ ಕಾರ್ಮಿಕ ನಾಯಕನಾಗಿ, ಕಾರ್ಮಿಕ ವರ್ಗಕ್ಕೆ ನಿಮ್ಮ ಮೇ ದಿನದ ಸಂದೇಶವೇನು?

**ಎಚ್‌ವಿಎ :** ಈಗಾಗಲೇ ಎಐಟಿಯುಸಿಯ ಶತಮಾನದ ವರ್ಷವನ್ನು ಆಚರಿಸಲು ಸಿದ್ಧತೆಗಳಾಗುತ್ತಿವೆ. ಅನೇಕ ಕಾರ್ಯಕ್ರಮಗಳನ್ನು ದೇಶಾದ್ಯಂತ ಹಮ್ಮಿಕೊಳ್ಳಲಾಗುತ್ತದೆ. ಎಲ್ಲ ಕಾರ್ಮಿಕ ಸಂಘಟನೆಗಳು ಸೇರಿ ಒಂದು ಸನ್ನದನ್ನು ಮಂಡಿಸಿವೆ. ಅವುಗಳಲ್ಲಿ ಕಾರ್ಮಿಕ ರಂಗಕ್ಕೆ ಸಂಬಂಧಪಟ್ಟಂತೆ ಹಲವು ವಿಚಾರಗಳಿವೆ; ಬೇಡಿಕೆಗಳಿವೆ. ಅವುಗಳನ್ನು ಸಾಕಾರಗೊಳಿಸುವುದರಲ್ಲಿ ಎಲ್ಲ ಕಾರ್ಮಿಕ ಸಂಘಗಳು ಒಟ್ಟಾಗುವುದು ಎಐಟಿಯುಸಿಯ ಶತಮಾನದ ಸಂದರ್ಭದಲ್ಲಿ ನಮ್ಮ ಕರ್ತವ್ಯವಾಗಬೇಕು. ಇದು ಕಾರ್ಯರೂಪಕ್ಕೆ ಇಳಿದರೇ ಮುಂದಿನ ಐದು ವರ್ಷಗಳಲ್ಲಿ ಬದಲಾವಣೆಗಳಾಗುತ್ತವೆ. ಅಖಿಲ ಭಾರತ ಮಟ್ಟದಲ್ಲಿ ಸಂಯುಕ್ತ ಕಾರ್ಯಾ ಚರಣೆಗಳು ಜರುಗುತ್ತಿದ್ದರೂ ಕಾರ್ಮಿಕ ಸಂಘದ ಮಟ್ಟದಲ್ಲಿ, ಫ್ಲೋರ್ ಲೆವೆಲ್‌ನಲ್ಲಿ ವಿಭಜನೆಗಳಿವೆ. ನಮ್ಮ ಶತ್ರುಗಳು, ನಮ್ಮನ್ನು ತುಳಿಯುತ್ತಿರುವವರು ಒಂದಾಗಿದ್ದಾರೆ. ಆದರೆ ಕಾಯಾ, ವಾಚಾ, ಮನಸಾ ಕಾರ್ಮಿಕರು ಸಂಘಟನಾ ಮಟ್ಟದಲ್ಲಿ ಒಂದಾಗಿಲ್ಲ. ೧೯೭೦ರ ಎಐಟಿಯುಸಿಯ ಮಹಾಧಿವೇಶನದಲ್ಲಿ ಸಂಗಾತಿ ಇಂದ್ರಜಿತ್ ಗುಪ್ತಾ ಕಾರ್ಮಿಕರಿಗೆ ಒಂದೇ ಟ್ರೇಡ್ ಯೂನಿಯನ್ ಸೆಂಟರ್ ಇರಬೇಕೆಂದು ಕರೆ ನೀಡಿದ್ದರು. ಪ್ರಸ್ತುತ ಈ ಆಶಯ ಸಾಕಾರಗೊಳ್ಳಬೇಕು. ಇದು ಕಾರ್ಮಿಕ ಶಕ್ತಿಯ ಮುನ್ನಡೆಗೆ ದಾರಿದೀಪವಾಗಬಲ್ಲದು.

**ಹೊಸತು :** ನಿಮ್ಮ ಆಶಯ ಈಡೇರಲಿ. ನಿಮ್ಮ ಹೋರಾಟಗಳಿಗೆ 'ಹೊಸತು' ಬಳಗದ ಹಾರ್ದಿಕ ಶುಭಾಶಯಗಳು.

**ಎಚ್‌ವಿಎ :** ಧನ್ಯವಾದ.


ಲೇಖನ ಸಿದ್ಧಪಡಿಸಿದವರು : **ಮ. ಶ್ರೀ. ಮುರಳಿ ಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜಾ ಗಾರ್ಡನಿಯ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು-೫೬೦ ೦೬೧
ಇಮ್ಮೈಲ್ : msmurali1961@gmail.com

# ಎರಡು ಕನಸು



**ಬ್ಯೂಟಿ** ಪಾರ್ಲರ್‌ನಲ್ಲಿ ಅಪಾಯಿಂಟ್ಮೆಂಟ್ ಇದ್ದುದರಿಂದ ಸಂಚಾರಿ ನಿಯಮಗಳನ್ನು ಉಲ್ಲಂಘಿಸಿ ಶರವೇಗದಲ್ಲಿ ವಾಹನ ಚಲಾಯಿಸುತ್ತಿದ್ದ ಮಹಿಳೆಯನ್ನು ಸಂಚಾರಿ ಪೊಲೀಸರು ತಡೆದು ನಿಲ್ಲಿಸಿದರು. ಹೆಲ್ಮೆಟ್ ತೆಗೆದು ಒಂದು ಸುಂದರ ಹೂ ನಗೆಯೊಂದನ್ನು ಬೀರಿ 'ಪ್ರೆಸ್' ಸರ್ ಅರ್ಜೆಂಟ್ ಕೆಲ್ಸ ಇತ್ತು ಸರ್ ಎಂದು ಇನ್ಸ್‌ಪೆಕ್ಟರ್‌ಗೆ ಹೇಳ್ತಾಳೆ... ಪ್ರೆಸ್ ಎಂದಾಕ್ಷಣ ಜರ್ಕ್ ಹೊಡೆದ ಅಧಿಕಾರಿ ಸರಿ ಹುಷಾರಾಗೋಗಿ ಎಂದು ಕಳಿಸಿಬಿಟ್ಟ .

ಬ್ಯೂಟಿಪಾರ್ಲರ್ ಮಾಲಕಿ ಯಾಕ್ ಮೇಡಂ ಲೇಟು ಎಂದಾಗ ಹಾಳಾದ ಟ್ರಾಫಿಕ್ ಕಣ್ರೀ ಎಂದು ಕೂರುತ್ತಾಳೆ ಪತ್ರಕರ್ತೆ ಶ್ರೀಲತಾ. ತನ್ನ ಪ್ರತಿಷ್ಠಿತ ಪತ್ರಕರ್ತೆ ಗಿರಾಕಿಯ ಮುಖಾರವಿಂದವನ್ನು ಅಂದ ಗೊಳಿಸುತ್ತಾ, ಮೇಡಂ ಈ ದಿನ ಪ್ರಕಟವಾಗಿರೋ ನಿಮ್ಮ ಲೇಖನ ಅದೇ ಕಾರ್ಪೊರೇಷನ್ ಸ್ವೀಪರ್ಸ್‌ಗಳಿಗೆ ಅದರಲ್ಲೂ  ಗುಡಿಸೋರು, ಕಸ ಕಲೆಕ್ಟ್ ಮಾಡೋರು, ಕಸ ಸೆಪರೇಟ್ ಮಾಡೋ ಹೆಂಗಸರಿಗೆ ಸುರಕ್ಷತೆ ಇಲ್ಲ, ಗ್ಲೌಸ್ ಕೊಡಲ್ಲ, ಬೂಟು ಕೊಡಲ್ಲ, ಮಾಸ್ಕ್ ಕೊಡಲ್ಲ ಅವರ ಆರೋಗ್ಯದ ಗತಿ ಏನು ಅಂತ ಚೆನ್ನಾಗಿ ಗವರ್ನ್‌ಮೆಂಟನ್ನು ಝಾಡೀಸಾಕಿದ್ದೀರಾ ಕಂಗ್ರಾಟ್ಸ್ ಮೇಡಂ ಎಂದಳು. ಪತ್ರಕರ್ತೆಗೆ ತುಂಬ ಖುಷಿಯಾಯ್ತು, ಮನುಷ್ಯತ್ವ ಇಲ್ಲದ ಅಧಿಕಾರಿಗಳು, ಕಂಟ್ರಾಕ್ಟರ್, ರಾಜಕಾರಣಿಗಳ ದುಷ್ಟಕೂಟ ಕಣ್ರೀ ಕಾರ್ಪೊರೇಷನ್ನಲ್ಲಿ... ಆ ಬಡ ಹೆಣ್ಣುಮಕ್ಕಳನ್ನು ನೋಡಿದರೆ ಅಯ್ಯೋ ಅನ್ನಿಸುತ್ತೆ... ಕರುಳು ಕಿತ್ತುಬರುತ್ತೆ ಎಂದು ಹಿಂದಕ್ಕೆ ಒರಗಿ ಕೂತಳು.

ಮನೆಗೆ ಬಂದ ತಕ್ಷಣ ಓದಿಕೊಳ್ಳುತ್ತಿದ್ದ ಆರನೇ ತರಗತಿಯ ರಾಹುಲ್, ಅಮ್ಮಾ ನಮ್ಮ ಕನ್ನಡ ಮಿಸ್ಸು ನೀನು ಪೇಪರ್ನಲ್ಲಿ ಬರೆದಿರೋ ಆರ್ಟಿಕಲ್ ಕ್ಲಾಸ್‌ನಲ್ಲಿ ಓದಿ, ಸ್ವೀಪರ್ಸ್ ಆಂಟಿಗಳ ಬಗ್ಗೆ ನಿಮ್ಮ ಮದರ್‌ಗೆ ಎಷ್ಟು ಕನ್ಸರ್ನ್ ಇದೆ... ಎಂದರು ಆಮೇಲೆ ನಿನಗೆ ಥ್ಯಾಂಕ್ಸ್ ಹೇಳು ಅಂದ್ರಮ್ಮ ಎಂದ... ಪತ್ರಕರ್ತೆಗೆ ಆಯಾಸವೆಲ್ಲಾ ಮಾಯವಾಗಿ ಮಗನಿಗೆ ಮುತ್ತೊಂದನ್ನಿತ್ತು ತಂಗಳನ್ನು ಬಿಸಿ ಮಾಡಹೊರಟಳು.

ಪ್ರತಿದಿನ ರಾಹುಲ್ ಶಾಲೆಗೆ ತೆರಳುವ ಸಮಯಕ್ಕೆ ಸರಿಯಾಗಿ ರಸ್ತೆ ಗುಡಿಸಲು ಪೌರಕಾರ್ಮಿಕರು ಬರುತ್ತಾರೆ. ತುಸು ವಯಸ್ಸಾದ ಮಹಿಳೆ ಬರಿಗಾಲಲ್ಲಿ ರಸ್ತೆ ಗುಡಿಸುತ್ತಿದ್ದುದನ್ನು ಕಂಡು ರಾಹುಲ್, ಆಂಟಿ ನಿಮಗೆ ಕಾರ್ಪೊರೇಷನ್ ಶೂ ಕೊಟ್ಟಿಲ್ಲವೇ ಎಂದು ಪ್ರಶ್ನಿಸುತ್ತಾನೆ. ಅಯ್ಯೋ ಶೂಗೋದೆ ಕಣಪ್ಪ ನೀನು ಮೂರು ತಿಂಗ್ಳಿಂದ ನಮಗೆ ಸಂಬಳಾನೇ ಕೊಟ್ಟಿಲ್ಲ ಕಣಪ್ಪ . ಮೇಸ್ತ್ರಿ ಕೇಳಿದರೆ ನಮಗೂ ಇನ್ನೂ ಬಂದಿಲ್ಲ ಅಂತಾನೆ, ಇಂಜಿನಿಯರ್ ಕೇಳಿದರೆ ನಿಮ್ಮ ಕಂಟ್ರಾಕ್ಟರ್ ಕೊಡ್ತಾನಮ್ಮ ನಿಮ್ಮ ಸಂಬಳ, ನಮ್ಮನ್ನು ನೀವು ಕೇಳಬಾರದು ಅಂದುಬಿಟ್ಟರು. ನಾಲ್ಕು ದಿನ ಆಯ್ತು ಕಣಪ್ಪ ಚಪ್ಲಿ ಕಿತ್ತೋಗಿ ತಗಾಳಾಕೂ ಕಾಸಿಲ್ಲ ನಮ್ಮ ಹಣೆಬರಹ... ಎಂದಳು. ರಾಹುಲ್ ಒಂದು ಕ್ಷಣ ಯೋಚಿಸಿ, ನಮ್ಮಮ್ಮನ ಹತ್ತಿರ ಎಷ್ಟೊಂದು ಚಪ್ಪಲಿಗಳು ಇವೆ... ನಿಮಗೊಂದು ಜೊತೆ ತಂದುಕೊಡ್ತೇನೆ ಆಂಟಿ ಸರೀನಾ ಎಂದ. ಎಷ್ಟು ದೊಡ್ಡ ಮನಸ್ಸೋ ಕಂದ ನಿಂದು ಅದೇನು ಬ್ಯಾಡ ನಿಮ್ಮ ಸ್ಕೂಲ್ ವ್ಯಾನ್ ಬಂತು ಹತ್ಕೊಂಡೋಗಪ್ಪ ಎಂದು ರಾಹುಲನನ್ನು ಕಳಿಸಿ ಗುಡಿಸೋಕೆ ಶುರು ಮಾಡಿದಳು.

ಸಂಜೆ ಮನೆಗೆ ಬಂದ ರಾಹುಲ್, ತನ್ನಮ್ಮನಿಗೆ ಅಮ್ಮ ನಿನ್ನತ್ರ ಎಷ್ಟೊಂದು ಚಪ್ಪಲಿ ಇದೆಯಲ್ಲ ಒಂದು ಜೊತೆ ಬೇಕಿತ್ತು ನನಗೆ ಎಂದ. ಯಾಕೋ ನಿನಗೆ ಲೇಡೀಸ್ ಚಪ್ಲಿ ನಿನಗೆ ಬೇಕಿದ್ರೆ ಹೊಸದು ಕೊಡಿಸ್ತೇನೆ ಎಂದಳು ಶ್ರೀಲತಾ. ನನಗಲ್ಲಮ್ಮ ನಮ್ಮ ರೋಡ್ ಸ್ವೀಪರ್‌ಗೆ ಕಣಮ್ಮ, ಅವರ ಚಪ್ಲಿ ಕಿತ್ತೋಗಿದೆಯಂತೆ...

ಹೊಸದನ್ನು ತಗೊಳ್ಳೋಕೆ ಅವರತ್ರ ದುಡ್ಡಿಲ್ವಂತೆ ಕಣಮ್ಮ ಎಂದ.

ಅದೆಲ್ಲಾ ಹೈ ಹೀಲ್ಡ್ ಚಪ್ಲಿ ಕಣೋ ಆಂಟಿಗೆ ಆಗಲ್ಲ ಎಂದಳು. ಹೋಗ್ಲಿ ಸ್ವಲ್ಪ ದುಡ್ಡು ಕೊಡಮ್ಮ ಅವರೇ ತಗೊಂಡು ಹಾಕ್ಕೊಳ್ಳಿ ಎಂದ. ದುಡ್ಡು ನನ್ನತ್ರಾನೂ ಎಲ್ಲಿದೆಯೋ ? ನಿಮ್ಮಪ್ಪನ ಸಂಬಳವೆಲ್ಲಾ ನಿಮ್ಮಜ್ಜಿ, ತಾತನ ಆಸ್ಪತ್ರೆಯ ಖರ್ಚಿಗೆ ಸರಿಹೋಗುತ್ತೆ. ಹ್ಯಾಗೋ ನಾನು ದುಡಿತಿರೋದಕ್ಕೆ ಸರಿಹೋಯ್ತು ಇಲ್ಲಾಂದ್ರೆ ಅಷ್ಟೇ ನಮ್ಕತೆ ಎಂದಳು. ಪಟ್ಟುಬಿಡದ ರಾಹುಲ್ ಅಮ್ಮಾ ಪ್ಲೀಸ್ ಅಮ್ಮ ಆಂಟೀಗೆ ಚಪ್ಲಿ ಕೊಡಿಸಮ್ಮ ನನಗೆ ಕೊಡಿಸ್ತೀನಿ ಅಂದ್ಯಲ್ಲ ನಂಗೇನು ಬೇಡ, ನಮ್ಮ ರೋಡ್ ಸ್ವೀಪರ್ ಆಂಟಿಗೆ ಕೊಡ್ಸಮ್ಮ ಎಂದು ಪೀಡಿಸತೊಡಗಿದ.

ಬಾಯ್ಮುಚ್ಚಿಕೊಂಡು ಸುಮ್ನಿರು ಕತ್ತೆ, ಬ್ಯೂಟಿ ಪಾರ್ಲರ್, ಕಾಸ್ಮೆಟಿಕ್ಸ್ ಬಿಲ್ಲು ಇನ್ನೂ ಕೊಟ್ಟಿಲ್ಲ. ನೆಕ್ಸ್ಟ್ ಮಂತ್ ಕೊಡ್ತೀನಿ ಎಂದು ಹೇಳಿ ಬಂದಿದೀನಿ ನೀನು ಬೇರೆ. ಈ ತಿಂಗಳಿನಿಂದ ಸ್ಕೂಲ್ ವ್ಯಾನ್‌ನವನು ಫೀ ಜಾಸ್ತಿ ಮಾಡಿದ್ದಾನೆ ಗೊತ್ತಾ?  ಸುಮ್ನೆ ಹೋಂ ವರ್ಕ್ ಮಾಡಿ ಮಲಗು ಎಂದಳು ಶ್ರೀಲತಾ.

ಸುಮಾರು ಹೊತ್ತಿನವರೆಗೂ ನಿದ್ದೆ ಬರದೆ ಒದ್ದಾಡಿ ಬೆಳಗಿನ ಜಾವ ನಿದ್ದೆಗೆ ಜಾರಿದ ರಾಹುಲ್. ಸುಂದರ ಕನಸೊಂದು ಅಲ್ಲಾವುದ್ದೀನ್ ದೀಪವು ತನಗೆ ಸಿಕ್ಕಂತೆ ಅದರಿಂದ ಹೇಳಿದ ಕೆಲಸವನ್ನು ಕ್ಷಣಾರ್ಧದಲ್ಲಿ ಮಾಡಿ ಮುಗಿಸುವ ಗುಲಾಮನು ಪ್ರತ್ಯಕ್ಷನಾದನು. ಏನು ಬೇಕು ಒಡೆಯ ಎಂದನು, ತಕ್ಷಣವೇ ರಾಹುಲ್ ನಮ್ಮ ರೋಡಿನ ಸ್ವೀಪರ್ ಆಂಟಿಗೆ ತುಂಬ ತುಂಬ ಚಪ್ಪಲಿಗಳು ಎಂದ, ತಕ್ಷಣವೇ ಗುಲಾಮನು ಚಪ್ಪಲಿಯ ರಾಶಿಯನ್ನು ಸೃಷ್ಟಿಸಿದನು. ಆಂಟಿಗೆ ಹೊಸಾ ಚಪ್ಲಿ ಸಿಕ್ತು, ಹೊಸಾ ಚಪ್ಲಿ ಸಿಕ್ತು ಎಂದು ಕೂಗತೊಡಗಿದ.

ಸರಿ ಸುಮಾರು ಅದೇ ಸಮಯದಲ್ಲಿ ಪಕ್ಕದ ರೂಮಿನಲ್ಲಿ ಗಂಡನೊಂದಿಗೆ ಮಲಗಿದ್ದ ಪತ್ರಕರ್ತೆಗೆ ಕೂಡ ಸುಂದರವಾದ ಕನಸು. ಪತ್ರಕರ್ತೆಯಾಗಿ ತಾನು ಹೊಂದಿರುವ ಸಾಮಾಜಿಕ ಕಳಕಳಿಯನ್ನು ಗುರ್ತಿಸಿ ಮಾಧ್ಯಮ ಅಕಾಡೆಮಿಯ ಪ್ರಶಸ್ತಿಯನ್ನು ಮುಖ್ಯಮಂತ್ರಿಗಳ ಕರಕಮಲದಿಂದ ಬಾಂಕ್ವೆಟ್ ಹಾಲ್‌ನಲ್ಲಿ ಪಡೆಯುತ್ತಿರುವಂತೆ...

**ಜಿ. ಟಿ. ನರೇಂದ್ರ ಕುಮಾರ್**
ನಂ. ೨೬, 'ಅರ್ಕಾವತಿ' ೩ನೇ ಅಡ್ಡರಸ್ತೆ, ೩ನೇ ಮುಖ್ಯರಸ್ತೆ, ಪಿ.ಎನ್.ಬಿ. ಲೇಔಟ್, ಡಿ. ಕೆ. ಸಂದ್ರ, ಬೆಂಗಳೂರು – ೭೭




# ಬೆಳವಣಿಗೆ ತೊಂದರೆ (ಪಿಡಿಡಿ) ಇರುವ ಮಕ್ಕಳ ಚಿಕಿತ್ಸೆ ನಿರ್ವಹಣೆ ಹಾಗೂ ತರಬೇತಿಯಲ್ಲಿ ವರದಾನವಾಗಿ ಬಂದಿರುವ ಕಾಮ್ ಡೀಲ್ ಸಂಸ್ಥೆಯ ಪ್ರಾಯೋಗಿಕ ಕೈಪಿಡಿಗಳ ಕಿರುಪರಿಚಯ

೧೯೭೦-೮೦ರ ದಶಕದಲ್ಲಿ ತುಂಬ ಅಪರೂಪವಾಗಿ ಕೇಳಬರುತ್ತಿದ್ದ ಪಿ.ಡಿ.ಡಿ./ಎ.ಎಸ್.ಡಿ. ಎನ್ನುವ ಶಾರೀರಿಕವಾದ, ಮಗುವಿನ ಬೆಳವಣಿಗೆಯ ಹಲವು ವಲಯಗಳ ಮೇಲೆ ಗಾಢವಾದ ಋಣಾತ್ಮಕ ಪ್ರಭಾವ ಬೀರುವಂಥ ನರ ಮಂಡಲದ ನ್ಯೂನತೆ ಇತ್ತೀಚಿನ ದಿನಗಳಲ್ಲಿ ತುಂಬ ವ್ಯಾಪಕವಾಗಿ ಕಂಡುಬರುತ್ತಿರುವುದು ಸಂಬಂಧಪಟ್ಟ ಪೋಷಕರು, ಶಿಕ್ಷಕರು, ತಜ್ಞರು, ಚಿಕಿತ್ಸಕರು ಹಾಗೂ ತರಬೇತಿದಾರರಿಗೆ ಆತಂಕದ ವಿಷಯವಾಗಿದೆ. ಈ ಸಂದರ್ಭದಲ್ಲಿ ಕಾಮ್ ಡೀಲ್ ಸಂಸ್ಥೆಯ ಸ್ಥಾಪಕರಾದ ಡಾ॥ ಪ್ರತಿಭಾ ಕಾರಂತ್ ಹಾಗೂ ಅವರ ಸಿಬ್ಬಂದಿ ವರ್ಗದವರು ಸುಮಾರು ೪೦ ವರ್ಷಗಳ ವೃತ್ತಿ ಅನುಭವ ಹಾಗೂ ಸಂಶೋಧನೆಯ ಫಲಿತಾಂಶಗಳ ಸಾರ ರೂಪವಾಗಿ ಅನೇಕ ಪ್ರಾಯೋಗಿಕ ಕೈಪಿಡಿಗಳನ್ನು ತಯಾರಿಸಿದ್ದಾರೆ. ಇವೆಲ್ಲಾ ಮೂಲದಲ್ಲಿ ಆಂಗ್ಲ ಭಾಷೆಯಲ್ಲಿರುವುದರಿಂದ ಇವುಗಳ ಉಪಯೋಗ ಸೀಮಿತವಾಗಿತ್ತು. ಇವುಗಳ ಉಪಯೋಗವನ್ನು ವಿಸ್ತರಿಸುವ ಉದ್ದೇಶದಿಂದ ಈ ಕೈಪಿಡಿಗಳನ್ನು ನವಕರ್ನಾಟಕ ಪ್ರಕಾಶನ ಕನ್ನಡಕ್ಕೆ ಅನುವಾದಿಸಿ ಪ್ರಕಟಿಸಿದೆ.

(ಪಿ.ಡಿ.ಡಿ./ಎ.ಎಸ್.ಡಿ.) ಈ ತೊಂದರೆಯು ಮುಖ್ಯವಾಗಿ ೮ ಬೆಳವಣಿಗೆ ವಲಯಗಳನ್ನು ಅಂದರೆ ಚಲನಾ ಕೌಶಲ, ದೈನಂದಿನ ಚಟುವಟಿಕೆ, ಭಾಷಾ ಕೌಶಲ, ಅರಿವಿನ ಕೌಶಲ, ಸಾಮಾಜಿಕ ಕೌಶಲ ಹಾಗೂ ಭಾವನಾತ್ಮಕ ಕೌಶಲಗಳನ್ನು ಕುಂಠಿತಗೊಳಿಸುವುದರಿಂದ ಇದಕ್ಕೆ ಸಮಗ್ರವಾದ, ದೀರ್ಘಕಾಲೀನ ಹಾಗೂ ಬಹು ಶಿಸ್ತೀಯ ಚಿಕಿತ್ಸಾ ಕಾರ್ಯಾಚರಣೆ ಅವಶ್ಯಕವಾಗಿರುತ್ತದೆ ಮತ್ತು ಆರಂಭದ ಹಂತದಲ್ಲೇ ಸಮಸ್ಯೆಯನ್ನು ಪತ್ತೆಹಚ್ಚಿ ಚಿಕಿತ್ಸಾಕ್ರಮವನ್ನು ರೂಪಿಸಬೇಕಾಗುತ್ತದೆ. ಈ ರೀತಿಯ ಚಿಕಿತ್ಸಾ ವ್ಯವಸ್ಥೆಯು ತುಂಬ ದುಬಾರಿಯಾಗಿರುವುದರಿಂದ ಮಧ್ಯಮ ಹಾಗೂ ಕೆಳವರ್ಗದ ಜನರಿಗೆ ಎಟುಕುವ ಸಾಧ್ಯತೆ ತುಂಬ ಕಡಿಮೆ. ಈ ಹಿನ್ನೆಲೆಯಲ್ಲಿ ಈ ಪ್ರಾಯೋಗಿಕ ಕೈಪಿಡಿಗಳು ತುಂಬ ಉಪಯುಕ್ತ ಎನ್ನುವುದರಲ್ಲಿ ಯಾವುದೇ ಸಂಶಯವಿಲ್ಲ.

ಕೈಪಿಡಿಗಳ ಪ್ರತ್ಯೇಕ ಕಿರುಪರಿಚಯ

**೧) ಕಮ್ಯುನಿಕೇಷನ್ ಡೀಲ್ : ಕಾರ್ಯಕ್ರಮ**

ಈ ಕೃತಿಯಲ್ಲಿ ಸಂಸ್ಥೆಯ ಕಾರ್ಯಕ್ರಮಗಳು, ಕಾರ್ಯವೈಖರಿ, ಘಟಕಗಳು, ತರಬೇತಿ, ಸಂಶೋಧನೆ, ಪರಿಣಾಮಗಳ ಅಧ್ಯಯನ, ಅನುಸರಣೆ ಅಧ್ಯಯನ, ಇವುಗಳ ಬಗ್ಗೆ ಸಮಗ್ರ ಮಾಹಿತಿ ಹಾಗೂ ಭವಿಷ್ಯದ ಯೋಜನೆಗಳಾದ ಸ್ನಾತಕೋತ್ತರ ಡಿಪ್ಲೊಮಾ ವ್ಯಾಸಂಗ, ಸರ್ಟಿಫಿಕೇಟ್ ಕೋರ್ಸ್‌ಗಳು, ಜಾಗೃತಿ ಕಾರ್ಯಕ್ರಮಗಳು, ಡೀಲ್ ಪೂರ್ವ ಕಾರ್ಯಕ್ರಮ, ಸಾಮಾಜಿಕ ಸಂವಹನ ಗುಂಪುಗಳು, ಶಾಲೆಗೆ ಬೆಂಬಲ ಕೊಡುವುದು, ಮನೆ ತರಬೇತಿ / ಸಂಪರ್ಕ ಕಾರ್ಯಕ್ರಮ, ಸಾಮಗ್ರಿಯ ಅನುವಾದ ಮತ್ತು ಸಂಶೋಧನೆ ಇವುಗಳ ಬಗ್ಗೆ ವಿವರವಾದ ಮಾಹಿತಿ ಸಿಗುತ್ತದೆ.

**೨. ಕಮ್ಯುನಿಕೇಷನ್ ಡೀಲ್ : ಅಭಿವೃದ್ಧಿಯ ತಪಶೀಲು ಪಟ್ಟಿಗಳು**

ಎ) ಸಮಗ್ರ ಚಲನಾ ಚಟುವಟಿಕೆಗಳು; ಬಿ) ಸೂಕ್ಷ್ಮ ಚಲನಾ ಚಟುವಟಿಕೆಗಳು; ಸಿ) ದೈನಂದಿನ ಬದುಕಿನ ಚಟುವಟಿಕೆಗಳು; ಡಿ) ಗ್ರಹಿಸುವ ಭಾಷೆ; ಇ) ವ್ಯಕ್ತಪಡಿಸುವ ಭಾಷೆ; ಎಫ್) ತಿಳಿವಿನ ಕೌಶಲಗಳು; ಜಿ) ಸಾಮಾಜಿಕ ಕೌಶಲಗಳು; ಹೆಚ್) ಭಾವನಾತ್ಮಕ ಕೌಶಲಗಳು

ಈ ಕೈಪಿಡಿಯು ೦-೬ ವರ್ಷ ವಯಸ್ಸಿನ ಮಕ್ಕಳಿಗಾಗಿ ೮ ಕ್ಷೇತ್ರಗಳಲ್ಲಿ ಬೆಳವಣಿಗೆಯ ಪರೀಕ್ಷಾ ತಪಶೀಲು ಗಳೊಂದಿಗೆ ತಯಾರಾಗಿದೆ. ಇದನ್ನು ಬೆಳವಣಿಗೆ ನ್ಯೂನತೆಯುಳ್ಳ ಇತರ ಮಕ್ಕಳಿಗೂ ಉಪಯೋಗಿಸಬಹುದು.

**೩. ಎ.ಎಸ್.ಡಿ. ಬಾಧಿತ ಮಕ್ಕಳ ಕುಟುಂಬದವರಿಗಾಗಿ ಕಾಮ್ ಡೀಲ್ ಕೈಪಿಡಿ**

ಈ ಕೈಪಿಡಿಯನ್ನು ಬಳಸಲು ಅನುಕೂಲವಾಗುವಂತೆ ೩ ಭಾಗಗಳಾಗಿ ವಿಂಗಡಿಸಲಾಗಿದೆ.

**(೧) ಕುಟುಂಬದವರು ಎದುರಿಸುವ ಸಮಸ್ಯೆಗಳು, ಪ್ರಶ್ನೆಗಳು ಇತ್ಯಾದಿ.** ಉದಾ: ಆಟಿಸಂ ನಮ್ಮಿಂದ ಉಂಟಾಗುತ್ತದೆಯೇ? ಇದಕ್ಕೆ ಕಾರಣವೇನು? ನಾವು ಇದನ್ನು ತಡೆಯಬಹುದಿತ್ತೆ?

ಆಟಿಸಂ ಎಂದರೇನು? ಅದು ಕಾಯಿಲೆಯೇ, ಅಥವಾ ಬೆಳವಣಿಗೆಯ ಅವ್ಯವಸ್ಥೆಯೆ?

**(೨) ಮಗುವಿನ ಸಮಸ್ಯೆಗಳು**

ಎ. ತಪಾಸಣೆಗೆ ಮುಂಚಿನ, ತಪಾಸಣೆಯ ಹಾಗೂ ತಪಾಸಣೆಯ ನಂತರದ ಸಮಸ್ಯೆಗಳು.

ಬಿ. ವೈಯಕ್ತಿಕ, ಭಾವನಾತ್ಮಕ, ಸಾಮಾಜಿಕ ಮತ್ತು ದಾಂಪತ್ಯದ ಆತಂಕಗಳು

ಸಿ. ಸಾಮಾನ್ಯ ಸಮಸ್ಯೆಗಳು.

ಈ ಕೈಪಿಡಿಯಲ್ಲಿ ಸಿಗುವ ಸಾಂತ್ವನದ ಮಾದರಿಗಳು ಹೀಗಿವೆ: ಉದಾ : ಆಟಿಸಂ ಕಾಯಿಲೆಯಲ್ಲ. ಅದು ಬೆಳವಣಿಗೆಯ ಅವ್ಯವಸ್ಥೆ, ಈ ಮಕ್ಕಳಲ್ಲಿ ಮಾತಿನ ಮತ್ತು ಮಾತಿಲ್ಲದ ಸಂವಹನಕ್ಕೆ, ಸಾಮಾಜಿಕ ಚಟುವಟಿಕೆಗಳಿಗೆ, ವಿಶ್ರಾಂತಿ ಮತ್ತು ಆಟವಾಡುವ ಚಟುವಟಿಕೆಗಳಿಗೆ ತೊಂದರೆ ಇರುತ್ತದೆ. ಇವರು ಬೇರೆಯವರೊಡನೆ ವ್ಯವಹರಿಸಲು ಮತ್ತು ಸಂವಹಿಸಲು ಕಷ್ಟಪಡುತ್ತಾರೆ. ಇವರು ಮರುಕಳಿಸುವ ದೈಹಿಕ ಚಲನೆಗಳನ್ನು (ಕೈಗಳನ್ನು ಒದರುವುದು, ತೂಗಾಡುವುದು... ಇತ್ಯಾದಿ) ಪ್ರದರ್ಶಿಸುತ್ತಾರೆ. ಇವರು ಜನರೊಡನೆ ಅಸಹಜವಾಗಿ ವರ್ತಿಸುತ್ತಾರೆ. ದೈನಂದಿನ ದಿನಚರಿಯಲ್ಲಿ ಬದಲಾವಣೆಗಳನ್ನು ಪ್ರತಿರೋಧಿಸುತ್ತಾರೆ. ಇವರು ದೃಷ್ಟಿ, ಶ್ರವಣ, ಸ್ಪರ್ಶ, ರುಚಿ ಮತ್ತು ವಾಸನೆಗಳಲ್ಲಿ ಸೂಕ್ಷ್ಮತೆ ಹೊಂದಿರುತ್ತಾರೆ.

ಈ ತೊಂದರೆ ಬೇರೆ ಬೇರೆ ಮಕ್ಕಳನ್ನು ಬೇರೆ ಬೇರೆ ರೀತಿಯಲ್ಲಿ ಬಾಧಿಸುತ್ತದೆ. ಒಂದೇ ಹೆಸರಿನ ಸಮಸ್ಯೆಯ (ತಪಾಸಣೆಯ) ಇಬ್ಬರು ಮಕ್ಕಳು ವಿಭಿನ್ನ ರೀತಿಯಲ್ಲಿ ವ್ಯವಹರಿಸಬಹುದು. ಇತ್ತೀಚೆಗೆ ವಿಭಿನ್ನ ರೀತಿಯಲ್ಲಿ "ಆಟಿಸಂ"ಅನ್ನು ಗುರುತಿಸಲ್ಪಡುವುದರಿಂದ ಮತ್ತು ಆಟಿಸಂ ಬಾಧಿತ ಮಕ್ಕಳಲ್ಲಿ ಬಹುವ್ಯಾಪ್ತಿಯ ವ್ಯತ್ಯಾಸಗಳಿರುವುದರಿಂದ ಪಿ.ಡಿ.ಡಿ. (Pervasive Developmental Disorder) ಮತ್ತು ಎ.ಎಸ್.ಡಿ. (Autistic Spectrum Disorder) ಎಂಬ ಪದಗಳನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ.

ಪಿ.ಡಿ.ಡಿ. ೫ ಉಪವಿಭಾಗಗಳನ್ನು ಸೂಚಿಸುತ್ತದೆ, ೧) ಆಟಿಸ್ಟಿಕ್ ಡಿಸಾರ್ಡರ್, ೨) ಆಸ್ಪರ್ಜಸ್ ಸಿಂಡ್ರೋಮ್, ೩) ರೆಟ್ಸ್ ಸಿಂಡ್ರೋಮ್ ೪) ಚೈಲ್ಡ್‌ಹುಡ್ ಡಿಸ್ ಇಂಟಿಗ್ರೇಟಿವ್ ಡಿಸಾರ್ಡರ್ ಮತ್ತು ೫) ಪಿ.ಡಿ.ಡಿ.

ಈ ಕೈಪಿಡಿಯಲ್ಲಿ ಪಟ್ಟಿ ಮಾಡಿರುವ ಪ್ರಶ್ನೆಗಳಿಗೆ ಕೊಟ್ಟಿರುವ ಉತ್ತರಗಳು ಕುಟುಂಬದವರ ಬಹುಪಾಲು ಸಮಸ್ಯೆಗಳನ್ನು ಪರಿಣಾಮಕಾರಿಯಾಗಿ ಎದುರಿಸಲು ಸಹಕಾರಿಯಾಗಿದೆ. ಜೊತೆಗೆ ಈ ಸಂಸ್ಥೆಯಲ್ಲಿ ಲಭ್ಯವಿರುವ ಇತರ ಸವಲತ್ತುಗಳ ಬಗ್ಗೆಯೂ ಮಾಹಿತಿ ಸಿಗುತ್ತದೆ. ಉದಾ: ಚಿಕಿತ್ಸೆಗೆ ಬೇಕಾಗುವ ಸಹಾಯಕ, ಶೈಕ್ಷಣಿಕ ಉಪಕರಣಗಳು, ಜಾಲತಾಣಗಳು, ಪುಸ್ತಕಗಳು ಇತ್ಯಾದಿ.

**ಕುಸುಮ ಸುರೇಂದ್ರ**









ವಸಂತಕುಮಾರಿಯವರಿಗೆ ಸಂಗೀತ ವಂಶವಾಹಿಯಲ್ಲೇ ಸಂಸ್ಕಾರವಾಗಿ ಬಂದಿತು. ಅವರದ್ದು ಸಂಗೀತಕ್ಕಾಗಿ ಪಕ್ವವಾಗಿದ್ದ ಸಿದ್ಧಜನ್ಮವೆಂದರೆ ತಪ್ಪಾಗಲಾರದು. ಹಾಗಾಗಿ ಆಕೆ ಸ್ವಲ್ಪ ಸಮಯದಲ್ಲಿಯೇ ವೇದಿಕೆಯ ಗಾಯಕಿಯಾಗಿ ಹೊರಹೊಮ್ಮಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ತನ್ನ ತಾಯಿಯ ಸಂಗೀತ ಶೈಲಿಯ ವಿಶೇಷಗಳಾದ ಬಿರುಸಾದ ಕೃತಿ–ಹಾಡಿಕೆ, ತ್ವರಿತವಾದ ಲಯ ಪ್ರಮಾಣ, ಲೀಲಾಜಾಲವಾಗಿ ಧ್ರುತದಲ್ಲಿ ನುಡಿಯುವ ಸ್ವರಕಲ್ಪನೆ ಆಕೆಗೆ ಸಹಜವಾಗಿಯೇ ರೂಢಿಯಾಗಿತ್ತು. ಆದರೆ ಆಕೆಯ ಸಂಗೀತ ಒಂದು ಪಕ್ವತೆ ಪಡೆದದ್ದು ಜಿ. ಎನ್. ಬಾಲಸುಬ್ರಹ್ಮಣ್ಯಂ ಅವರ ಗರಡಿಯಲ್ಲಿ. ಜಿ. ಎನ್. ಬಾಲಸುಬ್ರಹ್ಮಣ್ಯಂರವರ ಬಾನಿಯನ್ನು ಆತ್ಮಸ್ಥಗೊಳಿಸಿಕೊಂಡು, ಅದರ ಪರಿಧಿಯಲ್ಲೇ ತನ್ನದೇ ಆದ ವಿಶಿಷ್ಟ ಶೈಲಿಯನ್ನು ರೂಪಿಸಿಕೊಂಡ ಹೆಗ್ಗಳಿಕೆ ವಸಂತಕುಮಾರಿಯವರದ್ದು. ಜಿ. ಎನ್. ಬಾಲಸುಬ್ರಹ್ಮಣ್ಯಂರವರ ವಿಸ್ತಾರವಾದ ಆಲಾಪನ ಕ್ರಮ, ಹಂತ ಹಂತವಾಗಿ ರಾಗವನ್ನು ಬೆಳೆಸುವ ಶೈಲಿ, ಮಧ್ಯಮಗತಿಯ ಘನವಾದ ತಾನದ ಹಾಡಿಕೆ, ಬಿರ್ಕಾಯುತವಾದ ಸಂಗತಿಗಳು, ಬಿಗಿಯಾದ ಲಯ ನಿರ್ವಹಣೆಯೊಂದಿಗೆ ನಡೆಸುವ ಸಾಹಿತ್ಯ ವಿನ್ಯಾಸ, ಸ್ವರಕಲ್ಪನೆ ಇವೆಲ್ಲವೂ ವಸಂತಕುಮಾರಿಯವರ ಸಂಗೀತದಲ್ಲಿ ಮತ್ತಷ್ಟು ವಿಸ್ತಾರವನ್ನು ಕಂಡಿತು ಎಂದರೆ ಅತಿಶಯವಲ್ಲ.



# ಸಂಗೀತ ಲೋಕದ ಸಾಮ್ರಾಜ್ಞಿ
# ಎಂ. ಎಲ್. ವಸಂತಕುಮಾರಿ

ಎನ್. ಪಿ. ಸಾಯಿಗಣೇಶ್ ಶಾಸ್ತ್ರಿ

೨೦ನೇ ಶತಮಾನವು ಭಾರತ ಹಲವು ರೀತಿಯಲ್ಲಿ ಪುನರಭ್ಯುದಯ ಕಂಡ ಕಾಲಘಟ್ಟ. ರಾಜಕೀಯ ಸ್ವಾತಂತ್ರ್ಯದ ಜೊತೆ ಜೊತೆಗೆ ಭಾರತೀಯ ಜನಮಾನಸ ತನ್ನ ಅಸ್ಮಿತೆಯನ್ನು ಪುನಃ ಶೋಧಿಸಿ ಅಂತರ್ಗತಗೊಳಿಸಿಕೊಳ್ಳಲು ಪ್ರಯತ್ನ ಪಟ್ಟು ತಕ್ಕಮಟ್ಟಿಗೆ ಯಶಸ್ವಿಯೂ ಆದ ಕಾಲಘಟ್ಟ. ಇದರಲ್ಲಿ ಸಾಹಿತ್ಯ ಮತ್ತು ಅಭಿಜಾತ ಕಲೆಗಳ ಪಾತ್ರ ಎಷ್ಟು ಮುಖ್ಯವೆಂಬುದನ್ನು ಬಿಡಿಸಿ ಹೇಳಬೇಕಿಲ್ಲವಷ್ಟೆ. ರಾಜಾಸ್ಥಾನಗಳ, ಶ್ರೀಮಂತ ಪ್ರಭುಗಳ ಆಶ್ರಯದಲ್ಲಿ ಬೆಳೆದಿದ್ದ ಕಲೆಯ ಪೋಷಣೆಯ ಜವಾಬ್ದಾರಿ, ಪ್ರಜೆಗಳ ಪಾಲಿಗೆ ಬಂದಾಗ ಆದ ಅನೇಕ ಬೆಳವಣಿಗೆಗಳು ಕಲೆ, ಕಲಾವಿದ ಹಾಗೂ ರಸಿಕ ಸಮೂಹದ ಮೇಲೆ ಒಟ್ಟಾರೆ ಪ್ರಭಾವ ಬೀರಿದವು. ಇಂತಹ ಸಂಧಿಕಾಲದಲ್ಲಿ ಭಾರತೀಯ ಅಭಿಜಾತ ಕಲೆಗಳ ಸ್ರೋತಗಳು ಹಲವು ದಿಕ್ಕುಗಳಲ್ಲಿ ಪ್ರವಹಿಸುವಾಗ, ಈ ಅಭ್ಯುದಯಕ್ಕೆ ತನ್ನದೇ ಆದ ಕೊಡುಗೆ ನೀಡಿದ್ದು ಕರ್ನಾಟಕ ಶಾಸ್ತ್ರೀಯ ಸಂಗೀತ. ಕರ್ನಾಟಕ ಸಂಗೀತದ ತ್ರಿಮೂರ್ತಿಗಳಾದ ತ್ಯಾಗರಾಜರು, ಮುತ್ತುಸ್ವಾಮಿ ದೀಕ್ಷಿತರು ಮತ್ತು ಶ್ಯಾಮಾಶಾಸ್ತ್ರಿಗಳು ಹಾಕಿಕೊಟ್ಟ ಮಾರ್ಗದಲ್ಲೇ ಲಕ್ಷ್ಯ – ಲಕ್ಷಣವನ್ನು ಹಿಗ್ಗಿಸಿದ ಅನೇಕ ಮೇರು ವಿದ್ವಾಂಸರು – ವಾಗ್ಗೇಯಕಾರರು ಸಂಗೀತ ತನ್ನ ವ್ಯಾಪ್ತಿಯನ್ನು ಹಿಗ್ಗಿಸಲು ಸೂಕ್ತವಾದ ಬುನಾದಿಯನ್ನು ಹಾಕಿಕೊಟ್ಟರು. ವಾಲಾಜಪೇಟೆ ವೆಂಕಟರಮಣ ಭಾಗವತರ್, ಪಟ್ನಮ್ ಸುಬ್ರಹ್ಮಣ್ಯಂ ಅಯ್ಯರ್, ಪಲ್ಲವಿ ಶೇಷಯ್ಯರ್, ಪೂಚಿ ಶ್ರೀನಿವಾಸ ಅಯ್ಯಂಗಾರ್, ಮಹಾವೈದ್ಯನಾಥ ಅಯ್ಯರ್, ಸುಬ್ಬರಾಯ ಶಾಸ್ತ್ರಿ, ಮೈಸೂರು ವಾಸುದೇವಾಚಾರ್ಯ... ಹೀಗೆ ಅನೇಕ ವಿದ್ವಾಂಸರು ವಾಗ್ಗೇಯತ್ವವನ್ನೂ ಒಳಗೊಂಡವರಾದ ಕಾರಣ ಲಕ್ಷ್ಯ ಮಾರ್ಗದ ಹರಿವನ್ನು ವಿಶಾಲವಾದ ಜೀವನದಿಯ ಪಾತ್ರದಂತೆ ಹಿಗ್ಗಿಸಿದರು. ಈ ಭದ್ರ ತಳಪಾಯದಿಂದಾಗಿ ಕರ್ನಾಟಕ ಸಂಗೀತ ಕ್ಷೇತ್ರದಲ್ಲಿ ಬಹಳಷ್ಟು ಮಹಾವಿದ್ವಾಂಸರು, ವಿದುಷಿಯರು ಪ್ರವರ್ಧಮಾನಕ್ಕೆ ಬರಲು ಸಾಧ್ಯವಾಯಿತು. ಸಂಗೀತದ ಗುರಿ ಆತ್ಮೋದ್ಧಾರವೇ ಆದರೂ ಅದು ಜನರನ್ನು ತಲುಪುವ ಕ್ರಮ ಸಾಕಷ್ಟು ಮಾರ್ಪಾಡಾಯಿತು. ತನ್ನ ಮೂಲ ಸ್ವರೂಪವನ್ನೂ ಕಾಪಿಟ್ಟುಕೊಂಡು, ಪ್ರದರ್ಶನ ಕಲೆಯಾಗಿಯೂ ತಲುಪಬೇಕಾದ ಸಂದರ್ಭದಲ್ಲಿ ಈಗಿನ 'ಕಚೇರಿ' ಎಂಬ ಮಾದರಿಯ ಉಗಮವಾಯಿತು. ಅರಿಯಾಕ್ಕುಡಿ ರಾಮಾನುಜ ಅಯ್ಯಂಗಾರ್ಯರೇ ಮೊದಲಾಗಿ ದಕ್ಷಿಣದ ಅನೇಕ ವಿದ್ವಾಂಸರು ಈ ಮಾದರಿಯನ್ನು ಮತ್ತಷ್ಟು ಸಂಸ್ಕರಿಸಿದರು. ತದನಂತರದ ಕಾಲವನ್ನು ಕರ್ನಾಟಕ ಸಂಗೀತ ಕಂಡ ಸುವರ್ಣ ಯುಗವೆಂದರೆ ತಪ್ಪಾಗಲಾರದು. ಗಾತ್ರ / ಗಾಯನ ಸಂಗೀತ, ವಾದ್ಯ (ವೀಣೆ, ಕೊಳಲು, ವಯೊಲಿನ್) ಮೊದಲಾದ ವಿಭಾಗಗಳು ಕಂಡ ಅಭ್ಯುದಯ, ಕಲಾಪ್ರಪಂಚದ ಅದೃಷ್ಟವೇ ಸರಿ. ಗಾಯನದಲ್ಲಿ ಶೆಮ್ಮಂಗುಡಿ ಶ್ರೀನಿವಾಸ ಅಯ್ಯರ್ ಅವರ ಭಾವಪೂರ್ಣ, ಸರ್ವಲಘು ಸಂಗೀತದ ಬಗೆ ಒಂದಾದರೆ, ಮಧುರೈ ಮಣಿ ಅಯ್ಯರ್‌ರವರ ಲಾಲಿತ್ಯದ ಸಂಗೀತ ಮತ್ತೊಂದೆಡೆ. ಜಿ. ಎನ್. ಬಾಲಸುಬ್ರಹ್ಮಣ್ಯಂರವರ ಬಿರ್ಕಾಗಳಿಂದ ಕೂಡಿದ ಮೋಹಕ ಸಂಗೀತ ಶೈಲಿ ಮತ್ತೊಂದು ಬಗೆ. ಆಲತ್ತೂರು ಸಹೋದರರ ಯುಗಳ ಗಾಯನದ ಗಾಂಭೀರ್ಯ, ಅಸಾಧಾರಣ ಪ್ರತಿಭೆ ಹಾಗೂ ವ್ಯುತ್ಪತ್ತಿಯುಳ್ಳ ಬಾಲಮುರಳಿಯವರ ನವೀನ ಮಾರ್ಗ – ಇವೆಲ್ಲವುಗಳ ನಡುವೆ ಮತ್ತೊಂದು ಮುಖ್ಯವಾಗಿ ಗಮನಿಸಬೇಕಾದ ವಿದ್ಯಮಾನ, ವೇದಿಕೆ ಸಂಗೀತದಲ್ಲಿ ವಿದುಷಿಯರ ಬಾಹುಳ್ಯದ ಬೆಳವಣಿಗೆ ಗಮನಾರ್ಹವಾದುದು. ಈ ಘನಾತ್ಮಕ ಬೆಳವಣಿಗೆಯಲ್ಲಿ

ಪ್ರಮುಖ ಪಾತ್ರ ವಹಿಸಿದವರು ಅನೇಕರಾದರೂ, ಅವರಲ್ಲಿ ಬೃಂದಾ – ಮುಕ್ತಾ, ಡಿ. ಕೆ. ಪಟ್ಟಮ್ಮಾಳ್, ಎಂ. ಎಸ್. ಸುಬ್ಬುಲಕ್ಷ್ಮಿ ಮತ್ತು ಎಂ. ಎಲ್. ವಸಂತಕುಮಾರಿಯವರ ಕೊಡುಗೆ ವಿಶೇಷ.

ಸಂಗೀತ ಸರಸ್ವತಿಯ ಅಭಿವ್ಯಕ್ತಿಯ ಜಾಡು ಅಷ್ಟು ಸುಲಭಕ್ಕೆ ಅರ್ಥವಾಗುವಂಥದ್ದಲ್ಲ. ನಾದ, ಲಯ, ಮಾಧುರ್ಯ, ಧೀ ಶಕ್ತಿ, ಭಾವ – ಇವೆಲ್ಲವೂ ಆಕೆಯ ಅಂಶಗಳಷ್ಟೆ. ಒಬ್ಬೊಬ್ಬ ಕಲಾವಿದ / ಕಲಾವಿದೆಯಲ್ಲಿ ಒಂದೊಂದು ಅಂಶವು ಮುನ್ನೆಲೆಗೆ ಬರುವುದು ಸಾಮಾನ್ಯವಾಗಿ ನಮ್ಮ ಗಮನಕ್ಕೆ ಬರುವುದುಂಟು. ಆದರೆ ಈ ಎಲ್ಲ ಅಂಶಗಳೂ ಒಂದೆಡೆ ಸಮಪ್ರಮಾಣದಲ್ಲಿ ಸೇರಿ ಮೂರ್ತರೂಪ ಪಡೆದುಕೊಳ್ಳುವುದು ವಿರಳ. ಲೇಖಕರೊಬ್ಬರು (ಶ್ರುತಿ – ನಿಯತಕಾಲಿಕ – ೨೦೧೧) ಎಂ. ಎಲ್. ವಿ. ಯವರ ಬಗ್ಗೆ ಬರೆಯುತ್ತ, ಎಂ. ಎಲ್. ವಿ. ಎಂದರೆ 'ಎಂ – ಮೆಲಡಿ, ಎಲ್– ಲಯ, ವಿ – ವಿದ್ವತ್' ಎಂದು ಸೂಕ್ತವಾಗಿ ವರ್ಣಿಸಿದ್ದಾರೆ. ಅವರ ಸಂಗೀತದ ವಿಶೇಷವೇ ಅದು. ಖಚಿತವಾದ ಲಯ, ಮಾಧುರ್ಯಪೂರ್ಣ ಗಾಯನ, ಹೊಸತನ್ನು ಸದಾ ಹುಡುಕುವ ಅನ್ವೇಷಕ ಪ್ರವೃತ್ತಿ, ಸಂಗೀತದ ಲಕ್ಷಣವನ್ನು ಚಿಕಿತ್ಸಕ ದೃಷ್ಟಿಯಿಂದ ಪರಿಶೀಲಿಸಿ ಅದನ್ನು ಲಕ್ಷ್ಯಕ್ಕೆ ಅಳವಡಿಸುವ ಸಾಹಸಿ ಮನೋಧರ್ಮ – ಇವೆಲ್ಲ ಅವರ ಸಂಗೀತ – ಲಕ್ಷಣಗಳು ಎನ್ನಬಹುದು.


**ತಮ್ಮ ಎಳೆಯ ವಯಸ್ಸಿನಲ್ಲಿ ಎಂ. ಎಲ್. ವಸಂತಕುಮಾರಿ**

**ಜೀವನ ವಿವರ**

ಮದ್ರಾಸ್ ಲಲಿತಾಂಗಿ ವಸಂತಕುಮಾರಿ (ಎಂ. ಎಲ್. ವಿ.) ಜನಿಸಿದ್ದು ಜುಲೈ ೩, ೧೯೨೮ರಲ್ಲಿ. ತಂದೆ ಅಯ್ಯಾಸ್ವಾಮಿ ಅಯ್ಯರ್ ಮತ್ತು ತಾಯಿ ಲಲಿತಾಂಗಿ. ತಂದೆ ಮೂಲತಃ ತಂಜಾವೂರು ಪ್ರಾಂತ್ಯದವರಾಗಿದ್ದು, ವೆಂಕಟರಾಮ ಅಯ್ಯರ್ ಎಂಬ ವಿದ್ವಾಂಸರ ಶಿಷ್ಯರು. ಕರ್ನಾಟಕ ಶಾಸ್ತ್ರೀಯ ಸಂಗೀತದಲ್ಲಿ ಒಳ್ಳೆಯ ಪರಿಶ್ರಮ ಮತ್ತು ಹಿಂದೂಸ್ತಾನಿ ಸಂಗೀತದ ಬಗ್ಗೆಯೂ ಒಲವಿದ್ದವರು. ತಾಯಿ ಲಲಿತಾಂಗಿ ದೇವದಾಸಿ ಪರಂಪರೆಯವರಾಗಿದ್ದು, ತಮ್ಮ ಜೀವನದ ಮೊದಲ ಭಾಗವನ್ನು ಮೈಸೂರಲ್ಲಿ ಕಳೆದವರು. ಮೈಸೂರಿನ ಪಟ್ಟಾಭಿರಾಮಯ್ಯನವರ ಬಳಿ ಅನೇಕ ವರ್ಷ ಸಂಗೀತಾಭ್ಯಾಸ ಮಾಡಿ ನಂತರ ಮದ್ರಾಸ್ ಪ್ರಾಂತ್ಯದಲ್ಲಿ ನೆಲೆಸಿದವರು. ಇವರಿಬ್ಬರ ಕೂಸು ವಸಂತಕುಮಾರಿ. ಸಂಗೀತ ಪ್ರಪಂಚದ ಆಗಿನ ಲೌಕಿಕ ಕಷ್ಟಗಳ ಅರಿವಿದ್ದ ಅವರಿಗೆ ವಸಂತಕುಮಾರಿ ಸಂಗೀತವನ್ನು ಲೌಕಿಕಕ್ಕೆ ಆಶ್ರಯಿಸುವುದು ಸುತರಾಂ ಇಷ್ಟವಿರದ ಕಾರಣ, ಮಗುವಿನ ಓದು ಕಾನ್ವೆಂಟ್ ಶಾಲೆಯಲ್ಲೇ ನಡೆಯಿತು. ಆದರೆ ವಂಶವಾಹಿಯಲ್ಲೇ ಬಂದ ಸಂಗೀತ – ಸಂಸ್ಕಾರಕ್ಕೊಂದು ಅಭಿವ್ಯಕ್ತಿ ಸಿಗದೆ ಅದುಮಿಡುವುದು ಅಸಾಧ್ಯವಾಗಿದ್ದಿತು. ವಸಂತಕುಮಾರಿ ತನ್ನ ೮ನೇ ವಯಸ್ಸಿಗೆ ತಾಯಿಯ ಜೊತೆ ಕಚೇರಿಯಲ್ಲಿ ಸಹಗಾಯನ ಮಾಡುವಷ್ಟು ಪರಿಶ್ರಮ ಹೊಂದಿದ್ದಳು. ೧೯೪೧ರಲ್ಲಿ ಲಲಿತಾಂಗಿಯವರ ಕಚೇರಿಯೊಂದನ್ನು ಬೆಂಗಳೂರಲ್ಲಿ ಏರ್ಪಾಟು ಮಾಡಲಾಗಿತ್ತು. ತೀವ್ರ ಆಸ್ತಮಾದ ಕಾರಣ ಅನಿವಾರ್ಯವಾಗಿ ಆಕೆಗೆ ಹಾಡಲು ಸಾಧ್ಯವಾಗದೆ ಹೋದಾಗ ೧೩ ವರ್ಷದ ಬಾಲಕಿ ತಾಯಿಯ ಸ್ಥಾನ ತುಂಬಿದಳು! ಅತೀವ ಯಶಸ್ಸನ್ನು ಕಂಡ ಕಚೇರಿಯ ಕಾರಣ ವಸಂತಕುಮಾರಿಯ ಮೊದಲ ಧ್ವನಿಮುದ್ರಣವೂ ದಾಖಲಾಗುವ ಅವಕಾಶ ದೊರೆಯಿತು. ತ್ವರಿತವಾಗಿ ಅವಕಾಶಗಳು ಅರಸಿಬಂದವು. ಆಕೆಯ ಹಾಡಿಕೆಯನ್ನು ಗಮನಿಸಿದ ಅಂದಿನ ಸಂಗೀತ ಲೋಕದ ಅಗ್ರಗಣ್ಯರಾಗಿದ್ದ ಜಿ. ಎನ್. ಬಾಲಸುಬ್ರಹ್ಮಣ್ಯಂ ಸ್ವತಃ ತಾವೇ ಕಲಿಸುವುದಾಗಿ ಮುಂದೆಬಂದರು. ಮುಂದೆ ಆಕೆ ಗುರುಗಳ ಸಂಗೀತ ಶೈಲಿಯನ್ನು ಲೋಕಪ್ರಸಿದ್ಧಿಗೊಳಿಸಿ ಸಾರ್ಥಕ ಶಿಷ್ಯೆ ಎನ್ನಿಸಿಕೊಂಡಿದ್ದು ಇತಿಹಾಸ. ವಸಂತಕುಮಾರಿ ವಿವಾಹವಾದದ್ದು 'ವಿಕಟಮ್' ಕೃಷ್ಣಮೂರ್ತಿಯವರನ್ನು. ವಸಂತಕುಮಾರಿ ದಂಪತಿಗೆ ಇಬ್ಬರು ಮಕ್ಕಳು. ಮಗಳು ಶ್ರೀವಿದ್ಯಾ (ಖ್ಯಾತ ಸಿನಿಮಾ ನಟಿ) ಮತ್ತು ಮಗ ಶಂಕರರಾಮನ್. ದಾಂಪತ್ಯ ಜೀವನದಲ್ಲಿ ವಸಂತಕುಮಾರಿ ಸಿಹಿಗಿಂತ ಕಹಿಯುಂಡದ್ದೇ ಹೆಚ್ಚು. ಆದರೆ ಈ ಕಹಿ ಆಕೆಯ ಸಂಗೀತ ಜೀವನವನ್ನು ಹೆಚ್ಚಾಗಿ ಬಾಧಿಸಲಿಲ್ಲ ಎನ್ನುವುದು ಕಲಾಪ್ರಪಂಚದ ಭಾಗ್ಯ.

**ಸಂಗೀತ ಶೈಲಿ – ಬಾನಿ**

ವಸಂತಕುಮಾರಿಯವರಿಗೆ ಸಂಗೀತ ವಂಶವಾಹಿಯಲ್ಲೇ ಸಂಸ್ಕಾರವಾಗಿ ಬಂದಿತು. ಅವರದ್ದು ಸಂಗೀತಕ್ಕಾಗಿ ಪಕ್ವವಾಗಿದ್ದ ಸಿದ್ಧಜನ್ಮವೆಂದರೆ ತಪ್ಪಾಗಲಾರದು. ಹಾಗಾಗಿ ಆಕೆ ಸ್ವಲ್ಪ ಸಮಯದಲ್ಲಿಯೇ ವೇದಿಕೆಯ ಗಾಯಕಿಯಾಗಿ ಹೊರಹೊಮ್ಮಿದ್ದರಲ್ಲಿ ಆಶ್ಚರ್ಯವೇನೂ ಇಲ್ಲ. ತನ್ನ ತಾಯಿಯ ಸಂಗೀತ ಶೈಲಿಯ ವಿಶೇಷಗಳಾದ ಬಿರುಸಾದ ಕೃತಿ–ಹಾಡಿಕೆ, ತ್ವರಿತವಾದ ಲಯ ಪ್ರಮಾಣ, ಲೀಲಾಜಾಲವಾಗಿ ದ್ರುತದಲ್ಲಿ ನುಡಿಯುವ ಸ್ವರಕಲ್ಪನೆ ಆಕೆಗೆ ಸಹಜವಾಗಿಯೇ ರೂಢಿಯಾಗಿತ್ತು. ಆದರೆ ಆಕೆಯ ಸಂಗೀತ ಒಂದು ಪಕ್ವತೆ ಪಡೆದದ್ದು


**ಕಛೇರಿಯಲ್ಲಿ ಹಾಡುತ್ತಿರುವ ಎಂ. ಎಲ್. ವಸಂತಕುಮಾರಿ**


**ಎಂ. ಎಸ್. ಸುಬ್ಬುಲಕ್ಷ್ಮಿ, ಜಯಲಕ್ಷ್ಮಿ, ಸಂದಾನಮ್ ಸುಧಾ ರಂಗನಾಥನ್ ಅವರೊಂದಿಗೆ ಎಂ. ಎಲ್. ವಸಂತಕುಮಾರಿ**

ಜಿ. ಎನ್. ಬಾಲಸುಬ್ರಹ್ಮಣ್ಯಂ ಅವರ ಗರಡಿಯಲ್ಲಿ. ಜಿ. ಎನ್. ಬಾಲಸುಬ್ರಹ್ಮಣ್ಯಂರವರ ಬಾನಿಯನ್ನು ಆತ್ಮಸ್ಥಗೊಳಿಸಿಕೊಂಡು, ಅದರ ಪರಿಧಿಯಲ್ಲೇ ತನ್ನದೇ ಆದ ವಿಶಿಷ್ಟ ಶೈಲಿಯನ್ನು ರೂಪಿಸಿಕೊಂಡ ಹೆಗ್ಗಳಿಕೆ ವಸಂತಕುಮಾರಿಯವರದ್ದು. ಜಿ. ಎನ್. ಬಾಲಸುಬ್ರಹ್ಮಣ್ಯಂರವರ ವಿಸ್ತಾರವಾದ ಆಲಾಪನ ಕ್ರಮ, ಹಂತ ಹಂತವಾಗಿ ರಾಗವನ್ನು ಬೆಳೆಸುವ ಶೈಲಿ, ಮಧ್ಯಮಗತಿಯ ಘನವಾದ ತಾನದ ಹಾಡಿಕೆ, ಬಿರ್ಕಾಯುತ ಸಂಗತಿಗಳು, ಬಿಗಿಯಾದ ಲಯ ನಿರ್ವಹಣೆಯೊಂದಿಗೆ ನಡೆಸುವ ಸಾಹಿತ್ಯ ವಿನ್ಯಾಸ, ಸ್ವರಕಲ್ಪನೆ ಇವೆಲ್ಲವೂ ವಸಂತಕುಮಾರಿಯವರ ಸಂಗೀತದಲ್ಲಿ ಮತ್ತಷ್ಟು ವಿಸ್ತಾರವನ್ನು ಕಂಡಿತು ಎಂದರೆ ಅತಿಶಯವಲ್ಲ. ಖ್ಯಾತ ವಿದ್ವಾನ್ ಮುಡಿಕೊಂಡನ್ ವೆಂಕಟರಾಮ ಅಯ್ಯರ್ ಬಳಿ 'ಪಲ್ಲವಿ' ಹಾಡಿಕೆಯ ಬಗ್ಗೆ ವಿಶೇಷವಾಗಿ ಅಧ್ಯಯನ ಮಾಡಿದ ಎಂ. ಎಲ್. ವಿ. ಮುಂದೆ ಆ ಕಲಿಕೆಯ ಅರಿವನ್ನು ದುಡಿಸಿಕೊಂಡ ಬಗೆ ವಿಶೇಷವಾದ್ದು. ಕ್ಲಿಷ್ಟ ತಾಳಗಳ ಪಲ್ಲವಿಗಳನ್ನು ಯಾವುದೇ ಹಿಂಜರಿಕೆಯಿಲ್ಲದೆ ಕಚೇರಿಗಳಲ್ಲಿ ಅವರು ನಿರ್ವಹಿಸುತ್ತಿದ್ದುದರ ಹಿಂದೆ ಈ ಕಲಿಕೆಯ ಬೆಂಗಾವಲಿತ್ತು.

ವೇದಿಕೆಯ ಕಲಾವಿದರಾಗಿ ವಸಂತಕುಮಾರಿ ತಮ್ಮ ಜೀವನವಿಡೀ ಯಶಸ್ಸನ್ನು ಕಂಡವರು. ಸುಮಾರು ೫ ದಶಕಗಳ ಕಾಲ ಸಂಗೀತ ಸಾಮ್ರಾಜ್ಞಿಯಾಗಿ ಮೆರೆದರು ಎಂದರೆ ಅತಿಶಯವಲ್ಲ. ಅದಕ್ಕೆ ಕಾರಣ ಅವರ ಸರ್ವಗುಣ ಸಂಪನ್ನವಾದ ಸಂಗೀತವಲ್ಲದೆ ಬೇರೇನೂ ಅಲ್ಲ. ಗಾಯನದ ಶೈಲಿಯನ್ನು, ಕಚೇರಿಯ ಹಾಡಿಕೆಯಲ್ಲಿನ ಅವರ ಆಯ್ಕೆಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಅವರ ಸಂಗೀತದ ಶ್ರೀಮಂತಿಕೆ ಎಂಥದ್ದು ಎಂಬುದು ಗೋಚರವಾದೀತು. ಎಂ.ಎಲ್.ವಿ.ಯವರ ಬಹುಪಾಲು ಕಚೇರಿಗಳಲ್ಲಿ ಏಕತಾನತೆಯ ಅಂಶಗಳು ಕಮ್ಮಿ. ಅವರ ಕಚೇರಿಯ ವೈವಿಧ್ಯತೆಗೆ ಕಾರಣವಿರಬಹುದಾದ ಒಂದೊಂದೇ ಅಂಶಗಳನ್ನು ಗಮನಿಸೋಣ:

✶**ರಾಗಗಳ ಆಯ್ಕೆ** – ಎಂ. ಎಲ್. ವಿ. ಅವರ ಸಂಗೀತ ವಿನಿಕೆಯಲ್ಲಿ ರಾಗಗಳ ಆಯ್ಕೆಯ ವೈವಿಧ್ಯತೆ ಎದ್ದು ಕಾಣುತ್ತಿದ್ದ ಮುಖ್ಯ ಅಂಶ. ಭಾವದಲ್ಲಿ ಒಂದಕ್ಕೊಂದು ಹತ್ತಿರವಿರುವ ರಾಗಗಳು, ಒಂದೇ ರಾಗದ ಜನ್ಯ ರಾಗಗಳು. ಇವನ್ನು ಒಂದೇ ಕಚೇರಿಯಲ್ಲಿ ಹಾಡಿದ ಉದಾಹರಣೆಗಳು ಬಹಳ ಕಡಿಮೆ. ಅವರ ಕಚೇರಿಯ (ಮದ್ರಾಸ್ ಮ್ಯೂಸಿಕ್ ಕ್ಲಬ್ – ೧೯೬೭) ಒಂದು ಪಟ್ಟಿಯ ಉದಾಹರಣೆಯನ್ನು ಗಮನಿಸೋಣ – ವಾತಾಪಿ ಗಣಪತಿಂ (ಹಂಸಧ್ವನಿ), ಶೋಬಿಲ್ಲು ಸಪ್ತಸ್ವರ (ಜಗನ್ಮೋಹಿನಿ), ರಾಮನಾಥಮ್ ಭಜೇಹಂ (ಕಾಶೀರಾಮಕ್ರಿಯ), ವಂದೇ ಸದಾ ಪದ್ಮನಾಭಂ (ನವರಸಕನ್ನಡ), ಏಮನಿ ಪೊಗಡುದುರಾ (ವೀರ ವಸಂತ), ಎವರನೀ (ದೇವಾಮೃತವರ್ಷಿಣಿ), ಚೇತುಲಾರ (ಭೈರವಿ), ಅಪ್ಪದೂರು (ಖಮಾಚ್), ಬಾರೋ ಕೃಷ್ಣಯ್ಯ (ಮಾಂಡ್), ರಾಗಮಾಲಿಕೆ ಮತ್ತು ಮಂಗಳ. ಇಲ್ಲಿ ನಾವು ಮುಖ್ಯವಾಗಿ ಗಮನಿಸಬೇಕಾದ್ದು ರಾಗಗಳ ಆಯ್ಕೆ ಮತ್ತು ಅದರ ಅನುಕ್ರಮವನ್ನು. ಮೊದಲೆರಡು ರಾಗಗಳಲ್ಲಿ ಬಳಕೆಯಾದ ಸ್ವರಗಳ ವೈವಿಧ್ಯತೆ, ತದನಂತರದ ಪ್ರತಿಮಧ್ಯಮ ರಾಗ, ಮುಂದೆರಡು ಅಪರೂಪದ ರಾಗಗಳು. ಮುಖ್ಯ ವಿನಿಕೆಯಾಗಿ ಘನವಾದ ಭೈರವಿಯ ನಂತರ ಮನಸ್ಸಿಗೆ ಹಾಯೆನಿಸುವ ಖಮಾಚ್ ಮತ್ತು ಲಘುವಾದ ಮಾಂಡ್. ಈ ವೈವಿಧ್ಯತೆ ಎಂ. ಎಲ್. ವಿ. ಅವರ ಕಚೇರಿಗೆ ತುಂಬು ಭಾವವನ್ನು ತಂದುಕೊಡುತ್ತಿತ್ತು.

✶ **ಲಯ :** ವಸಂತಕುಮಾರಿಯವರ ಸಂಗೀತದಲ್ಲಿ ಲಯದ ನಿರ್ವಹಣೆ ಪ್ರಮುಖವಾದ ಅಂಶ. ಆಯಾ ಕೃತಿಗೆ ಬೇಕಾದ ನಿಖರವಾದ ಲಯವನ್ನು ಅವರು ಆಯ್ದುಕೊಳ್ಳುತ್ತಿದ್ದುದು ಕೂಡ ಸಂಗೀತ ಕಳೆ ಕಟ್ಟುವುದಕ್ಕಿದ್ದ ಮುಖ್ಯ ಕಾರಣಗಳಲ್ಲೊಂದು. ಕಚೇರಿಯ ಯಾವ ಹಂತದಲ್ಲಿ, ಯಾವ ಕೃತಿಗೆ ಯಾವ ಲಯ ಸೂಕ್ತ ಎಂಬುದರ ಸಮ್ಯಕ್ ಪ್ರಜ್ಞೆ ಅವರಲ್ಲಿ ಸಹಜವಾಗಿಯೇ ಇದ್ದಿತು.

✶**ಕೃತಿ ವೈವಿಧ್ಯತೆ :** ಎಂ. ಎಲ್. ವಿ. ಸಾಧಾರಣವಾಗಿ ಪ್ರಮುಖ ರಾಗಗಳಲ್ಲಿ ಅಪರೂಪದ ಕೃತಿಗಳು (ಉದಾ : ಭೈರವಿ– ಸರ್ವಾಂತರ್ಯಾಮಿ), ಅಪರೂಪದ ರಾಗಗಳಲ್ಲಿ ಪ್ರಸಿದ್ಧ ಕೃತಿಗಳು (ಏಮನಿ ಪೊಗಡುದುರಾ – ವೀರ ವಸಂತ) – ಹೀಗೆ ಒಂದು ಬಗೆಯ ಸಮತೋಲನವನ್ನು ಕಾಪಾಡಿಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದರು. ಆಯಾ ಕಚೇರಿಯ ರಸಿಕ ಸಮೂಹಕ್ಕೆ ತಕ್ಕಂತೆ ತಮ್ಮ ವಿನಿಕೆಯನ್ನು ನಿರ್ವಹಿಸುತ್ತಿದ್ದುದೂ ಕೂಡ ಅವರ ಮತ್ತೊಂದು ವಿಶೇಷತೆಯೇ ಸರಿ. ಅಪಾರವಾದ ಕೃತಿ ಸಂಪತ್ತು ಈ ರೀತಿಯ ಸಂದರ್ಭಗಳಿಗೆ ಒದಗಿಬರುತ್ತಿತ್ತು. ಬೆಂಗಳೂರು, ಮೈಸೂರು ಇತ್ಯಾದಿ ಸ್ಥಳಗಳಲ್ಲಿ ಕಚೇರಿಗಳು ನಡೆದಾಗ ಅವರ ಹಾಡಿಕೆಯಲ್ಲಿ



ಸುಬ್ಬುಲಕ್ಷ್ಮಿ ಅವರೊಂದಿಗೆ ಎಂ. ಎಲ್. ವಸಂತಕುಮಾರಿ

ಕಡ್ಡಾಯವಾಗಿ ಎರಡು–ಮೂರು ದೇವರನಾಮಗಳು ಸ್ಥಾನ ಪಡೆಯುತ್ತಿದ್ದವು. ಅವೂ ಕಚೇರಿಯ ಕಡೆಯ ಭಾಗದಲ್ಲಿ ಹೆಸರಿಗಷ್ಟೇ ಬರದೆ, ರಾಗ–ಸ್ವರಯುಕ್ತವಾಗಿ ಪ್ರಸ್ತುತ ಪಡಿಸಲ್ಪಟ್ಟು ರಸಿಕರ ಮನಸ್ಸನ್ನು ಸೂರೆಗೊಳ್ಳುತ್ತಿದ್ದವು. ಶ್ರೀನಿವಾಸ ಎನ್ನ ಬಿಟ್ಟು (ಶ್ರೀರಂಜನೀ), ಶಿವ ದರುಶನ (ಮಧ್ಯಮಾವತಿ), ಪೋಗದಿರೆಲೊ ರಂಗ (ಶಂಕರಾಭರಣ) ಇತ್ಯಾದಿ ಹತ್ತು ಹಲವು ದೇವರನಾಮಗಳನ್ನು ಶಾಸ್ತ್ರೀಯವಾಗಿ ಹಾಡಿ ಕಚೇರಿಯ ಪದ್ಧತಿಗೆ ಅಳವಡಿಸಿಕೊಂಡ ಖ್ಯಾತನಾಮರಲ್ಲಿ ಎಂ. ಎಲ್. ವಿ. ಅಗ್ರಗಣ್ಯರು. ದೇವರನಾಮಗಳಷ್ಟೇ ಅಲ್ಲದೆ ಶ್ಲೋಕ, ತಮಿಳು ಕೃತಿಗಳು, ಜಾವಳಿ, ತಿರುಪ್ಪುಗಳ್, ಭಜನ್, ಅಷ್ಟಪದಿ, ಅಭಂಗ–ಹೀಗೆ ಅನೇಕ ಪ್ರಕಾರಗಳನ್ನು ಕಚೇರಿಯಲ್ಲಿ ಸಮ್ಯಕ್ ಪ್ರಮಾಣದಲ್ಲಿ ಜೋಡಿಸಿಕೊಳ್ಳುತ್ತಿದ್ದ ಅವರ ಕ್ರಮ ಮತ್ತು ಆಯಾ ಭಾಷೆಯ ಕೃತಿಗಳ ಸಾಹಿತ್ಯದ ಉಚ್ಚಾರಣೆಗೆ ಸಾಕಷ್ಟು ಗಮನ ಕೊಡುತ್ತಿದ್ದುದೂ ಕೂಡ ಎಂ. ಎಲ್. ವಿ. ಯವರ ಕಚೇರಿಗಳ ವಿಶೇಷಗಳಲ್ಲಿ ಒಂದು.

✶ **ಮನೋಧರ್ಮ ಸಂಗೀತ :** ಎಂ. ಎಲ್. ವಿ. ಗಾಯನದಲ್ಲಿ ಮುಖ್ಯವಾದ ಆಕರ್ಷಣೆಯೆಂದರೆ ಮೇರೆಯೇ ಇಲ್ಲದ ಕಲ್ಪನಾ ಸಾಮರ್ಥ್ಯ. ಕಚೇರಿಯ ಮುಖ್ಯ ಕೃತಿಯಾಗಲಿ ಅಥವಾ 'ಪಲ್ಲವಿ'ಯಾಗಲಿ, ಅದಕ್ಕೆ ಇರುತ್ತಿದ್ದ ರಾಗ ವಿಸ್ತಾರ ಕ್ರಮ ತಮ್ಮ ಗುರುಗಳಂತೆಯೇ ವಿಸ್ತೃತವಾದ್ದು. ರಾಗವರ್ಧಿನಿ ಕ್ರಮದಲ್ಲಿ ಹಂತ ಹಂತವಾಗಿ ಬೆಳೆಸುತ್ತಾ, ರಾಗದ ಮೂಲೆ ಮೂಲೆಯನ್ನೂ ತಡಕಿ ಮುಂದೆ ಹೋಗುವ ಪದ್ಧತಿ ಅವರದ್ದು. ಬೆಳಕನ್ನು ಕೆಲಿಡೋಸ್ಕೋಪ್ ಮೂಲಕ ಹಾಯಿಸಿದಂತೆ ರಾಗಾಲಾಪನೆಯಲ್ಲಿನ ದ್ರುತಗತಿಯ ಬಿರ್ಕಾಗಳಲ್ಲಿ ಕೂಡ ಸ್ವರ ಸ್ಥಾನದ ಖಾಚಿತ್ಯ ಅವರ ಹಾಡಿಕೆಯ ಪಕ್ವತೆಗೆ ಹಿಡಿದ ಕನ್ನಡಿ. ಬಿರ್ಕಾಯುಕ್ತವಾದರೂ, ತಕ್ಕಮಟ್ಟಿಗೆ ಸೂಕ್ತ ಗಮಕಗಳ ಪ್ರಯೋಗವೂ ಇರುತ್ತಿತ್ತು. ತೋಡಿ, ಕಲ್ಯಾಣಿ, ಷಣ್ಮುಖಪ್ರಿಯ, ಖರಹರಪ್ರಿಯದಂತಹ ರಾಗಗಳನ್ನು ಎಷ್ಟು ವಿಸ್ತೃತವಾಗಿ ಹಾಡುತ್ತಿದ್ದರೋ, ಅಷ್ಟಾಗಿ ಕೇಳಿಬರದ ನಾಟಕಪ್ರಿಯ, ನಾಟಕುರಂಜಿ, ದೇವಮನೋಹರಿ, ಅಭೋಗಿ ಇತ್ಯಾದಿ ಶಾಸ್ತ್ರೀಯ ರಾಗಗಳನ್ನೂ ಅಷ್ಟೇ ವಿಸ್ತೃತವಾಗಿ, ಹೃದ್ಯವಾಗಿ ಹಾಡಬಲ್ಲ ಸಾಮರ್ಥ್ಯ ಅವರದ್ದಾಗಿತ್ತು. ಹೊಸ/ಅಪರೂಪದ ರಾಗಗಳನ್ನು ಯಾವುದೇ ಮಡಿವಂತಿಕೆಯಿಲ್ಲದೆ ಕಚೇರಿಯಲ್ಲಿ ವಿಸ್ತಾರವಾದ ಪ್ರಸ್ತುತಿಗೆ ತೆಗೆದುಕೊಳ್ಳುತ್ತಿದ್ದ ಎಂ. ಎಲ್. ವಿ.ಯವರ ಧೈರ್ಯ ಮುಂಚೂಣಿಯ ಕಲಾವಿದರಲ್ಲಿ ಅಪರೂಪ. ಇಲ್ಲಿ ರಾಗ ಶಿವಶಕ್ತಿ, ಕಿರಣಾವಳಿ, ಬಹುದಾರಿ, ಆಂದೋಳಿಕ – ಇತ್ಯಾದಿ ಕೆಲವು ಉದಾಹರಣೆಗಳನ್ನು ನೀಡಬಹುದು. ಹಿಂದೂಸ್ತಾನಿ ಸಂಗೀತದ ದಿಗ್ದರ್ಶಕ ಬಡೇ ಗುಲಾಂ ಅಲಿ ಖಾನ್ ಎಂ. ಎಲ್. ವಿ. ಯವರ ಆಂದೋಳಿಕ ರಾಗದ ಹಾಡಿಕೆಗೆ ಮಾರುಹೋಗಿದ್ದು ರಸಿಕಗಣದಲ್ಲಿ ಜಾನಪದವಾಗಿದೆ. ಎಂ. ಎಲ್. ವಿ.ಯವರ ರಾಗ ಪ್ರಸ್ತುತಿಯ ಮತ್ತೊಂದು ವಿಶೇಷ ಶ್ರುತಿ ಭೇದ. ಮುಖ್ಯವಾದ ಯಾವುದೇ ರಾಗವನ್ನು ಹಾಡಲಿ, ಶ್ರುತಿ ಭೇದದ ಝಲಕ್ ತೋರಿಸಿಯೇ ರಾಗವಿಸ್ತರಣೆಯನ್ನು ಮುಂದುವರೆಸುತ್ತಿದ್ದುದು. ಸಂಪ್ರದಾಯಬದ್ಧವಾದ, ಲಕ್ಷಣ ವಿದಿತವಾದ ಕ್ರಮದಲ್ಲೇ ಮನೋಧರ್ಮ ಸಂಗೀತವು ಅರಳಿದರೂ, ಕೆಲವೊಮ್ಮೆ ವಿಚಿತ್ರ ಪ್ರಯೋಗಗಳ ಅನ್ವೇಷಣೆಯಲ್ಲಿ ಅವರ

ಕಲ್ಪನೆ ಹರಿಯುತ್ತಿದ್ದುದೂ ಉಂಟು. ಅದು ಅವರ ಸೃಷ್ಟಿಶೀಲ ಸಂಗೀತದ ಕುರುಹಲ್ಲದೆ ಮತ್ತೇನೂ ಅಲ್ಲ. ಕಲ್ಯಾಣಿಯಲ್ಲಿ ಪ್ರತಿಮಧ್ಯಮ, ನಿಷಾದಗಳ ವಿಸ್ತಾರವಾದ ಬಳಕೆ, ತೋಡಿಯ ಸ್ವರಕಲ್ಪನೆಯಲ್ಲಿ ಸಾಧಾರಣ ಗಾಂಧಾರದ ಗಮಕರಹಿತ ಪ್ರಯೋಗ(ಧೇನುಕಾ ರಾಗದಂತೆ), ಆಗೊಮ್ಮೆ ಈಗೊಮ್ಮೆ ಇಣುಕಿ ಹೋಗುತ್ತಿದ್ದವು. ಪ್ರಯೋಗಶೀಲತೆ ಅವರು ತಮ್ಮ ಕಲಾಜೀವನದ ಉದ್ದಕ್ಕೂ ಕಾಪಿಟ್ಟುಕೊಂಡು ಬಂದ ಅಂಶ. ಒಮ್ಮೆ ಬಾಲಮುರಳಿಯವರು ಅವರ ಪಂಚಮುಖೀ ಎಂಬ ಮುಖೀ ತಾಳದಲ್ಲಿ ಪಲ್ಲವಿಯನ್ನು ಹಾಡಿದಾಗ, ಅದನ್ನು ಗಮನಿಸಿ ಅದರ ಮುಂದಿನ ವರ್ಷವೇ 'ಮಿಶ್ರ ಮುಖೀ' ಎಂಬ ಪ್ರಯೋಗವನ್ನು ಮದ್ರಾಸ್ ಮ್ಯೂಸಿಕ್ ಅಕಾಡೆಮಿಯಲ್ಲಿ ಮಾಡಿದ್ದರಂತೆ. ದ್ವಿರಾಗ ಪಲ್ಲವಿಗಳು, ಕ್ಲಿಷ್ಟ ತಾಳಗಳಲ್ಲಿ ಪಲ್ಲವಿಗಳ ನಿರ್ವಹಣೆ ಇಂಥ ಅನೇಕ ಪ್ರಯೋಗಗಳಿಗೆ ತಮ್ಮನ್ನು ಸದಾ ಒಡ್ಡಿಕೊಳ್ಳುತ್ತಿದ್ದ ಸೃಷ್ಟಿಶೀಲ ಮನಸ್ಸು ಅವರದ್ದು. ಎಂ. ಎಲ್. ವಿ. ಸಂಗೀತ 'ಬೌದ್ಧಿಕ' ಸಂಗೀತ ಎಂಬ ಟೀಕೆಗಳು ಅಲ್ಲಲ್ಲಿ ಕೇಳಿಬರುತ್ತಿದ್ದುದು ಕೂಡ ಅವರ ವಿದ್ವತ್ತಿಗೆ ಪರೋಕ್ಷ ಅನುಮೋದನೆ ಎನ್ನಬಹುದು.

**ಬಹುಮುಖೀ ಪ್ರತಿಭೆ :** ಶಾಸ್ತ್ರೀಯ ಸಂಗೀತ ವಿದುಷಿಯಾಗಿಯಷ್ಟೇ ಅಲ್ಲದೆ, ಎಂ. ಎಲ್. ವಿ. ಚಿತ್ರರಂಗದಲ್ಲಿ ಹಿನ್ನೆಲೆ ಗಾಯಕಿಯಾಗಿ, ನಟಿಯಾಗಿ ೪೦ರ ದಶಕದಲ್ಲಿ ಸಾಕಷ್ಟು ಹೆಸರು ಮಾಡಿದ್ದರು. ಆಲತ್ತೂರ್ ಶಿವಸುಬ್ರಹ್ಮಣ್ಯ ಅಯ್ಯರ್ ಅವರ ಸಲಹೆಯಂತೆ ಎಂ. ಕೆ. ತ್ಯಾಗರಾಜ ಭಾಗವತರ್ ಅವರ 'ರಾಜ ಮುಕ್ತಿ' ಎಂಬ ಚಿತ್ರದಲ್ಲಿ ಅವರು ಹಾಡಿದ ಹಾಡುಗಳು ಪ್ರಸಿದ್ಧವಾದವು. ಬಹಳ ಎಳೆಯ ವಯಸ್ಸಲ್ಲೇ ತನ್ನ ತಾಯಿ ಲಲಿತಾಂಗಿಯವರ ಜೊತೆಯಲ್ಲಿ 'ಪುರಂದರ ಮಣಿ ಮಾಲಾ' ಎಂಬ ಪುರಂದರದಾಸರ ಕೃತಿ ಸಂಪುಟಕ್ಕೆ ಕೆಲಸ ಮಾಡಿದ್ದರು. ತಾಯಿಯ ನಿಧನಾನಂತರ ಎರಡನೇ ಭಾಗವೂ ಬಿಡುಗಡೆಯಾಯಿತು. ತಮ್ಮ ಮಗಳು ಶ್ರೀವಿದ್ಯಾ ಭರತನಾಟ್ಯ ಕಲಾವಿದೆಯಾಗಿದ್ದಾಗ 'ಪದಗಳ ಗಾಯನದಲ್ಲಿ' ತೊಡಗಿಸಿಕೊಂಡಿದ್ದೂ ಉಂಟು. ವೈಯಕ್ತಿಕ ಜೀವನದ ಏಳು ಬೀಳುಗಳ ನಡುವೆ ಅವರಿಗೆ ತಕ್ಕಮಟ್ಟಿಗೆ ನೆಮ್ಮದಿ ತಂದದ್ದು ಜಿಡ್ಡು ಕೃಷ್ಣಮೂರ್ತಿಯವರ ರಿಷಿ ವಾಲೀ ಶಾಲೆಯಲ್ಲಿ ಸಂಗೀತ ತರಬೇತಿಯ ಕೆಲಸ. ಅಲ್ಲಿದ್ದ ಸಂದರ್ಭದಲ್ಲಿ ಶಾಲೆಯ ಮಕ್ಕಳಿಂದ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ನಾಟಕಕ್ಕೆ ಸಂಗೀತ ಸಂಯೋಜನೆ ಮಾಡಿ ಮ್ಯೂಸಿಕ್ ಅಕಾಡೆಮಿಯಲ್ಲಿ ಅದರ ಪ್ರದರ್ಶನ ಏರ್ಪಡಿಸಿದ್ದು ಬಹುವಾದ ಮೆಚ್ಚುಗೆಗೆ ಪಾತ್ರವಾಗಿತ್ತು.



*ಎಂ.ಎಲ್. ವಿ. ಅವರಿಗೆ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ನೀಡಿದ ಸಂದರ್ಭದಲ್ಲಿ (೧೯೭೧) ಅವರೊಡನೆ ವಿದ್ವಾನ್ ದೊರೆಸ್ವಾಮಿ ಐಯ್ಯಂಗಾರ್ ಮತ್ತು ಎಂ. ಎಸ್. ಸ್ವಾಮಿನಾಥನ್.*



*ಎಂ. ಎಲ್. ವಸಂತಕುಮಾರಿ ಅವರು ತಮ್ಮ ಶಿಷ್ಯರೊಂದಿಗೆ*

ಪುರಸ್ಕಾರ – ಮನ್ನಣೆ ದೇಶ ವಿದೇಶಗಳ ಎಲ್ಲ ಪ್ರಮುಖ ಸಭೆಗಳಲ್ಲೂ ಅವರ ವಿನಿಕೆ ಖಾಯಂ ಆಗಿ ನಡೆಯುತ್ತಿತ್ತು. ಅವರಿಗೆ ಕೇವಲ ೪೯ ವಯಸ್ಸಾಗಿದ್ದಾಗಲೇ ಕೇಂದ್ರ ಸರ್ಕಾರದಿಂದ ಪದ್ಮಭೂಷಣ ಪುರಸ್ಕಾರ ಲಭಿಸಿತು. ಮದ್ರಾಸ್ ಸಂಗೀತ ಅಕಾಡೆಮಿ 'ಸಂಗೀತ ಕಲಾನಿಧಿ' ಗೌರವವನ್ನಿತ್ತು ಸನ್ಮಾನಿಸಿತು. ಮೈಸೂರು ವಿಶ್ವವಿದ್ಯಾನಿಲಯ ಡಾಕ್ಟರೇಟ್ ಪದವಿಯನ್ನಿತ್ತು ಗೌರವಿಸಿತು. ಸಂಗೀತ ನಾಟಕ ಅಕಾಡೆಮಿ ಮೊದಲಾದ ಗೌರವಗಳು ಅವರನ್ನರಸಿ ಬಂದವು.

**ವ್ಯಕ್ತಿತ್ವ :** ಓರಗೆಯವರೇ ಹೇಳುವಂತೆ, ಎಂ. ಎಲ್. ವಿ. ಧಾರಾಳ ಸ್ವಭಾವದವರು. ಶಿಷ್ಯರೆಂದರೆ ಮಮಕಾರ. ಎಷ್ಟೋ ಕಾರ್ಯಕ್ರಮಗಳಿಗೆ ಹೋಗುವಾಗ ತಮ್ಮ ಜೊತೆಗೆ ಬರುವ ಶಿಷ್ಯರಿಗೆ ಅನುಕೂಲವಿಲ್ಲದೆ ಹೋದರೆ, ಸ್ವಂತ ಆಭರಣಗಳು, ಸೀರೆ ಇತ್ಯಾದಿಗಳನ್ನು ಕೊಟ್ಟು ಕರೆದುಕೊಂಡು ಹೋಗುತ್ತಿದ್ದ ಸಂದರ್ಭಗಳಿದ್ದವು. ಅವರ ಧಾರಾಳ ಸ್ವಭಾವವನ್ನು, ಭಾವುಕ ಪ್ರವೃತ್ತಿಯನ್ನು ದುರುಪಯೋಗಪಡಿಸಿಕೊಂಡವರ ಸಂಖ್ಯೆಯೂ ಹೆಚ್ಚು. ತಮ್ಮ ವೈಯಕ್ತಿಕ ಬದುಕಲ್ಲಿ ಸಾಕಷ್ಟು ನೊಂದಿದ್ದರೂ, ಸಂಗೀತ ಅವರಿಗೆ ನೆಮ್ಮದಿಯನ್ನಿತ್ತಿತ್ತು. ಒಮ್ಮೆ ಒಬ್ಬ ಪತ್ರಕರ್ತ ನಿಮ್ಮ ಜೀವನವನ್ನು ಒಂದೇ ಪದದಲ್ಲಿ ಹೇಗೆ ಬಣ್ಣಿಸುತ್ತೀರಿ ಎಂದು ಕೇಳಿದರಂತೆ, ಅದಕ್ಕೆ ಎಂ. ಎಲ್. ವಿ., 'Tragic' ಎಂದು ಉತ್ತರಿಸಿ, ಮರು ಗಳಿಗೆಯೇ ಅಲ್ಲ 'Melodic' ಎಂದರಂತೆ.

**ಶಿಷ್ಯ ಪರಂಪರೆ :** ಎಂ. ಎಲ್. ವಿ. ತಮ್ಮ ಜೀವನವಿಡೀ ಶಿಷ್ಯರನ್ನೂ, ಕಿರಿಯ ಪಕ್ಕವಾದ್ಯದವರನ್ನೂ ಉತ್ತೇಜಿಸಿ ಮುನ್ನೆಲೆಗೆ ತಂದದ್ದು ಸ್ತುತ್ಯಾರ್ಹ. ಖಂಜಿರ ಹರಿಶಂಕರ್, ಭಕ್ತವತ್ಸಲಂ ಮೊದಲಾದ ಪಕ್ಕವಾದ್ಯದವರನ್ನು ಅವರು ಬೆಳೆಸಿದ್ದು ಕಲಾ ಕ್ಷೇತ್ರದಲ್ಲಿ ಎಲ್ಲರಿಗೂ ತಿಳಿದಿರುವ ವಿದ್ಯಮಾನ. ಅವರ ಶಿಷ್ಯರಲ್ಲಿ ಕನ್ಯಾಕುಮಾರಿ, ಸುಧಾ ರಘುನಾಥನ್, ಚಾರುಮತಿ ರಾಮಚಂದ್ರನ್ ಪ್ರಮುಖರು.

ಸುಮಾರು ೬ ದಶಕಗಳ ಕಾಲ ಸಂಗೀತ ಲೋಕದ ರಾಜ್ಞಿಯಾಗಿ ತನ್ನದೇ ಛಾಪು ಮೂಡಿಸಿದ ಎಂ. ಎಲ್. ವಿ. ಅಕ್ಟೋಬರ್ ೩೧, ೧೯೯೦ರಂದು ನಿಧನರಾದರು. ಇಂದಿಗೂ ಸಂಗೀತ ರಸಿಕರ ಹೃನ್ಮನಗಳನ್ನು ಆವರಿಸಿರುವ ಅವರ ಸಂಗೀತದ ಕಂಪು, ಅವರ ನಿತ್ಯತೆಯ ಕುರುಹಾಗಿ ನಮ್ಮೊಡನೆ ಜೀವಂತವಾಗಿದೆ. ಅದು ಒಬ್ಬ ಕಲಾವಿದೆಯ ಬದುಕಿನ ಸಾರ್ಥಕ್ಯವಲ್ಲದೆ ಬೇರೇನು?

**ಎನ್. ಪಿ. ಸಾಯಿಗಣೇಶ್ ಶಾಸ್ತ್ರಿ**
೬೩/೫ , 'ರಾಮಚಂದ್ರ ಕೃಪ', ೩ನೇ ಮುಖ್ಯರಸ್ತೆ
೧ನೇ 'ಡಿ' ಅಡ್ಡರಸ್ತೆ, ಮತ್ತಿಕೆರೆ, ಬೆಂಗಳೂರು – ೫೬೦೦೦೫೪
ಇ–ಮೇಲ್ : sai.shastry@gmail.com





## ಬ್ರಿಟನ್ನಿಗೆ ಗೊಂದಲದ ಗೂಡಾಗಿರುವ ಬ್ರೆಕ್ಸಿಟ್

**ಮೂ**ರು ವರ್ಷಗಳ ಹಿಂದೆ ೨೦೧೬ರಲ್ಲಿ ನಡೆದ ಜನಮತ ಗಣನೆಯಲ್ಲಿ ಅತ್ಯಲ್ಪ ಬಹುಮತದಿಂದ ಯೂರೋಪಿಯನ್ ಯೂನಿಯನ್ನಿನಿಂದ ಹೊರಬರಲು ಬ್ರಿಟನ್ ನಿರ್ಧರಿಸಿತು. ಅಂದು ಪ್ರಾರಂಭವಾದ ರಾಜಕೀಯ ಬಿಕ್ಕಟ್ಟು ಇಂದೂ ಮುಂದುವರಿದಿದೆ. ಇಪ್ಪತ್ತೇಳು ದೇಶಗಳನ್ನೊಳಗೊಂಡ ಯೂರೋಪಿಯನ್ ಯೂನಿಯನ್ನಿನಲ್ಲಿ ಬ್ರಿಟನ್ ಸೇರಿಕೊಂಡಿದ್ದೂ ಹಲವು ರಿಯಾಯಿತಿಗಳನ್ನು ಪಡೆದುಕೊಂಡೇ. ಬ್ರಿಟನ್ ತನ್ನ ವೀಸಾ ನೀತಿಯನ್ನು ಬಿಟ್ಟುಕೊಡಲಿಲ್ಲ. ಹಾಗೆಯೇ ಯೂರೋಪಿಯನ್ ಯೂನಿಯನ್ನಿನ ಕರೆನ್ಸಿ 'ಯೂರೋ'ವನ್ನು ಅಂಗೀಕರಿಸಲಿಲ್ಲ, ತನ್ನ ಪೌಂಡ್‌ಸ್ಟರ್ಲಿಂಗ್‌ಅನ್ನು ಉಳಿಸಿಕೊಂಡಿತ್ತು. ಶೀತಯುದ್ಧದ ಕಾಲದಲ್ಲಿ ಕಳೆದ ಶತಮಾನದ ನಡುವಿನಲ್ಲಿ ಅಸ್ತಿತ್ವಕ್ಕೆ ಬಂದ ಈ ಒಕ್ಕೂಟ ಇನ್ನೂ ಅಸ್ತಿತ್ವದಲ್ಲಿರುವುದು ಒಂದು ವಿಪರ್ಯಾಸ. ಬ್ರಿಟನ್ ಈ ಒಕ್ಕೂಟದಿಂದ ಹೊರಬರಲು ನಿರ್ಧರಿಸಿದಾಗ ಈ ಸಂಘಟನೆಯ ಬುಡವೇ ಅಲುಗಾಡಿತು. ಅದರ ಭವಿಷ್ಯ ಡೋಲಾಯಮಾನವಾಗಿತ್ತು. ಆದರೆ ಬ್ರಿಟನ್ನಿನಲ್ಲೇ ಉಂಟಾಗಿರುವ ರಾಜಕೀಯ ಬಿಕ್ಕಟ್ಟಿನಿಂದಾಗಿ ಯೂರೋಪಿಯನ್ ಯೂನಿಯನ್ ಗಟ್ಟಿಯಾಗಿರುವಂತೆ ತೋರುತ್ತದೆ. ಇದರಲ್ಲಿ ಮುಖ್ಯ ಪಾತ್ರವಹಿಸಿರುವುದು ಜರ್ಮನಿ. ೨೦೦೦ ವರ್ಷದ ನಂತರ ಗ್ರೀಸ್, ಸ್ಪೇನ್‌ಗಳಲ್ಲಿನ ಆರ್ಥಿಕ ಮುಗ್ಗಟ್ಟು ಯೂನಿಯನ್ನನ್ನು ಸಾಕಷ್ಟು ಶಿಥಿಲಗೊಳಿಸಿತ್ತು.

ಬ್ರಿಟನ್ನಿನ ಪ್ರಧಾನಿ ಥೆರೆಸಾ ಮೇ ಬಹು ಪ್ರಯಾಸಪಟ್ಟು ಸಿದ್ಧಗೊಳಿಸಿದ್ದ ಬ್ರೆಕ್ಸಿಟ್ ಒಪ್ಪಂದವನ್ನು ಬ್ರಿಟಿಷ್ ಪಾರ್ಲಿಮೆಂಟು ಒಪ್ಪದೇ ಹೋದದ್ದೆ ಇದುವರೆಗಿನ ಬಿಕ್ಕಟ್ಟಿಗೆ ಕಾರಣ. ಅಂದಹಾಗೆ 'ಬ್ರೆಕ್ಸಿಟ್' ಪದಗುಚ್ಛ ಬ್ರಿಟನ್ ಯೂರೋಪಿಯನ್ ತ್ಯಜಿಸುವ ಬಗ್ಗೆ ಜನಮತಗಣನೆ ನಡೆದಾಗಲೆ ಆಕ್ಸ್‌ಫರ್ಡ್ ನಿಘಂಟಿಗೆ ಹೊಸಪದವಾಗಿ ಸೇರ್ಪಡೆಯಾಗಿತ್ತು. ಕನ್ಸರ್‌ವೇಟಿವ್ ಪಕ್ಷದ ಥೆರೆಸಾ ಮೇ ಸರಕಾರದ ಭವಿಷ್ಯವೇ ಆತಂಕಕ್ಕೀಡಾಗಿತ್ತು. ಪ್ರತಿ ಪಕ್ಷವಾಗಿರುವ ಲೇಬರ್ ಪಕ್ಷ ಮೊದಲಿನಿಂದಲೂ ಬ್ರೆಕ್ಸಿಟ್‌ನ ತೀವ್ರ ವಿರೋಧಿ. ಜನಮತಗಣನೆ ನಡೆದಾಗ ಕೇವಲ ಶೇ. ೨ರಷ್ಟು ಅಂತರದಿಂದ ಬ್ರೆಕ್ಸಿಟ್‌ಗೆ ಬಹುಮತ ದೊರೆತಿತ್ತು. ಗ್ರೇಟ್‌ಬ್ರಿಟನ್ನಿನ ಭಾಗವಾಗಿರುವ ಸ್ಕಾಟ್ಲೆಂಡ್ ಮತ್ತು ಉತ್ತರ ಐರ್ಲೆಂಡ್‌ನ ಜನ ಬಹುಮತದಿಂದ ಬ್ರೆಕ್ಸಿಟ್ ವಿರೋಧಿಸಿದ್ದರು. ಗ್ರೇಟ್ ಬ್ರಿಟನ್ ಅಥವಾ ಯುನೈಟೆಡ್ ಕಿಂಗ್‌ಡಮ್ ನಾಲ್ಕು ವಿಭಿನ್ನ ರಾಜ್ಯಗಳು ಸೇರಿರುವ ಒಂದು ರಾಷ್ಟ್ರ – ಬ್ರಿಟನ್, ವೇಲ್ಸ್, ಸ್ಕಾಟ್ಲೆಂಡ್, ಐರ್ಲೆಂಡ್ ಅದರ ಭಾಗಗಳು. ಇವು ಒಕ್ಕೂಟ ಸೇರಿ ಶತಮಾನಗಳೇ ಕಳೆದಿದ್ದರೂ ಈಗಲೂ ತಮ್ಮ ಪ್ರತ್ಯೇಕತೆಯನ್ನು ಉಳಿಸಿಕೊಂಡಿವೆ. ಹಲವು ರೀತಿಯಲ್ಲಿ ಪ್ರತ್ಯೇಕವಾದಿಗಳ ಅಬ್ಬರ ಜೊರಾಗಿಯೇ ಇದೆ. ಇದೂ ಬ್ರಿಟಿಷ್ ಸರಕಾರಕ್ಕೆ ಇರುವ ಆತಂಕಗಳಲ್ಲೊಂದು.

ಎಲ್ಲವೂ ಸರಿಯಾಗಿದ್ದಿದ್ದರೆ ಬ್ರಿಟನ್ ೨೦೧೯ರ ಮಾರ್ಚ್ ೨೯ರಂದು ಯೂರೋಪಿಯನ್ ಯೂನಿಯನ್ನಿನಿಂದ ಹೊರ ಬರಬೇಕಿತ್ತು. ಬ್ರಿಟಿಷ್ ಪ್ರಧಾನಿ ಸಂಧಾನ ನಡೆಸಿ ತಯಾರಿಸಿದ್ದ ಒಪ್ಪಂದದ ಪ್ರಕಾರ ಏಪ್ರಿಲ್ ೧೨ ಕೊನೆಯ ದಿನವಾಗಿತ್ತು. ಬ್ರಿಟಿಷ್ ಪಾರ್ಲಿಮೆಂಟ್ ಜೂನ್ ೩೦ರವರೆಗೆ ಕಾಲಾವಕಾಶ ಕೋರಿತ್ತು. ಈಗ ಬ್ರಿಟಿಷ್ ಪ್ರಧಾನಿಗೆ ಅಕ್ಟೋಬರ್ ೩೧ರವರೆಗೆ ಸಮಯ ದೊರೆತಿದೆ. ಒಪ್ಪಂದಕ್ಕೆ ಬಂದರೆ ಅವಧಿಗೆ ಮುನ್ನವೂ ಯೂನಿಯನ್ನಿನಿಂದ ಹೊರಗೆ ಬರಲೂ ಅವಕಾಶವಿದೆ. ಆದರೆ ಥೆರೆಸಾ ಮೇ ಸರಕಾರಕ್ಕೆ ಮುಂದಿನ ಹೆಜ್ಜೆ ಇರಿಸುವುದು ಸುಲಭವಲ್ಲ. ಉಳಿದಿರುವ ಆರು ತಿಂಗಳಲ್ಲಿ ಪಾರ್ಲಿಮೆಂಟಿನ ಅಂಗೀಕಾರ ಪಡೆಯಬೇಕು ಯಾವುದೇ ಒಪ್ಪಂದಕ್ಕೆ ಬಂದರೂ. ಅಲ್ಲಿಯೇ ಇರುವುದು ಬ್ರೆಕ್ಸಿಟ್ ಕಗ್ಗಂಟು.

## ಇಸ್ರೇಲ್ : ಬಲಪಂಥೀಯರದ್ದೇ ಮೇಲುಗೈ

**ಚು**ನಾವಣೆ ಪ್ರಚಾರದಲ್ಲಿ ಬಿಡುವಿಲ್ಲದೆ ತೊಡಗಿಕೊಂಡಿರುವ ಭಾಜಪ ಪ್ರಧಾನಿ ಮೋದಿ ಇನ್ನೊಮ್ಮೆ ಇಸ್ರೇಲಿನ ಪ್ರಧಾನಿಯಾಗಿ ಆಯ್ಕೆಯಾಗಿರುವ ಬೆಂಜಾಮಿನ್ ನೆತಾನ್ಯಹುವನ್ನು ಅಭಿನಂದಿಸಲು ಮರೆಯಲಿಲ್ಲ. ಅವರ ಅಧಿಕಾರಾವಧಿಯಲ್ಲಿ ಇಸ್ರೇಲ್ ಭಾರತ ಬಾಂಧವ್ಯ ಮತ್ತಷ್ಟು ವರ್ಧಿಸುವುದೆಂಬ ಆಶಾಭಾವನೆಯನ್ನು ವ್ಯಕ್ತಗೊಳಿಸಿದ್ದಾರೆ.

ಭ್ರಷ್ಟಾಚಾರ ಸಂಬಂಧ ಹಲವು ಆರೋಪಗಳನ್ನು ಎದುರಿಸುತ್ತಿರುವ ನೆತಾನ್ಯಹು ನಾಲ್ಕನೆಯ ಬಾರಿಗೆ ಇಸ್ರೇಲಿನ ಪ್ರಧಾನಿಯಾಗಿ ಪುನರಾಯ್ಕೆಗೊಂಡಿದ್ದಾರೆ. ಏಪ್ರಿಲ್ ೯, ೨೦೧೯ರಲ್ಲಿ ನಡೆದ ಇಸ್ರೇಲಿ ಪಾರ್ಲಿಮೆಂಟ್‌ನಲ್ಲಿ ಅವರ ನೇತೃತ್ವದ ಬಲಪಂಥೀಯ ಪಾರ್ಟಿ ಬಹುಮತ ಪಡೆಯುವುದರಲ್ಲಿ ಯಶಸ್ವಿಯಾಗಿದೆ. ಭ್ರಷ್ಟಾಚಾರದ ಆರೋಪ ಸಾಬೀತಾಗುವ ಸೂಚನೆಗಳೇ ಹೆಚ್ಚಾಗಿದೆ. ಏನಾಗುವುದೋ ನೋಡಬೇಕು. ಇಸ್ರೇಲ್ ಮಟ್ಟಿಗೆ ಬಲಪಂಥೀಯ ಅಧಿಕಾರ ಹೊಸದೇನಲ್ಲ. ಎಪ್ಪತ್ತು ವರ್ಷಗಳಿಂದ ಅಸ್ತಿತ್ವದಲ್ಲಿರುವ ಮಧ್ಯಪ್ರಾಚ್ಯದ ಯೆಹೂದಿಗಳ ನಾಡು ಇಸ್ರೇಲಿನಲ್ಲಿ ಬಲಪಂಥೀಯರದ್ದೇ ಪಾರುಪತ್ಯ.

ಪ್ಯಾಲಸ್ತೈನ್‌ರ ಪಾಡನ್ನು ಈಗ ಕೇಳುವವರೇ ಇಲ್ಲ. ಸ್ವತಂತ್ರ ಪ್ಯಾಲಸ್ತೈನ್ ರಾಜ್ಯಸ್ಥಾಪನೆ ಕನಸು ಕನಸಾಗಿಯೇ ಉಳಿಯುವ ಸ್ಥಿತಿ ಬಂದಿದೆ. ಇಸ್ರೇಲ್ ಸ್ಥಾಪನೆಯಾದಾಗಲೇ ಪ್ಯಾಲಸ್ತೈನ್ ಕೂಡ ಸ್ಥಾಪನೆಯಾಗಬೇಕಿತ್ತು. ಅಮೆರಿಕದ ಕೈವಾಡದಿಂದಾಗಿ ಅದು ನೆರವೇರಲಿಲ್ಲ. ಈಗಲೂ ಅಷ್ಟೆ ಅದೇ ಕಿತಾಪತಿ, ಕಳೆದ ವರ್ಷ ಇಸ್ರೇಲ್ ಸ್ಥಾಪನೆಯ ೭೦ನೇ ವರ್ಷದ ಸಂದರ್ಭದಲ್ಲಿ ಅಮೆರಿಕ ತನ್ನ ರಾಯಭಾರಿ ಕಛೇರಿಯನ್ನು ಟೆಲ್ ಅವೀವ್‌ನಿಂದ ಪ್ಯಾಲಸ್ತೈನ್ ಅರಬ್ಬರಿಗೆ ಸೇರಬೇಕಾಗಿರುವ ಜೆರೂಸಲೆಮ್‌ಗೆ ವರ್ಗಾವಣೆ ಮಾಡಿ ಅಲ್ಲಿನ ಜನರ ಭವಿಷ್ಯವನ್ನು ಆತಂಕಕ್ಕೀಡುಮಾಡಿತು. ನೆತಾನ್ಯಹು ಮತ್ತೆ ಅಧಿಕಾರಕ್ಕೆ ಬರಲು ಇದೂ ಒಂದು ಕಾರಣ ಎನ್ನಲಾಗಿದೆ. ೧೯೧೮ರ ಜುಲೈ ತಿಂಗಳಲ್ಲಿ ಇಸ್ರೇಲ್ ಪಾರ್ಲಿಮೆಂಟು ಮೂಲಭೂತ ಕಾನೂನನ್ನು ಅಂಗೀಕರಿಸಿತು. ಅದರ ಪ್ರಕಾರ ಜೆರೂಸಲೆಮ್ ಅದರ ಅವಿಭಾಜ್ಯ ರಾಜಧಾನಿ, ಹೀಬ್ರೂ ಅಧಿಕೃತ ಭಾಷೆ, ಇದು ನಿಜಕ್ಕೂ ಐದು ಮಿಲಿಯದಷ್ಟು ಪ್ಯಾಲಸ್ತೈನ್‌ರ ಜೀವನವನ್ನು ಮುಜುಗರಕ್ಕೆ ನೂಕಿದೆ. ಒಂದು ಕಾಲದಲ್ಲಿ ಕಳೆದ ಶತಮಾನದ ಅಂತ್ಯದವರೆಗೆ ಇದ್ದ ಪ್ಯಾಲಸ್ತೈನ್ ಅರಬ್ಬರ ಸ್ವಾತಂತ್ರ್ಯಸಮರ ಈಗ ಇತಿಹಾಸದ ಪುಟ ಸೇರಿದೆ.

ವಿಶ್ವಸಂಸ್ಥೆಯಲ್ಲೂ ಪ್ರಾತಿನಿಧ್ಯ ಪಡೆದಿದ್ದ ಪ್ಯಾಲಸ್ತೈನ್ ವಿಮೋಚನಾ ಸಂಗ್ರಾಮ ಸಂಘಟನೆ ಈಗ ಹೆಸರಿಲ್ಲವಾಗಿದೆ. ಇಸ್ರೇಲಿನೊಂದಿಗೆ ಭಾರತ ರಾಜತಾಂತ್ರಿಕ ಸಂಬಂಧವನ್ನು ಸ್ಥಾಪಿಸಿದ್ದು ಭಾಜಪ ನೇತೃತ್ವದ ವಾಜಪೇಯಿ ಸರಕಾರ. ಈಗ ಮೋದಿ ಅಧಿಕಾರಾವಧಿಯಲ್ಲಿ ಅದು ಮತ್ತಷ್ಟು ವರ್ಧಿಸಿರುವುದರಲ್ಲಿ ಅಚ್ಚರಿಯೇನಿಲ್ಲ. ಇಸ್ರೇಲ್ ಈಗ ಭಾರತಕ್ಕೆ ರಕ್ಷಣಾ ಸಾಮಗ್ರಿ ಒದಗಿಸುವ ಅಗ್ರ ರಾಷ್ಟ್ರವಾಗಿದೆ.

**ಸೀಯಾರ್ಕೆ**
'ಸೂರ್ಯ ರೆಸಿಡೆನ್ಸಿ', ಫ್ಲಾಟ್ ನಂ. ೧, ೩೧೩೩, ೩ನೇ ಅಡ್ಡರಸ್ತೆ
ಗಿರಿನಗರ ೪ನೇ ಫೇಸ್, ಬೆಂಗಳೂರು – ೫೬೦ ೦೮೫



# ಗ್ರಾಮ ವೈದ್ಯರ ಸೇವೆ ಮರೆಯದಿರಿ







**ಸು**ಮಾರು ಆರು ವರ್ಷ ಕಠಿಣ ಪರಿಶ್ರಮದಿಂದ ವೈದ್ಯ ಪದವಿ ಪಡೆದು ನಗರದ ಎಲ್ಲ ಸೌಲಭ್ಯ, ಆಧುನಿಕತೆ, ತ್ಯಾಗ ಮಾಡಿ ಗ್ರಾಮದಲ್ಲಿನ ರೋಗಿಗಳಿಗೆ ಉತ್ತಮ ಚಿಕಿತ್ಸೆ ನೀಡಿ, ಸಾರ್ವಜನಿಕರ ಮೆಚ್ಚುಗೆ ಪಡೆದ ಅನೇಕ ವೈದ್ಯರು ನಮ್ಮಲ್ಲಿದ್ದಾರೆ.

ಗ್ರಾಮ ವೈದ್ಯರಿಗೆ ಎದುರಾಗುವ ಹಲವಾರು ಸವಾಲುಗಳನ್ನು ಅರಿತರೆ, ಇವರನ್ನು ನಾವು ಏಕೆ ಸ್ಮರಿಸಬೇಕು ಎಂಬುದು ಅರ್ಥವಾಗುತ್ತದೆ.

ಗ್ರಾಮದ ಜನರ ಮನೋಸ್ಥಿತಿ, ಆರೋಗ್ಯ ಸ್ಥಿತಿ, ವಾಹನ ಸಂಪರ್ಕ, ಆಸ್ಪತ್ರೆಯಲ್ಲಿ ಚಿಕಿತ್ಸೆಗಾಗಿ ಲಭ್ಯವಿರುವ ಸೌಲಭ್ಯಗಳನ್ನು ನಗರಗಳಲ್ಲಿರುವ ಸೌಲಭ್ಯಗಳಿಗೆ ಹೋಲಿಸಿದಾಗ ಬಹಳಷ್ಟು ವ್ಯತ್ಯಾಸ ಕಂಡುಬರುತ್ತದೆ. ಇಂತಹ ಸ್ಥಿತಿಯಲ್ಲಿ ಆರೋಗ್ಯ ಸೇವೆ ನೀಡುವಲ್ಲಿ ಗ್ರಾಮೀಣ ವೈದ್ಯರಿಗೆ ಆತಂಕ, ಒತ್ತಡ, ಅಸಹಾಯಕತೆ ನಗರ ವೈದ್ಯರಿಗಿಂತ ಹೆಚ್ಚು. ಬಹಳಷ್ಟು ಜನರಿಗೆ ಆರೋಗ್ಯದ ಅರಿವು ಇಲ್ಲ. ಮಗುವಿಗೆ ವಾಂತಿ, ಭೇದಿಯಾದಾಗ ಕಡಿಮೆ ನೀರು ಕುಡಿಸಬೇಕೆಂಬ ತಪ್ಪು ನಂಬಿಕೆ ಶೇ.೪೭ ಗ್ರಾಮಗಳಲ್ಲಿರುವ ತಾಯಂದಿರಿಗಿದೆ ಎನ್ನುತ್ತದೆ ಮಹಾರಾಷ್ಟ್ರದ ಒಂದು ಸಮೀಕ್ಷೆ. ಇಂಥವರಿಗೆ ಚಿಕಿತ್ಸೆ ಫಲಕಾರಿಯಾಗಬೇಕಾದರೆ ವೈದ್ಯರಿಗೆ ಹೆಚ್ಚಿನ ಪರಿಶ್ರಮ ಅವಶ್ಯ ಇರಬೇಕು.

ಇವರು ಕಲಿತದ್ದು ಮೂಲ ವೈದ್ಯಕೀಯ ಶಾಸ್ತ್ರ (ಎಂ.ಬಿ.ಬಿ.ಎಸ್. ಅಥವಾ ಆಯುಷ್). ಆದರೆ ಸಂದರ್ಭಕ್ಕೆ ತಕ್ಕಂತೆ ವಿವಿಧ ತಜ್ಞ ಅಥವಾ ಸ್ಪೆಶಲಿಸ್ಟ್ ಆಗಬೇಕಾಗುತ್ತದೆ. ಹೆರಿಗೆಗಾಗಿ ಬಂದ ತಾಯಂದಿರಿಗೆ ಇವರು ಸ್ತ್ರೀರೋಗ ತಜ್ಞ, ವಾಂತಿ ಭೇದಿ ಮಗುವಿಗೆ ಮಕ್ಕಳ ತಜ್ಞ, ಎಲುಬು ಮುರಿದು ಕೊಂಡವರಿಗೆ ಮೂಳೆ ತಜ್ಞ, ದೃಷ್ಟಿಹೀನರಿಗೆ ನೇತ್ರ ತಜ್ಞರಾಗುತ್ತಾರೆ. ಕೆಲವು ಸಲ ದಾಯಿ, ಪ್ರಯೋಗಾಲಯ ತಜ್ಞರಾಗಬೇಕು.

ಚಿಕಿತ್ಸೆ ನೀಡುವಲ್ಲಿ ಕೆಲವು ಸಲ ಅಸಹಾಯಕ ಸ್ಥಿತಿ ಸಾಮಾನ್ಯ. ತೀವ್ರ ಹೆರಿಗೆ ನೋವು ಇರುವ ಕೆಲವು ನಿಮಿಷಗಳಲ್ಲಿ ಹೆರಿಗೆಯಾಗಲಿರುವ ಗರ್ಭಿಣಿ ಹಾಗೂ ಇದೇ ಸಮಯಕ್ಕೆ ಹಾವು ಕಡಿತದ ಜೀವಾಪಾಯದ ವ್ಯಕ್ತಿ ಬಂದಾಗ ಇದರಲ್ಲಿ ಯಾರಿಗೆ ಮೊದಲು ಚಿಕಿತ್ಸೆ ನೀಡಬೇಕು ಎಂಬ ಸ್ಥಿತಿ ಅಪರೂಪವೇನಲ್ಲ. ಇಂಥ ಪರಿಸ್ಥಿತಿಯಲ್ಲಿ ಗಂಭೀರತೆಗೆ ಅನುಗುಣವಾಗಿ ನಿರ್ಧಾರ ತೆಗೆದುಕೊಳ್ಳದಿದ್ದರೆ ವೈದ್ಯರಿಗೆ ಬೆದರಿಕೆ, ಟೀಕೆ, ಹಲ್ಲೆಯ ಸಂಭವ ಹೆಚ್ಚು. ಭಾರತದ ವೈದ್ಯ ಸಂಸ್ಥೆ ಪ್ರಕಾರ ಶೇ. ೭೫ ವೈದ್ಯರು ಒಂದಲ್ಲಾ ಒಂದು ತರಹದ ಹಿಂಸೆಗೆ ಒಳಗಾಗುತ್ತಿದ್ದಾರೆ.

ನಿರ್ಗತಿಕನಿಂದ ಹಿಡಿದು, ಬಡವ ಬಲ್ಲಿದ ಎನ್ನದೆ, ಎಲ್ಲಾ ತರಹದ ಮತ್ತು ಯಾವುದೇ ಹಂತದ ರೋಗ ಸ್ಥಿತಿಯವರಿಗೂ ಚಿಕಿತ್ಸೆ ನೀಡಬೇಕಾಗುತ್ತದೆ. ಇದರಿಂದಾಗಿ ರೋಗಿಗಳ ಸಂಖ್ಯೆ ಹೆಚ್ಚುತ್ತದೆ ಮತ್ತು ಚಿಕಿತ್ಸೆ ಕಷ್ಟಕರವಾಗುತ್ತದೆ. ಹೀಗಿರುವಾಗ ಕೆಲಸದ ಒತ್ತಡ ಅಪಾರ.

**ಡಾ|| ಎಂ. ಡಿ. ಸೂರ್ಯಕಾಂತ**



ಹೆದ್ದಾರಿಗೆ ಹತ್ತಿರದ ಆಸ್ಪತ್ರೆಗೆ ಅಪಘಾತದಿಂದಾಗಿ ಕೆಲವು ಬಾರಿ ಏಕಕಾಲಕ್ಕೆ ೮೦ರಿಂದ ೧೦೦ ಗಾಯಾಳು ದಾಖಲಾಗುತ್ತಾರೆ. ಏಕ ವೈದ್ಯರಿರುವ ಗ್ರಾಮ ಆಸ್ಪತ್ರೆಯಲ್ಲಿ ಇವರೆಲ್ಲರಿಗೂ ಚಿಕಿತ್ಸೆ ನೀಡುವುದು ದೊಡ್ಡ ಸವಾಲು. ಕರ್ನಾಟಕದಲ್ಲಿ ಸರಾಸರಿ ೧೩,೫೫೬ ರೋಗಿಗಳಿಗೆ ಒಬ್ಬ ವೈದ್ಯರಿದ್ದಾರೆ. ಇದು ವೈದ್ಯ ಮತ್ತು ರೋಗಿಗಳ ಸರಾಸರಿಗಿಂತ ಹೆಚ್ಚು (೧೧೦೮೨:೧) ಎನ್ನುತ್ತದೆ ಇತ್ತೀಚಿನ ರಾಷ್ಟ್ರೀಯ ಆರೋಗ್ಯ ವರದಿ. ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಕಾರ ದೇಶದಲ್ಲಿ ೨೫,೬೫೦ ಗ್ರಾಮ ಮಟ್ಟದ ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದು, ೧೫,೭೦೦ ಕೇಂದ್ರಗಳಲ್ಲಿ ಕೇವಲ ಒಬ್ಬರೆ ವೈದ್ಯರಿದ್ದಾರೆ. ಕರ್ನಾಟಕದ ಇಂಥ ೨,೩೫೯ ಕೇಂದ್ರಗಳ ಪೈಕಿ ೧,೯೭೫ರಲ್ಲಿ ಏಕ ವೈದ್ಯರಿರುವುದು ಗಮನಾರ್ಹ. ಇಂಥ ಆಸ್ಪತ್ರೆಯಲ್ಲಿ ಕನಿಷ್ಠ ಇಬ್ಬರು ವೈದ್ಯರು, ಒಬ್ಬ ಪ್ರಯೋಗಾಲಯ ತಜ್ಞ, ಒಬ್ಬ ಔಷಧಿಕಾರರು ಅಗತ್ಯ ಎನ್ನುತ್ತದೆ ಭಾರತೀಯ ಸಾರ್ವಜನಿಕ ಆರೋಗ್ಯ ಮಾನದಂಡ. ಆದರೆ ಶೇ. ೩೫ ಕೇಂದ್ರದಲ್ಲಿ ಪ್ರಯೋಗಾಲಯ ತಜ್ಞ ಮತ್ತು ಶೇ.೧೮ರಲ್ಲಿ ಔಷಧಿಕಾರರು ಇಲ್ಲ. ಆದಾಗ್ಯೂ ಲಭ್ಯವಿದ್ದ ಸಿಬ್ಬಂದಿ ಸೌಲಭ್ಯ ಬಳಸಿ, ಎಲ್ಲರಿಗೂ ಚಿಕಿತ್ಸೆ ನೀಡಿ ಬದುಕಿಸುವ ವೈದ್ಯರು ನಮ್ಮಲ್ಲಿದ್ದಾರೆ.

ಆಗಾಗ ಆತಂಕ ಸ್ಥಿತಿ ಎದುರಾಗುವುದು ಹೊಸದೇನಲ್ಲ. ಹೆರಿಗೆಗಾಗಿ ಪ್ರಯತ್ನಿಸಿ ವಿಫಲರಾದ ವೈದ್ಯರು ಹೆಚ್ಚಿನ ತಜ್ಞ ಚಿಕಿತ್ಸೆಗಾಗಿ ನಗರದ ಮೇಲ್ಮಟ್ಟದ ಆಸ್ಪತ್ರೆಗೆ ಸೂಚಿಸಿದಾಗ ಕೆಲವು ಬಾರಿ ಮಾರ್ಗದಲ್ಲಿಯೇ ಹೆರಿಗೆಯಾದ ಸುದ್ದಿ ಕೇಳಿದ್ದೇವೆ. ಹೀಗಾದಾಗ ಬೇಕೆಂತಲೇ ವೈದ್ಯರು ತಮ್ಮ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲು ಹೀಗೆ ಮಾಡಿದ್ದಾರೆ ಎಂಬ ಆರೋಪ ಸಾಮಾನ್ಯ. ಹಾಗೆಯೇ ಹೆರಿಗೆಗೆ ದೊಡ್ಡ ಆಸ್ಪತ್ರೆಗೆ ಸೂಚಿಸದೆ ತಮ್ಮ ಆಸ್ಪತ್ರೆಯಲ್ಲಿ ಪ್ರಯತ್ನಿಸುವಾಗ ತಾಯಿ ಮಗುವಿಗೆ ತೊಂದರೆಯಾದರೆ ಇದು ವೈದ್ಯರ ನಿರ್ಲಕ್ಷ್ಯ ಎಂದು ಸಂಬಂಧಿಗಳಿಂದ ಆರೋಪ, ಟೀಕೆ ಸಾಮಾನ್ಯ. ನೆನಪಿಡಿ: ಹೆರಿಗೆ ನಂತರ ತಾಯಿ ಮತ್ತು ಶಿಶು ದೈಹಿಕ ಹಾಗೂ ಮಾನಸಿಕವಾಗಿ ಆರೋಗ್ಯವಾಗಿರಬೇಕೆಂಬ ಉದ್ದೇಶದಿಂದ ದೊಡ್ಡ ಆಸ್ಪತ್ರೆಗೆ ಸೂಚಿಸುತ್ತಾರೆ ಹೊರತು ಬೇರೆ ಕಾರಣಕ್ಕಲ್ಲ.

ಗ್ರಾಮ ಆಸ್ಪತ್ರೆಯಲ್ಲಿ ಒಳರೋಗಿಯಾಗಿ ಚಿಕಿತ್ಸೆ ಪಡೆಯಲು ಅನುಕೂಲಗಳು ಕಡಿಮೆ. ಕಾಯಿಲೆಯ ಗಂಭೀರತೆ ಆಧರಿಸಿ ದಾಖಲಾತಿ ಮಾಡಬೇಕಾಗುತ್ತದೆ. ಇದರ ಅರಿವು ಇರದ ವ್ಯಕ್ತಿಗೆ ದಾಖಲಾತಿ ನಿರಾಕರಿಸಿದಾಗ, ಈತನ ಸಿಟ್ಟಿಗೆ ವೈದ್ಯರು ಗುರಿಯಾಗುತ್ತಾರೆ.

ರೋಗಿಗೆ ಚಿಕಿತ್ಸೆ ನೀಡುವುದಲ್ಲದೆ ಕುಟುಂಬ ಯೋಜನೆ, ಮಕ್ಕಳಿಗೆ ಲಸಿಕೆ ನೀಡುವುದು, ಪಲ್ಸ್ ಪೋಲಿಯೋ, ಸಾಂಕ್ರಾಮಿಕ ರೋಗ ತಡೆಗಳಂತಹ ಹಲವಾರು ರಾಷ್ಟ್ರೀಯ ಕಾರ್ಯಕ್ರಮಗಳ ಕ್ರಿಯಾ ಯೋಜನೆ, ಅನುಷ್ಠಾನ, ಮೇಲ್ವಿಚಾರಣೆ, ವರದಿ ಮಾಡುವ ಜವಾಬ್ದಾರಿ ಈ ವೈದ್ಯರದೇ. ಪ್ರಾಥಮಿಕ ಕೇಂದ್ರದ ವೈದ್ಯಾಧಿಕಾರಿ ೨೨ ರಾಷ್ಟ್ರೀಯ ಕಾರ್ಯಕ್ರಮ ಅನುಷ್ಠಾನಗೊಳಿಸಬೇಕು ಮತ್ತು ೧೦ ಮೇಲಧಿಕಾರಿಗಳ ಜೊತೆ ಸಂಪರ್ಕದಲ್ಲಿರಬೇಕು.

ಅಸಹಜ ಸಾವು, ವಿಷಪ್ರಾಶನ, ಅಪಘಾತದ ಗಾಯಾಳುಗಳನ್ನು ವೈದ್ಯ ಕಾನೂನು ಪ್ರಕಾರ ದಾಖಲಿಸಿ, ಪೊಲೀಸರಿಗೆ ವರದಿ ಸಲ್ಲಿಸಬೇಕು. ಮೃತ ದೇಹದ ಶವ ಪರೀಕ್ಷೆ ಮತ್ತೊಂದು ದೊಡ್ಡ ಜವಾಬ್ದಾರಿ. ಇವುಗಳಿಗೆಲ್ಲಾ ಸಂಬಂಧಪಟ್ಟ ವರದಿ ಸಿದ್ಧಪಡಿಸಿ, ಸಾಕ್ಷಿ ಹೇಳಲು ಕೋರ್ಟ್‌ಗಳಿಗೆ ಹಾಜರಾಗಬೇಕಾಗುತ್ತದೆ. ಆಸ್ಪತ್ರೆಯಲ್ಲಿ ನಡೆಯುವ ಎಲ್ಲ ಚಿಕಿತ್ಸೆ, ರೋಗ ನಿಯಂತ್ರಣ, ಆರೋಗ್ಯ ವೃದ್ಧಿಗೆ ಸಂಬಂಧಿಸಿದ ಹಲವಾರು ಚಟುವಟಿಕೆಗಳ ವರದಿ ಸಿದ್ಧಪಡಿಸಿ, ಮೇಲಧಿಕಾರಿಗಳಿಗೆ ಸಲ್ಲಿಸಿ ಇವುಗಳಿಗೆ ಸಂಬಂಧಿಸಿದ ಸಭೆಗಳಿಗೆ ಆಗಾಗ ಹಾಜರಾಗಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ 'ವೈದ್ಯರು ಆಸ್ಪತ್ರೆಯಲ್ಲಿ ಇಲ್ಲ' ಎಂಬ ಅಪವಾದ ಎದುರಿಸಬೇಕು.

ಇಲ್ಲಿರುವ ವೈದ್ಯರು ಹಗಲು, ರಾತ್ರಿ ಎನ್ನದೆ ಸೇವೆ ಸಲ್ಲಿಸಬೇಕಾಗುವ ಸಂದರ್ಭಗಳು ಅನೇಕ. ಉದಾ: ಸಾಂಕ್ರಾಮಿಕ ರೋಗಗಳು ಹೆಚ್ಚಾದಾಗ ೨೪ಗಂಟೆ ಜಾಗ್ರತೆ ಅವಶ್ಯ. ಊಟ ಮಾಡುತ್ತಿರುವಾಗ ನಡುವೆ ಎದ್ದು ಬರುವ ಅಥವಾ ಹಾಸಿಗೆಯಿಂದ ಉಟ್ಟ ಬಟ್ಟೆಯಲ್ಲಿ ಆಸ್ಪತ್ರೆಗೆ ಬಂದು ಚಿಕಿತ್ಸೆ ನೀಡುವ ದೃಶ್ಯ ಆಗಾಗ ಸಾಮಾನ್ಯ. ಇದಕ್ಕೆಲ್ಲಾ ಈ ವೈದ್ಯರ ತ್ಯಾಗ, ಸಹನೆ, ಸೇವಾ ಮನೋಭಾವನೆಯೇ ಕಾರಣ. ವೈದ್ಯ ಶಾಸ್ತ್ರ ಬಹಳಷ್ಟು ಬದಲಾಗಿದ್ದರೂ, ವೈದ್ಯರ ಸೇವಾ ಮನೋಭಾವ ಕಡಿಮೆಯಾಗಿಲ್ಲ.

ಬೆಂಗಳೂರು ಹತ್ತಿರದ ಟಿ. ಬೇಗೂರ ಗ್ರಾಮದಲ್ಲಿ ಪ್ರತಿ ಭಾನುವಾರ ಉಚಿತ ಸೇವೆ ನೀಡುತ್ತಿರುವ ಹೃದಯ ತಜ್ಞ ಡಾ॥ ಬಿ. ರಮನರಾವ, ಚಾಮರಾಜನಗರ ಸೋಲಿಗರ ಬುಡಕಟ್ಟು ಜನರ ನೆಚ್ಚಿನ ಡಾ॥ ಎಚ್. ಸುದರ್ಶನ, ನಿತ್ಯ ೧೫೦ ಗ್ರಾಮ ರೋಗಿಗಳಿಗೆ ಉಚಿತ ಚಿಕಿತ್ಸೆ ಮತ್ತು ಕೆಲವರಿಂದ ಕೇವಲ ಐದು ರೂಪಾಯಿ ಫೀ ಪಡೆಯುತ್ತಿರುವ ಮಂಡ್ಯ ಜಿಲ್ಲೆಯ "ಐದು ರೂಪಾಯಿ ಡಾಕ್ಟರ್" ಶಂಕರೆಗೌಡ, ತಮ್ಮ ಜೀವನ ಪೂರ್ತಿ ಗ್ರಾಮ ಜೀವಿಗಳಿಗೆ ಚಿಕಿತ್ಸೆ ನೀಡುತ್ತಿರುವ ೭೦ ವರ್ಷದ ಕೊಲಕತ್ತಾದ ಡಾ॥ ಸುರಿಂದರ ಮೋಹನ ದೇಬ್ ಅವರನ್ನು ನೆನಪಿಸಿಕೊಳ್ಳದಿದ್ದರೆ ತಪ್ಪಾದೀತು.

ಸುಮಾರು ೧೫ ವರ್ಷಗಳಿಂದ ಗ್ರಾಮದಲ್ಲಿ ಸೇವೆ ಸಲ್ಲಿಸುತ್ತಿರುವ ವೈದ್ಯರಿಗೆ 'ಏಕೆ ನೀವು ವೈಯಕ್ತಿಕ ಜೀವನವನ್ನು ಮರೆತು ಹಳ್ಳಿಯಲ್ಲಿದ್ದೀರಿ' ಎಂಬ ಪ್ರಶ್ನೆಗೆ 'ಗ್ರಾಮದ ಜನರಿಗೆ ನಗರದ ಹೈಟೆಕ್ ಆಸ್ಪತ್ರೆಗಿಂತ ತಮ್ಮ ಊರಿನ ಆಸ್ಪತ್ರೆ ಹಾಗೂ ವೈದ್ಯರ ಮೇಲೆ ಹೆಚ್ಚು ಭರವಸೆ. ಇವರ ರೋಗ ವಾಸಿಯಾಗಲು ಔಷಧಿ ಜೊತೆ ಮುಖ್ಯವಾದುದು ಸಾಂತ್ವನ' ಎನ್ನುತ್ತಾರೆ.

'ಜನಸಂಖ್ಯೆಯ ಶೇ. ೬೦ರಿಂದ ೭೦ ಜನ ಗ್ರಾಮದಲ್ಲಿದ್ದಾರೆ. ಅನಕ್ಷರತೆ, ಅಜ್ಞಾನ, ಮೂಢನಂಬಿಕೆ, ಬಡತನದಿಂದ ಈಗಾಗಲೇ ನೊಂದಿರುವ ಇವರಿಗೆ ಕಾಯಿಲೆ ದೊಡ್ಡ ಸಂಕಷ್ಟ. ಇಂತಹವರಿಗೆ ಬೇಕಾಗಿರುವುದು ಇವರ ಕಷ್ಟ ಕೇಳಿಸಿಕೊಳ್ಳುವ ಎರಡು ಕಿವಿ, ಒಂದೆರಡು ಸವಿಮಾತು. ಇಂತಹವರಿಗೆ ಸೇವೆ ಮಾಡುವುದರಿಂದ ನನಗೆ ಅತ್ಯಂತ ತೃಪ್ತಿ, ಸಂತಸ' ಎನ್ನುತ್ತಾರೆ ಹಲವಾರು ವರ್ಷಗಳಿಂದ ಗ್ರಾಮಸ್ಥರಿಗೆ ಚಿಕಿತ್ಸೆ ನೀಡುತ್ತಿರುವ ಹಿರಿಯ ವೈದ್ಯರೊಬ್ಬರು.

**ಡಾ॥ ಎಂ. ಡಿ. ಸೂರ್ಯಕಾಂತ,** (ಮಕ್ಕಳ ತಜ್ಞರು)
ಫ್ಲಾಟ್ ನಂ. ೩೦೭, ಎಂ. ಆರ್. ಎನ್‌ಕ್ಲೇವ್ ಅಪಾರ್ಟ್‌ಮೆಂಟ್
ಸಿಂಗಸಂದ್ರ, ಮಣಿಪಾಲ್ ಕಂಟ್ರಿ ರಸ್ತೆ, ಬೆಂಗಳೂರು – ೫೬೦ ೦೬೮

ಗುಲಾಮರ ಸಂಕೋಲೆಯ ಧ್ವನಿಯೇ ಪ್ರಾರ್ಥನೆಗೆ ನೇಪಥ್ಯದ ಸಂಗೀತ. ಮನುಷ್ಯರ ಧ್ವನಿಯನ್ನು ಕೊಳ್ಳುವ ಮಾರುವ ವ್ಯಾಪಾರವನ್ನಾಗಿ ಮಾರ್ಪಡಿಸಿಕೊಂಡವರು ದೇವಕುಮಾರನ ಮುಂದೆ, ಶಿಲುಬೆಯ ಮುಂದೆ ಮಂಡಿಯೂರಿ ಸದ್ಗತಿ ಬೇಡುತ್ತಿದ್ದಾರೆ. ಗುಲಾಮರ ನೆತ್ತರಿನಿಂದ ನೆಂದುಹೋದ ಸ್ವರ್ಣಾಭರಣದಿಂದ ಮೇರಿಮಾತೆಗೆ ಅಲಂಕಾರ ಮಾಡುತ್ತಿದ್ದಾರೆ. ಈ ಆಕೃತಿಗಳೆಲ್ಲಾ ಜರುಗುತ್ತಿರುವುದು ಕ್ರೈಸ್ತಮತದ ಮುಸುಗಿನ ಮರೆಯಲ್ಲಿ. ವಾಸ್ತವವಾಗಿ ದರೋಡೆಕೋರರು ದೇವಮಾನವರು ಮುಸುಗು ಹೊದ್ದುಕೊಂಡು ತಿರುಗುತ್ತಿದ್ದಾರೆ. ಈ ಮಹಾನ್ ಕ್ರೈಸ್ತರನ್ನು ಎಷ್ಟು ಗೌರವಯುತವಾಗಿ ಅಭಿಷೇಕ ಮಾಡಿದರೂ ಕಡಿಮೆಯಲ್ಲವೇ? ಇರುವೆಗೂ ಕೂಡ ಕೇಡು ಬಗೆಯಬೇಡಿರೆಂದು ನೀತಿ ಹೇಳುವ ನೀವು ಒಂಟೆಗಳನ್ನೇ ಗುಟುಕ್ಕೆಂದು ನುಂಗಿಬಿಡುತ್ತೀರಿ. ನೀತಿವಂತರೆಂದು ಹೇಳಿಕೊಳ್ಳುತ್ತಿರುವ ಅನೀತಿಪರರು ಇವರು. ಹೊರಗಡೆಗೆ ಪವಿತ್ರರೆಂಬಂತೆ ಕಾಣಿಸುತ್ತಾರಾದರೂ ಒಳಗೆ ಮಾತ್ರ ಸಂಪೂರ್ಣ ಹೊಟ್ಟೆಕಿಚ್ಚಿನಲ್ಲಿ ಬೂದಿಯಾಗಿರುವ ನಿರ್ಲಜ್ಜ ಆತ್ಮಗಳವು. ಶವಗಳನ್ನೂ ಕಿತ್ತು ತಿನ್ನುವ ನೀಚಾತಿನೀಚ ಪ್ರಾಣಿಗಳಿಗಿಂತ ನೀಚರು ಇವರು.

# ಗುಲಾಮರ ಕಾರಾಗೃಹಗಳೂ ಚರ್ಚೆ ಭವನವೂ ಅಕ್ಕಪಕ್ಕದ ಭವನಗಳೇ

ಡಗ್ಲಾಸ್ ಅಮೇರಿಕಾ ಹುಟ್ಟು ಗುಲಾಮ. ಆತನ ಹೋರಾಟ ಅಸಾಧಾರಣವಾದುದು. ಆತನ ಆತ್ಮಕಥೆಯ ಪ್ರತಿ ಅಕ್ಷರವೂ ನಮ್ಮನ್ನು ನಡುಗಿಸುವುದರಲ್ಲಿ ಅದರ ತಾಕತ್ತು ಅಡಗಿದೆ. ಜಗತ್ತಿನ ಅನೇಕ ಭಾಷೆಗಳಿಗೆ ಅನುವಾದಗೊಂಡಿದೆ. ಈ ಭಾಷಣದ ತುಣುಕು ಆತನ ಬಾಳಕಥನದಲ್ಲಿ ಇಲ್ಲ. ಡಗ್ಲಾಸ್‌ನ ಹೆಚ್ಚುಗಾರಿಕೆ ಮತ್ತು ಬೆಳವಣಿಗೆಯನ್ನು ಸಹಿಸದ ಅನೇಕರು ಅವನು ಗುಲಾಮನಾಗಿ ಹುಟ್ಟಲೇ ಇಲ್ಲವೆಂದು ಟೀಕಿಸುತ್ತಾರೆ. ಈ ಪುಕಾರುಗಳಿಗೆ ಉತ್ತರವಾಗಿಯೆ ಡಗ್ಲಾಸ್ ಆತ್ಮಚರಿತ್ರೆಯನ್ನು ಬರೆದದ್ದು. ನಂತರ ಅವನು ಮತಾಂಧನೆಂದೂ ಕ್ರೈಸ್ತಮತದ ಪರಮ ವಿರೋಧಿಯೆಂದೂ ಪ್ರತಿಭಟಿಸಲು ಶುರುಮಾಡುತ್ತಾರೆ. ಇವು ಆತನ ಶ್ರೇಯಸ್ಸನ್ನು ಸಹಿಸದವರ ಆರೋಪ ಗಳಾಗಿದ್ದವೆಂದು ಮೇಲ್ನೋಟಕ್ಕೇ ತಿಳಿಯುತ್ತದೆ. 'ಭಾವನಾತ್ಮಕತೆ, ಸಂಪ್ರದಾಯ ಮೂಢನಂಬಿಕೆ ಎಲ್ಲವನ್ನು ನಂಬದೆಯೂ ಪ್ರಾಮಾಣಿಕವಾಗಿ ನಾನು ನಂಬುವುದೇನೆಂದರೆ, ನಾನು ಗುಲಾಮ ವ್ಯವಸ್ಥೆಯ ಕೂಪದಿಂದ ಹೊರಬಂದುದು ದೈವಸಂಕಲ್ಪವಿರಬೇಕು' ಎಂದು ಡಗ್ಲಾಸ್ ಬರೆದುಕೊಂಡಿದ್ದಾನೆ. ಇದಕ್ಕೆಲ್ಲಾ ಕೊನೆಯೆಂಬಂತೆ ಏಪ್ರಿಲ್ ೨೮, ೧೮೪೫ರಲ್ಲಿ ಡಗ್ಲಾಸ್ ತನ್ನ ಬರಹಗಳಿಗೆ ಸ್ಪಷ್ಟೀಕರಣ ಕೊಡುತ್ತಾನೆ. ಭಿನ್ನಾಭಿಪ್ರಾಯ ಮತ್ತು ಹೋರಾಟವಿರುವುದು ಯಾವುದರ ವಿರುದ್ಧವೆಂದು ಆತನಿಗಿದ್ದ ತಿಳುವಳಿಕೆ ಸ್ಪಷ್ಟವಾದುದು. ಮುಂದಿನದು ಆತನ ಬರಹ.

* * *

ಇಲ್ಲಿಯವರೆಗೂ ನಾನು ಬರೆದಿರುವುದನ್ನು ಓದುವವರಿಗೆ ನಾನೊಬ್ಬ ವಿರೋಧಾಭಾಸವುಳ್ಳ ವ್ಯಕ್ತಿಯಾಗಿ ಕಾಣುವ ಅವಕಾಶ ಇಲ್ಲವೆಂದಲ್ಲ. ಅಂಥ ಅಪಾಯವನ್ನು ನಿವಾರಿಸಬೇಕಾದುದು ಕೂಡ ನನ್ನ ಜವಾಬ್ದಾರಿ. ಆಖೈರಾಗಿ ಮತಧರ್ಮ ಭಿನ್ನಾಭಿಪ್ರಾಯ ಗಳನ್ನು ಕುರಿತಂತೆ ನನ್ನ ವಿವರಣೆಯಿದು. ನನ್ನ ಕ್ರಾಂತಿಕಾರಕ ವಿರೋಧವಿರುವುದು ಭಿನ್ನಾಭಿಪ್ರಾಯ ಗಳಿರುವುದು ಈ ದೇಶದಲ್ಲಿನ ಗುಲಾಮರ ಯಜಮಾನರು ಅವಲಂಬಿಸಿರುವ ಆಚರಿಸುತ್ತಿರುವ ಮತ(ಧರ್ಮ)ವನ್ನು ಕುರಿತೇ ವಿನಹ ಕ್ರಿಸ್ತ ಪ್ರತಿಪಾದಿಸಿದ ಕ್ರೈಸ್ತಧರ್ಮವನ್ನು ಕುರಿತು ಅಲ್ಲವೆಂದು ಮನವಿ ಮಾಡಿಕೊಳ್ಳುತ್ತಿದ್ದೇನೆ. ಈ ವ್ಯತ್ಯಾಸವನ್ನು ನಾವೆಲ್ಲರೂ ಗಮನಿಸುವುದು ಅವಶ್ಯಕ. ಒಂದು ಒಳ್ಳೆಯದು, ಪವಿತ್ರವಾದುದು, ಆಚರಿಸಬಹುದಾದುದು, ಮತ್ತೊಂದು ಅಮಾನುಷ ಅನೈತಿಕ, ದುರ್ಮಾರ್ಗ ಮತ್ತು ತಕ್ಷಣವೆ ನಿವಾರಿಸಬೇಕಾದುದು. ಒಂದನ್ನು ನಾವು ಸಮರ್ಥಿಸುತ್ತಿದ್ದೇವೆಂದರೆ ಮತ್ತೊಂದನ್ನು ವಿರೋಧಿಸುತ್ತಿದ್ದೇವೆಂದೇ ಅರ್ಥ. ಶಾಂತಿ, ಸ್ನೇಹ ಸಹೋದರತ್ವವನ್ನು ಬೋಧಿಸುವ ಕ್ರಿಸ್ತ ಪ್ರತಿಪಾದಿಸಿದ ಕ್ರೈಸ್ತರನ್ನು ನಾನು ಅಪಾರವಾಗಿ ಪ್ರೀತಿಸುತ್ತೇನೆ.

ಅನೈತಿಕವಾದ, ಗುಲಾಮರನ್ನು ಸೆರೆಹಿಡಿಯುವ, ಸ್ತ್ರೀಯರನ್ನು ಕೂಡ ಕುರಿಗಳಂತೆ ಹೊಡೆಯುವ, ತೊಟ್ಟಿಲಿನಲ್ಲಿರುವಾಗಲೆ ತಾಯಿ ಮಗುವನ್ನು ಬೇರೆ ಮಾಡುವ ಈ ದೇಶದಲ್ಲಿನ ಕ್ರೈಸ್ತರನ್ನು ದ್ವೇಷಿಸುತ್ತೇನೆ. ಅಸಲಿಗೆ ಇದನ್ನು ಕ್ರೈಸ್ತಮತವೆಂದು ಕರೆಯುವುದು ಎಲ್ಲಿಯವರೆಗೆ ಸಮಂಜಸ? ಆ ಹೆಸರಿನಿಂದಲೆ ಕರೆಯಬಾರದು ಇದನ್ನು. ಅಮಾಯಕರ ಮೇಲೆ ವಿನಾ ಕಾರಣ ರೂಪಿಸುತ್ತಿರುವ ಕ್ರೌರ್ಯಯುತ ಸಂಚು ಇದು. ದೇವದೂತರು (ಕಳ್ಳಕಾಕರು) ಧರಿಸಿರುವ ಸೈತಾನತನವೇ ಈ ಧರ್ಮ ಬೋಧಕರು. ಈ ಮತ ಸಮಾವೇಶಗಳ ಹಾಗೂ ಆರ್ಭಟಗಳನ್ನು ನೋಡಿದರೇನೆ ಅಸಹ್ಯವಾಗುತ್ತದೆ. ಮನಸ್ಸಿಗೆ ರೇಜಿಕೆಯಾಗುತ್ತದೆ. ಎಂಥಾ ದಗಾಕೋರರಿವರು. ನರರೂಪದ ರಾಕ್ಷಸರು, ನಯವಂಚಕರು. ಮನುಷ್ಯರನ್ನು ಅಪಹರಿಸುವವರು ಕೂಡ ಮತಬೋಧಕರೆ. ಚಾಟಿಯ ಕೋಲಿನ ಮೂಲಕ ಸ್ತ್ರೀಯರ ಪ್ರಾಣ ಹೀರುವವರೂ ಮಿಷನರಿಗಳು. ಹಸಿ ಮೈಯ ಬಾಣಂತಿಯ ಕಂಕುಳಲ್ಲಿರುವಾಗಲೆ ತಾಯಿ ಮಗುವನ್ನು ದೂರ ಮಾಡುವವರೂ ಚರ್ಚ್‌ನಲ್ಲಿ ಗೌರವ ಪ್ರಧಾನರು. ವಾರದಲ್ಲಿ ದಿನಂಪ್ರತಿ ಗುಲಾಮರನ್ನು ಕೋಲು, ಚಾಟಿಗಳಿಂದ ಹೊಡೆಯುತ್ತಾ ರಕ್ತ ಬರಿಸುವವರು ರವಿವಾರದಂದು ಚರ್ಚಿನಲ್ಲಿ ಶಾಂತಿ ಸಂದೇಶ ನೀಡುತ್ತಿದ್ದಾರೆ. ಜೀಸಸ್‌ನಂತೆ ಬಲಹೀನವಾದ ಕುರಿಮಂದೆಗೆ ರಕ್ಷಕನೆ ಇವನು? ನನ್ನ ಕೂಲಿ ದುಡ್ಡನ್ನು ಬಲವಂತವಾಗಿ ಕಸಿದುಕೊಂಡು ದರೋಡೆ ಮಾಡುವ ನೀಚ ರವಿವಾರದಂದು ನೀತಿ ಸೂತ್ರಗಳನ್ನು ಪ್ರಕಟಿಸುತ್ತಿದ್ದಾನೆ. ಇವನಾ ನನಗೆ ದೈವ ಸನ್ನಿಧಿಗೆ ದಾರಿ ತೋರಿಸುವವನು? ನನ್ನ ಅಕ್ಕ ತಂಗಿಯರನ್ನು ಸೂಳೆಗಾರಿಕೆಯ ಕೂಪಕ್ಕೆ ದಬ್ಬಿದವನು ಪವಿತ್ರತೆಯನ್ನು ಕುರಿತು ಪ್ರವಚನ ನೀಡಲು ಯೋಗ್ಯನೇ?

ಬೈಬಲನ್ನು ಎಲ್ಲರೂ ಓದಬೇಕೆಂದು ಚರ್ಚ್ ಸಮಾವೇಶದಲ್ಲಿ ಹೇಳುವವನು ಆ ದೈವ ಸಂದೇಶವನ್ನು ನಾನು ಓದದಂತೆ ನಿಷೇಧಿಸುತ್ತಾನಾ? ಮದುವೆ ಅತ್ಯಂತ ಪವಿತ್ರವಾದ ಸ್ತ್ರೀ ಪುರುಷರ ಸಂಬಂಧವೆಂದು ಉಪನ್ಯಾಸ ಕೊಡುವ ಕಪಟಿ,

ಮೂಲ : **ಫ್ರೆಡ್ರಿಕ್ ಡಗ್ಲಾಸ್** ಕನ್ನಡಕ್ಕೆ : **ಪಿ. ಆರಡಿಮಲ್ಲಯ್ಯ ಕಟ್ಟೇರ**

ಮೋಸಗಾರ ನಾವು ವಿವಾಹ ಬಂಧನಕ್ಕೆ ಯೋಗ್ಯರೇ ಅಲ್ಲವೆಂದು ಹೇಳುತ್ತಾನಾ? ಗಂಡ ಹೆಂಡತಿಯನ್ನು, ತಾಯಿ ಮಕ್ಕಳನ್ನು, ಅಣ್ಣ, ತಮ್ಮ, ಅಕ್ಕತಂಗಿಯರನ್ನು ಬೇರೆ ಮಾಡುವ ಧೂರ್ತ ದೈವಶಾಸನ ಮಾಡಬಹುದೇ? ಕಳ್ಳನೇ ಕಳ್ಳತನದ ವಿರೋಧ, ವ್ಯಭಿಚಾರಿಗಳು ವ್ಯಭಿಚಾರದ ವಿರುದ್ಧ ಸೂಕ್ತಿಗಳನ್ನು ಕೇಳಿಸುತ್ತಿದ್ದಾರೆ. ಮನುಷ್ಯರನ್ನು ಯಃಕಶ್ಚಿತ್ ಪ್ರಾಣಿಗಳಂತೆ ಮಾಡಿ ಆ ದುಡ್ಡಿನಲ್ಲಿ ಭವ್ಯ ಚರ್ಚ್ ಭಂಗತಿಗಳನ್ನು ಭವನಗಳನ್ನು ನಿರ್ಮಿಸುತ್ತಿದ್ದಾರೆ. ಸ್ತ್ರೀಯರನ್ನು ಸಾವಿರಗಳ ಲೆಕ್ಕದಲ್ಲಿ ಕೊಂಡುಕೊಂಡು ಭಾನುವಾರ ಸುವಾರ್ತೆ ಹೇಳುತ್ತಿದ್ದಾರೆ. ಹಸುಗೂಸುಗಳನ್ನು ಮಾರಿ ಬೈಬಲ್ಲನ್ನು ಹಂಚುತ್ತಿದ್ದಾರೆ. ಇದೆಲ್ಲಾ ದೇವರ ಮಹಿಮೆ! ಗುಲಾಮರ ದೀನಕೂಗು ಚರ್ಚಿನ ಘಂಟಾನಾದವೂ ಒಂದೇ ಸಾರಿ ಕೇಳುತ್ತಿವೆ. ಹೃದಯ ವಿದ್ರಾವಕವಾದ ಗುಲಾಮರ ಆರ್ತನಾದವು ಚರ್ಚಿನ ಪ್ರಾರ್ಥನೆಯ ಜೋರುಮಾತಿನಿಂದ ಪ್ರಪಂಚಕ್ಕೆ ಕೇಳಿಸುತ್ತಿಲ್ಲ. ಮತ ಪ್ರಚಾರವೂ ಗುಲಾಮರ ವ್ಯಾಪಾರವೂ ಜೊತೆ ಜೊತೆಗೆ ಕೊನೆಯಾಗುತ್ತದೆ. ವಿಶೇಷತಃ ಗುಲಾಮರ ಕಾರಾಗೃಹಗಳೂ ಚರ್ಚೆ ಭವನವೂ ಅಕ್ಕಪಕ್ಕದ ಭವನಗಳೇ.

ಗುಲಾಮರ ಸಂಕೋಲೆಯ ಧ್ವನಿಯೇ ಪ್ರಾರ್ಥನೆಗೆ ನೇಪಥ್ಯದ ಸಂಗೀತ. ಮನುಷ್ಯರ ಧ್ವನಿಯನ್ನು ಕೊಳ್ಳುವ ಮಾರುವ ವ್ಯಾಪಾರವನ್ನಾಗಿ ಮಾರ್ಪಡಿಸಿಕೊಂಡವರು ದೇವಕುಮಾರನ ಮುಂದೆ, ಶಿಲುಬೆಯ ಮುಂದೆ ಮಂಡಿಯೂರಿ ಸದ್ಗತಿ ಬೇಡುತ್ತಿದ್ದಾರೆ. ಗುಲಾಮರ ನೇತ್ರರಿನಿಂದ ನೆಂದುಹೋದ ಸ್ವರ್ಣಾಭರಣದಿಂದ ಮೇರಿಮಾತೆಗೆ ಅಲಂಕಾರ ಮಾಡುತ್ತಿದ್ದಾರೆ. ಈ ಆಕೃತಿಗಳೆಲ್ಲಾ ಜರುಗುತ್ತಿರುವುದು ಕ್ರೈಸ್ತಮತದ ಮುಸುಗಿನ ಮರೆಯಲ್ಲೆ. ವಾಸ್ತವವಾಗಿ ದರೋಡೆಕೋರರು ದೇವಮಾನವರು ಮುಸುಗು ಹೊದ್ದುಕೊಂಡು ತಿರುಗುತ್ತಿದ್ದಾರೆ. ರೆಂಡೆಮುಂಡೆಯರಿಂದ ಹಣ ಅಪಹರಿಸಿ ಚರ್ಚಿನಲ್ಲಿ ದಾನ ಮಾಡುವೆಯಾ? ಈ ಮಹಾನ್ ಕ್ರೈಸ್ತರನ್ನು ಎಷ್ಟು ಗೌರವಯುತವಾಗಿ ಅಭಿಷೇಕ ಮಾಡಿದರೂ ಕಡಿಮೆಯಲ್ಲವೇ? ಇರುವೆಗೂ ಕೂಡ ಕೇಡು ಬಗೆಯಬೇಡಿರೆಂದು ನೀತಿ ಹೇಳುವ ನೀವು ಒಂಟೆಗಳನ್ನೇ ಗುಟುಕ್ಕೆಂದು ನುಂಗಿಬಿಡುತ್ತೀರಿ. ನೀತಿವಂತರೆಂದು ಹೇಳಿಕೊಳ್ಳುತ್ತಿರುವ ಅನೀತಿಪರರು ಇವರು. ಹೊರಗಡೆಗೆ ಪವಿತ್ರರೆಂಬಂತೆ ಕಾಣಿಸುತ್ತಾರಾದರೂ ಒಳಗೆ ಮಾತ್ರ ಸಂಪೂರ್ಣ ಹೊಟ್ಟೆಕಿಚ್ಚಿನಲ್ಲಿ ಬೂದಿಯಾಗಿರುವ ನಿರ್ಲಜ್ಜ ಆತ್ಮಗಳವು. ಶವಗಳನ್ನೂ ಕಿತ್ತು ತಿನ್ನುವ ನೀಚಾತಿನೀಚ ಪ್ರಾಣಿಗಳಿಗಿಂತ ನೀಚರು ಇವರು.

ಈ ವರ್ಣನೆ ಎಷ್ಟೇ ಜಿಗುಪ್ಸೆ ತರುವಂತೆ ಕಾಣಿಸಿದರೂ ದೇಶದಲ್ಲಿನ ಅತ್ಯಧಿಕ ಜನ ಕ್ರೈಸ್ತರಿಗಿದು ಅನ್ವಯವಾಗುತ್ತದೆ. ಕುರಿ ಕದ್ದವನಿಗೆ, ಕಳ್ಳನೆಂಬ ಮುದ್ರೆ ಹಾಕುತ್ತಾರೆ. ತನ್ನಂತೆಯೇ ಇರುವ ಮನುಷ್ಯರನ್ನು ಅಪಹರಿಸುವವನು ಯಾರು ಹಾಗಾದರೆ? ಜೀವನವನ್ನು ತ್ಯಾಗದ ಪ್ರತಿರೂಪವಾಗಿ ಮಾಡಿಕೊಳ್ಳಬೇಕೆಂದು ಬೋಧಿಸುತ್ತಾರೆ. ಆದರೆ ಕಿಂಚಿತ್ತೂ ದಯವಿಲ್ಲದ ಕಠಿಣ ಕರ್ಮಠ ಆತ್ಮಗಳಿವರು. ಭಗವಂತನ ಅಪಾರ ಪ್ರೇಮ ಕುರಿತು ಮಾತಾಡುತ್ತಾರೆ. ಆದರೆ ಅದೇನೆಂದು ಇವರಿಗೆ ಗೊತ್ತಾ? ಕೋಟಿಗಳನ್ನು ಖರ್ಚುಮಾಡಿ ಪ್ರಪಂಚದಾದ್ಯಂತ ಬೈಬಲ್ ಪ್ರಚಾರ ಮಾಡುತ್ತಾರೆ. ಆದರೆ ತಮ್ಮ ಗುಲಾಮರು ಮಾತ್ರ ಅದನ್ನು ಓದದಂತೆ ನಿಷೇಧಿಸುತ್ತಾರೆ. ಇವೇ ವರ್ತಮಾನದಲ್ಲಿ ಈ ದೇಶದಲ್ಲಿ ಅಸ್ತಿತ್ವದಲ್ಲಿರುವ ಮತಾಚಾರಗಳು, ಈ ಕ್ರೈಸ್ತ ಚರ್ಚುಗಳು ಪ್ರೇಮ, ದಯೆ, ಕರುಣೆ, ಶಾಂತಿ, ಅಹಿಂಸೆಯನ್ನು ಬೋಧಿಸುತ್ತಿವೆಯಾ? ಇಂಥವರ ವಿರುದ್ಧ ಮಾತ್ರ ನನ್ನ ಹೋರಾಟ, ಪ್ರತಿಭಟನೆ, ಕ್ರಾಂತಿ ಎಲ್ಲವೂ...

ಈ ಸಣ್ಣ ಪುಸ್ತಕ ಅಮೇರಿಕಾದ ಗುಲಾಮ ವ್ಯವಸ್ಥೆಯನ್ನು ಕುರಿತು ಕಣ್ಣು ತೆರೆಸುವಂತೆ ಮಾಡುತ್ತದೆ ಎಂಬುದನ್ನು ಅಗಾಧವಾದ ವಿಶ್ವಾಸದಿಂದ ನಂಬುತ್ತೇನೆ. ಲಕ್ಷಾಂತರ ಮಂದಿ ನನ್ನ ಅಕ್ಕತಂಗಿಯರಿಗೆ ಬಂಧು – ಬಾಂಧವರಿಗೆ ಸದ್ಯ ದಲ್ಲಿಯೇ ಗುಲಾಮತನದ ಶೃಂಖಲೆಗಳಿಂದ ಬಿಡುಗಡೆ ದೊರೆಯಲಿದೆಯೆಂಬುದೂ ನನ್ನ ನಂಬಿಕೆ. ಪ್ರೇಮ, ನ್ಯಾಯ, ಸುಭ್ರಾತೃತ್ವ ಈ ಲೋಕದಲ್ಲಿ ನಳನಳಿಸುತ್ತಾ ಜೀವಂತವಾಗಿ ನೆಲೆಸಲೆಂದು ನಿರೀಕ್ಷಿತ ಆಕಾಂಕ್ಷೆಯಿಂದ ಬರೆದ ಬರೆಹವಿದು.

ಮೂಲ : **ಫ್ರೆಡ್ರಿಕ್ ಡಗ್ಲಾಸ್**
ಕನ್ನಡಕ್ಕೆ : **ಪಿ. ಆರಡಿಮಲ್ಲಯ್ಯ ಕಟ್ಟೇರ**
ಚಾರ್ವಿತ ಜೆರಾಕ್ಸ್, ಹೆಚ್.ಪಿ.ಟಿ.ಸಿ.ಸ.ಪ್ರ.ದ. ಕಾಲೇಜ್
ಮುಂಭಾಗ, ಚಿತ್ರದುರ್ಗ ರಸ್ತೆ, ತ್ಯಾಗರಾಜನಗರ, ಚಳ್ಳಕೆರೆ



**ಕಾ**ಣದ ಲೋಕದಲ್ಲಿ ಉದ್ಭವಿಸಿ
ಇಳಿದು ಬಂದವನಲ್ಲ ಇವನು
ಯುಗಯುಗಗಳಲ್ಲಿ ವಿವಿಧ ರೂಪದಲಿ
ಅವತರಿಸಿದ ದೇವಸಂಭೂತನಲ್ಲ ಇವನು

# ಗಾಂಧಿ

ಕಂಡರಿಯದ ಯಾವುದೋ ಲೋಕದಿಂದ
ಮನುಕುಲದ ಉದ್ಧಾರಕ್ಕೆಂದು ಬಂದ ಅವಧೂತನಲ್ಲ
ಇವನು ಹಿಮಾಲಯದ ಗುಹಾಲಯದಲ್ಲಿ ತಪಸ್ಸು ಮಾಡಿ
ನಾಡಿಗೆ ಬಂದ ವೈರಾಗಿ ಇವನಲ್ಲ
ತನ್ನ ನಾಮಸ್ಮರಣೆಯೇ ಮನುಜರಿಗೆ
ಮುಕ್ತಿಯ ದಾರಿ ಎಂದವನು ಇವನಲ್ಲ
ಮಾತಿನಲ್ಲೇ ಮಂಡಿಗೆ ತಿನ್ನಿಸಿ
ಮರುಳಾದವರ ಮನ ಗೆದ್ದವನು ಇವನಲ್ಲ

ಇವನು ನನ್ನಂತೆ ನಿಮ್ಮಂತೆ ರಕ್ತ ಮಾಂಸ ಮೂಳೆಗಳ
ದೇಹದವನು ಸತ್ಯವೇ ಇವನ ಆಹಾರ
ಅಹಿಂಸೆಯೇ ಇವನ ಉಸಿರು
ಜಗದ ಶಾಂತಿಯೇ ಇವನ ಗುರಿ
ಅಂದು ನಾವು ಗುಂಡಿಟ್ಟು ಕೊಂದಿದ್ದು ಈ ಗಾಂಧಿಯನ್ನಲ್ಲ
ಅವನ ಆದರ್ಶವನ್ನು ಅವನ ಧ್ಯೇಯವನ್ನು
ಅವನ ಎದೆಗಿಟ್ಟ ಗುಂಡಿನ ಸದ್ದು ಕೇಳಿಸುತ್ತಲೇ ಇದೆ
ಇದ್ದೇ ಇರುತ್ತದೆ
ಆಲಿಸುವ ಕಿವಿಗಳಿರುವವರೆಗೆ...

**ಬಿ. ಎಲ್. ಪಂಚಲಿಂಗಯ್ಯ**
ನಂ. ೭, ಎಂಐಜಿ–೨, ಗ್ರೂಪ್–೧, ಕೆಎಚ್‌ಬಿ ಕಾಲನಿ
ಹೂಟಗಳ್ಳಿ, ಮೈಸೂರು – ೫೭೦ ೦೧೮

ನಮ್ಮ ದೇಶದ ಪ್ರಧಾನಮಂತ್ರಿಗಳು ಕಳೆದ ಫೆಬ್ರವರಿ ೨೪ರಂದು ಉತ್ತರಪ್ರದೇಶದ ಪ್ರಯಾಗರಾಜ್‌ನ ತ್ರಿವೇಣಿ ಸಂಗಮದಲ್ಲಿ ನಡೆದ ಕುಂಭಮೇಳದಲ್ಲಿ ಪುಣ್ಯಸ್ನಾನ ಮಾಡಿದರು. ವಿಷಯ ಇಷ್ಟೇ ಆಗಿದ್ದರೆ; ಅದು ದೇಶದಾದ್ಯಂತ ವೈರಲ್ ಆಗುತ್ತಿರಲಿಲ್ಲ. ಅವರು ಕರ್ಮಚಾರಿಗಳ ಪಾದಪೂಜೆ ಮಾಡಿದ್ದು ವೈರಲ್ ಆಯಿತು. ಕುಂಭಮೇಳದಲ್ಲಿ ಭಾಗವಹಿಸಿದ ಜನರು, ಭಕ್ತರು ಮಾಡಿದ್ದ ಗಲೀಜನ್ನು ಬಾಚಿ, ಸ್ವಚ್ಛ ಕುಂಭಮೇಳಕ್ಕೆ ಕಾರಣೀಭೂತರಾದ ಸಫಾಯಿ ಕರ್ಮಚಾರಿಗಳಲ್ಲಿ ಐವರ ಪಾದಗಳನ್ನು ಕೈಯಾರೆ ತೊಳೆದರು. ಬೆಳ್ಳನೆ ಬಟ್ಟೆಯಿಂದ ಒರೆಸಿ, ಸತ್ಕರಿಸಿದರು. ಅವರಿಗೆ ಶಾಲು ಹೊದೆಸಿ ಕೃತಜ್ಞತೆ ಸಲ್ಲಿಸಿದರು. ಈ ದೃಶ್ಯಗಳು ಎಲ್ಲರ ಕಣ್ಣರಳಿಸಿದವು! ಅನಾಯಾಸವಾಗಿ ಭರಪೂರ ಮೆಚ್ಚುಗೆಯನ್ನೂ ತಂದುಕೊಟ್ಟವು. ಇಂತಹ ಕೆಲಸವನ್ನು ಮಾಡಿದ ಪ್ರಧಾನಿ ಭಾರತದ ಇತಿಹಾಸದಲ್ಲಿ ಮತ್ತೊಬ್ಬರಿಲ್ಲ ಎಂಬ ಖ್ಯಾತಿಗೂ ಪಾತ್ರರಾದರು. ನಂತರ 'ಸ್ವಚ್ಛ ಕುಂಭ್-ಸ್ವಚ್ಛ ಆಭಾರ್' ಕಾರ್ಯಕ್ರಮದಲ್ಲಿ ಮಾತನಾಡಿದ ಪ್ರಧಾನಿಯವರು ಸಫಾಯಿ ಕರ್ಮಚಾರಿಗಳನ್ನು 'ಸ್ವಚ್ಛತಾ ಯೋಧ'ರೆಂದು ಕರೆದರು. ಹೀಗೆ ಕಾಲುತೊಳೆಯುವುದು ಹಿಂದೂ ಭಾರತೀಯರಿಗೆ ಧಾರ್ಮಿಕವಾಗಿ ಶ್ರೇಷ್ಠವಾದುದು. ಅದನ್ನೇ ಪ್ರಧಾನಿಗಳೂ ಮಾಡಿದರು. ಆದರೆ ಕುಂಭಮೇಳದಂತಹ ಆಚರಣೆಯಲ್ಲಿ ಸ್ವಚ್ಛತೆಗಾಗಿ ಶ್ರಮಿಸಿದವರ ಕಾಲುಗಳನ್ನು ತೊಳೆಯುವುದರಲ್ಲಿ 'ದೇವರ ಕೆಲಸಕ್ಕೆ ನೆರವಾದವರು' ಎಂಬ ಧೋರಣೆಯೇ ಇಲ್ಲಿ ಕೆಲಸ ಮಾಡಿದಂತಿದೆ. ಹಾಗಾಗಿಯೇ ಕುಂಭಮೇಳದಲ್ಲಿಯೇ 'ಸ್ವಚ್ಛ ಕುಂಭ್-ಸ್ವಚ್ಛ ಆಭಾರ್' ಕಾರ್ಯಕ್ರಮವನ್ನು ಆಯೋಜಿಸಲು ತೀರ್ಮಾನಿಸಿದಂತಿದೆ. ಜೊತೆಗೆ ಧಾರ್ಮಿಕ ಕ್ಷೇತ್ರಗಳಲ್ಲಿ ಕಸ-ಹೇಸಿಗೆಯನ್ನು ಗುಡಿಸುವುದು ಪುಣ್ಯದ ಭಾಗವಾಗಿಸುವ ಹುನ್ನಾರದಂತೆಯೂ ತೋರುತ್ತದೆ.

# ಸಫಾಯಿ ಕರ್ಮಚಾರಿಗಳಿಗೆ ಪಾದಪೂಜೆ ಸಾಕೆ?

**ರವಿ ಎಂ. ಸಿದ್ಲಿಪುರ**

– ೧ –

**ನಾ**ಗರಿಕ ಸಮಾಜದೊಳಗಿರುವ ಬಹುತೇಕರಿಗೆ ಪೌರಕಾರ್ಮಿಕರ ಬದುಕು ಮುಖ್ಯವಾಗುವುದೇ ಇಲ್ಲ. ಅವರಿಗೆ ಈ ಕಾರ್ಮಿಕರು ತಂತಮ್ಮ ಬೀದಿಗಳನ್ನು ಗುಡಿಸಲು ಮತ್ತು ಚರಂಡಿಗಳಲ್ಲಿದ್ದ ಹೇಸಿಗೆಯನ್ನು ಎತ್ತಿಹಾಕಲು ಬಾರದೇ ಇದ್ದಾಗ ಹಾಗೂ ತಮ್ಮ ಮನೆಯ ಹೇಲುಗುಂಡಿಗಳು ತುಂಬಿದಾಗ ಮಾತ್ರ ನೆನಪಾಗುತ್ತಾರೆ! ಇನ್ನು ಮಾಧ್ಯಮಗಳಿಗೆ, ಸ್ವಚ್ಛ ಭಾರತದ ಹೆಸರಿನಡಿ ಪೊರಕೆ ಹಿಡಿಯುವವರು ಕಾಣುತ್ತಾರೆ! ದಿನನಿತ್ಯ ಮುಂಜಾನೆಯೇ ಎದ್ದು ದುಡಿವ ಪೌರಕಾರ್ಮಿಕರು ಕ್ಯಾಮರಾ ಕಣ್ಣಿಗೆ ಬೀಳುವುದಿಲ್ಲ. ಬಿದ್ದರೂ ಇವರು ಪ್ರತಿಭಟಿಸಬೇಕು ಹಾಗೂ ಮಲದ ಗುಂಡಿಗಳಲ್ಲಿ ವಿಷಾನಿಲ ಕುಡಿದು ಸಾಯಬೇಕು! ಇವು ಮಾಧ್ಯಮಗಳಿಗೆ 'ಬ್ರೇಕಿಂಗ್ ನ್ಯೂಸ್' ಆಗುವುದಿಲ್ಲ. ಇಂತಹ ಕೆಲಸಕ್ಕಾಗಿಯೇ ಪೌರಕಾರ್ಮಿಕರು ಇರಲಿ ಎಂದು ನಿರ್ದಿಷ್ಟಗೊಳಿಸಿರುವಲ್ಲಿ ನಮ್ಮ ಸಾಮಾಜಿಕ ವ್ಯವಸ್ಥೆಯ ಕೊಡುಗೆಯೂ ಅಪಾರವಾಗಿದೆ! ನಗರ ಪ್ರದೇಶಗಳಲ್ಲಿ ದಿನನಿತ್ಯ ದುಡಿಯುವ ಪೌರಕಾರ್ಮಿಕರನ್ನು ವರ್ತಮಾನದ ಆಡಳಿತ ಪ್ರಭುತ್ವಗಳು, ಸಾಹಿತ್ಯ, ಸಾಕ್ಷ್ಯಚಿತ್ರ, ಸಿನಿಮಾಗಳಂತಹ ಕಲಾಭಿವ್ಯಕ್ತಿ ಮಾಧ್ಯಮಗಳು, ವಿಜ್ಞಾನ–ತಂತ್ರಜ್ಞಾನ–ಆಧುನಿಕತೆಗಳು ಪ್ರತಿನಿಧಿಸಿದ ಬಗೆಗಳನ್ನು ಗಂಭೀರವಾಗಿ ಚರ್ಚಿಸಬೇಕಾದ ಅಗತ್ಯತೆ ಇದೆ. ಪರಿಹಾರಗಳನ್ನು ಕಂಡುಕೊಳ್ಳಬೇಕಾದ ತುರ್ತಿದೆ.

– ೨ –

ನಮ್ಮ ದೇಶದ ಪ್ರಧಾನಮಂತ್ರಿಗಳು ಕಳೆದ ಫೆಬ್ರವರಿ ೨೪ರಂದು ಉತ್ತರಪ್ರದೇಶದ ಪ್ರಯಾಗರಾಜ್‌ನ ತ್ರಿವೇಣಿ ಸಂಗಮದಲ್ಲಿ ನಡೆದ ಕುಂಭಮೇಳದಲ್ಲಿ ಪುಣ್ಯಸ್ನಾನ ಮಾಡಿದರು. ವಿಷಯ ಇಷ್ಟೇ ಆಗಿದ್ದರೆ; ಅದು ದೇಶದಾದ್ಯಂತ ವೈರಲ್ ಆಗುತ್ತಿರಲಿಲ್ಲ. ಅವರು ಕರ್ಮಚಾರಿಗಳ ಪಾದಪೂಜೆ ಮಾಡಿದ್ದು ವೈರಲ್ ಆಯಿತು. ಕುಂಭಮೇಳದಲ್ಲಿ ಭಾಗವಹಿಸಿದ ಜನರು, ಭಕ್ತರು ಮಾಡಿದ್ದ ಗಲೀಜನ್ನು ಬಾಚಿ, ಸ್ವಚ್ಛ ಕುಂಭಮೇಳಕ್ಕೆ ಕಾರಣೀಭೂತರಾದ ಸಫಾಯಿ ಕರ್ಮಚಾರಿಗಳಲ್ಲಿ ಐವರ ಪಾದಗಳನ್ನು ಕೈಯಾರೆ ತೊಳೆದರು. ಬೆಳ್ಳನೆ ಬಟ್ಟೆಯಿಂದ ಒರೆಸಿ, ಸತ್ಕರಿಸಿದರು. ಅವರಿಗೆ ಶಾಲು ಹೊದೆಸಿ ಕೃತಜ್ಞತೆ ಸಲ್ಲಿಸಿದರು. ಈ ದೃಶ್ಯಗಳು ಎಲ್ಲರ ಕಣ್ಣರಳಿಸಿದವು! ಅನಾಯಾಸವಾಗಿ ಭರಪೂರ ಮೆಚ್ಚುಗೆಯನ್ನೂ ತಂದುಕೊಟ್ಟವು.

ಇಂತಹ ಕೆಲಸವನ್ನು ಮಾಡಿದ ಪ್ರಧಾನಿ ಭಾರತದ ಇತಿಹಾಸದಲ್ಲಿ ಮತ್ತೊಬ್ಬರಿಲ್ಲ ಎಂಬ ಖ್ಯಾತಿಗೂ ಪಾತ್ರರಾದರು. ನಂತರ 'ಸ್ವಚ್ಛ ಕುಂಭ್–ಸ್ವಚ್ಛ ಆಭಾರ್' ಕಾರ್ಯಕ್ರಮದಲ್ಲಿ ಮಾತನಾಡಿದ ಪ್ರಧಾನಿಯವರು ಸಫಾಯಿ ಕರ್ಮಚಾರಿಗಳನ್ನು 'ಸ್ವಚ್ಛತಾ ಯೋಧ'ರೆಂದು ಕರೆದರು. ಹೀಗೆ ಕಾಲುತೊಳೆಯುವುದು ಹಿಂದೂ ಭಾರತೀಯರಿಗೆ ಧಾರ್ಮಿಕವಾಗಿ ಶ್ರೇಷ್ಠವಾದುದು. ಅದನ್ನೇ ಪ್ರಧಾನಿಗಳೂ ಮಾಡಿದರು. ಆದರೆ ಕುಂಭಮೇಳದಂತಹ ಆಚರಣೆಯಲ್ಲಿ ಸ್ವಚ್ಛತೆಗಾಗಿ ಶ್ರಮಿಸಿದವರ ಕಾಲುಗಳನ್ನು ತೊಳೆಯುವುದರಲ್ಲಿ 'ದೇವರ ಕೆಲಸಕ್ಕೆ ನೆರವಾದವರು' ಎಂಬ ಧೋರಣೆಯೇ ಇಲ್ಲಿ ಕೆಲಸ ಮಾಡಿದಂತಿದೆ. ಹಾಗಾಗಿಯೇ ಕುಂಭಮೇಳದಲ್ಲಿಯೇ 'ಸ್ವಚ್ಛ ಕುಂಭ್ – ಸ್ವಚ್ಛ ಆಭಾರ್' ಕಾರ್ಯಕ್ರಮವನ್ನು ಆಯೋಜಿಸಲು ತೀರ್ಮಾನಿಸಿದಂತಿದೆ. ಜೊತೆಗೆ ಧಾರ್ಮಿಕ ಕ್ಷೇತ್ರಗಳಲ್ಲಿ ಕಸ–ಹೇಸಿಗೆಯನ್ನು ಗುಡಿಸುವುದು ಪುಣ್ಯದ ಭಾಗವಾಗಿಸುವ ಹುನ್ನಾರದಂತೆಯೂ ತೋರುತ್ತದೆ. ಸೈನಿಕರ ಜೀವ ಹಾಗೂ





ಹೆಣಗಳನ್ನಿಟ್ಟುಕೊಂಡು ರಾಜಕೀಯ ಮಾಡುವವರಿಗೆ ಸಫಾಯಿ ಕರ್ಮಚಾರಿಗಳೂ ಯೋಧರಾಗಿ ಕಾಣುವುದರಲ್ಲಿ ಆಶ್ಚರ್ಯವಿಲ್ಲ. ಬಹುತೇಕ ಪ್ರಭುತ್ವಗಳು ದುಡಿಯುವ ಬಹುತೇಕ ವರ್ಗವನ್ನು 'ಯೋಧ'ರಂತೆಯೇ ಪರಿಗಣಿಸುತ್ತವೆ ಎನ್ನಬಹುದು! ಹೀಗೆ ಭಾವನಾತ್ಮಕವಾಗಿ ಸಫಾಯಿಗಳ ಮನಸ್ಸನ್ನು ಗೆಲ್ಲುವ ಮೂಲಕ ಅವರ ವಾಸ್ತವ ಸಮಸ್ಯೆಗಳನ್ನು ಉದ್ದೇಶಪೂರ್ವಕವಾಗಿಯೇ ಮರೆಮಾಚಲಾಗುತ್ತಿದೆ. ವೈರುಧ್ಯವೆಂದರೆ, ಇದೇ ಕುಂಭಮೇಳ ಆರಂಭವಾದಾಗ, ಅಲ್ಲಿ ದುಡಿಯುವ ಪೌರಕಾರ್ಮಿಕರ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಪ್ರತಿಭಟಿಸಿದ್ದ 'ದಲಿತ್ ಸಫಾಯಿ ಮಜ್ದೂರ್ ಸಂಘಟನೆ'ಯ ಸದಸ್ಯರಾದ ದಿನೇಶ್ ಮತ್ತು ಮಾಳವೀಯ ಎಂಬುವವರನ್ನು ಫೆಬ್ರವರಿ ೭ರಂದು ಬಂಧಿಸಲಾಗುತ್ತದೆ. ಕೇವಲ ಪೌರಕಾರ್ಮಿಕರ ಬೇಡಿಕೆಗಳಿಗಾಗಿ ಪ್ರತಿಭಟಿಸಿದವರಿಗೆ 'ರಾಷ್ಟ್ರೀಯ ಭದ್ರತಾ ಕಾಯ್ದೆ'ಯಡಿ ದೂರು ದಾಖಲಿಸುವುದಾಗಿ ಬೆದರಿಕೆ ಹಾಕಿದ್ದಾಗಿ ದಿನೇಶ್ ವಿವರಿಸಿದ್ದಾರೆ. ಪ್ರಧಾನಿಯವರ ಪಕ್ಷದ ರಾಜ್ಯಸರ್ಕಾರವೇ ಪ್ರತಿಭಟಿಸಿದವರನ್ನು ಬಂಧಿಸುತ್ತದೆ. ಆದರೂ ಮಾನ್ಯ ಪ್ರಧಾನಿಯವರು ಸಫಾಯಿ ಕರ್ಮಚಾರಿಗಳ ಪಾದಪೂಜೆ ಮಾಡುತ್ತಾರೆ!

ಕರ್ನಾಟಕ ರಾಜ್ಯ ಸರ್ಕಾರ ಕೂಡ ತನ್ನ ೨೦೧೯ನೇ ಸಾಲಿನ ಬಜೆಟ್‌ನಲ್ಲಿ ರಾಜ್ಯದ ಬಹುತೇಕ ಎಲ್ಲಾ ಜಿಲ್ಲೆಗಳ ಆಯ್ದ ಮಠ ಮಾನ್ಯಗಳಿಗೆ ಹಾಗೂ ಸಮಾಜಸೇವಾ ಸಂಘಟನೆಗಳಿಗೆ ಸುಮಾರು ೬೦ ಕೋಟಿ ರೂ.ಗಳ ಅನುದಾನ ಘೋಷಿಸಿದೆ. ಹಿಂದಿನ ಸರ್ಕಾರಗಳು ಮಠಮಾನ್ಯಗಳಿಗೆ ಉದಾರತೆ ತೋರಿದ್ದವು. ಈ ಬಾರಿಯ ಬಜೆಟ್‌ನಲ್ಲಿ ಹಿಂದೂ ರುದ್ರಭೂಮಿಗಳನ್ನು ಅಭಿವೃದ್ಧಿಪಡಿಸಲು ೨೦ ಕೋಟಿ ರೂ.ಗಳನ್ನು ನೀಡಿದೆ. ಹೀಗೆ ಮಠಮಾನ್ಯ, ಸ್ಮಶಾನಗಳ ಅಭಿವೃದ್ಧಿಗೆ ಒತ್ತು ನೀಡುವ ಸರ್ಕಾರಗಳು ಇಷ್ಟೇ ಪ್ರಮಾಣದ ಅನುದಾನವನ್ನು ಪೌರಕಾರ್ಮಿಕರ ಆರೋಗ್ಯ, ಅವರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಮೀಸಲಿಡುವುದಿಲ್ಲ!

– ೩ –

ದಲಿತ–ಬಂಡಾಯ ಚಳವಳಿಗಳ ಪೂರ್ವದ ಕನ್ನಡ ಸಾಹಿತ್ಯ ಪೌರಕಾರ್ಮಿಕರ ಕುರಿತು ಮಾತಾಡಿದ್ದು ತುಂಬ ಕಡಿಮೆ. ಕುವೆಂಪು ಅವರು ಜಲಗಾರರ ಬದುಕನ್ನು, ಅವರ ಸಾಮಾಜಿಕ ಸಂಕಷ್ಟಗಳನ್ನು ವಸ್ತುವನ್ನಾಗಿಸಿಕೊಂಡು ೧೯೨೮ರಲ್ಲಿ 'ಜಲಗಾರ' ನಾಟಕವನ್ನು ರಚಿಸಿದರು. ಇಂಗ್ಲಿಷಿನಲ್ಲಿ ಸ್ವೀಪರ್ ಎಂಬರ್ಥದ ಪೌರಕಾರ್ಮಿಕನನ್ನು, ಕನ್ನಡದಲ್ಲಿ ಜಲಗಾರ, ಭಂಗಿ, ಝಾಡಮಾಲಿ ಎಂಬ ಹಲವು ಹೆಸರುಗಳಿಂದಲೂ ಕರೆಯಲಾಗುತ್ತಿದೆ. ಇಂಥವರ ಬಗ್ಗೆ ಸಾಹಿತ್ಯ ಗಮನಹರಿಸಬೇಕಾಗಿದೆ ಎನ್ನುವುದನ್ನು ಕುವೆಂಪು ಅವರು ಆ ಕಾಲದಲ್ಲಿಯೇ ಪ್ರತಿಪಾದಿಸಿದ ಮಾನವತಾವಾದಿ. ಅವರ ಈ ನಾಟಕ ಸಾಮಾಜಿಕವಾಗಿ ಶೋಷಿತರಾದ ಜಲಗಾರರನ್ನು ಭಾರತೀಯ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆ ಬಳಸಿಕೊಂಡಿದ್ದನ್ನು ಅನಾವರಣಗೊಳಿಸುತ್ತದೆ.

ನಾಟಕದಲ್ಲಿ ಕುವೆಂಪು ಅವರು ಶಿವನೊಂದಿಗೆ ಜಲಗಾರನನ್ನು ಸಮೀಕರಿಸಿದ್ದಾರೆ. ಈ ನಾಟಕದ ಜಲಗಾರ ಪಾತ್ರವು : ಶಿವನಿಗೆ "ಹೇ ದೇವ, ನೀನು ಮತ್ತೆಲ್ಲಿರುವೆ?" ಎಂದು ಪ್ರಶ್ನಿಸಿದಾಗ ಶಿವ, "ಬೀದಿ ಗುಡಿಸುವ ಬಡವನೆದೆಯಲ್ಲಿ ನಾನಿರುವೆ! ...ನೀನೆನ್ನ ನಿಜಭಕ್ತನಾಗಿರುವೆ. ಅದಕಾಗಿ ಕಲ್ಪನೆಯ ರೂಪವನು ತೆಗೆದೊಗೆದು ಬಂದಿಹೆನು ನೋಡಲ್ಲಿ! ಚಂದ್ರನಂ ಬಿಸುಟಿಹೆನು ಗಗನಕ್ಕೆ! ಗಂಗೆಯನ್ನೆಸೆದಿಹೆನು ಹಿಮಗಿರಿಗೆ! ಹಾವುಗಳ ಪಾತಾಳ ಕಟ್ಟಿಹೆನು! ಹಣೆಗಣ್ಣ ಹಂಚಿಹೆನು ನೇಸರ್ ಅನಲ್ಗಳಿಗೆ! ಭಯಂಕರದ ಮಸಣದಲಿ ಬಿದ್ದಿಹುದು ಜೋಯಿಸರು ಹಚ್ಚಿದಾ ಎನ್ನ ಮೈಬೂದಿ! ಚಟ್ಟಗಳ ಕಟ್ಟುತಿದೆ ಅವರೆನಗೆ ತೊಡಿಸಿದಾ ಯಜ್ಞೋಪವೀತ! ಅವರಿತ್ತ ಪೊರಕೆಯಂದದ ಶೂಲ ಗುಡಿಸುತಿದೆ ಬ್ರಹ್ಮಗಳ ಬೀದಿಯನು! ಶಾಸ್ತ್ರಿಗಳು ಶಿವಗಿತ್ತ ದಾನಗಳು ತೊಲಗೆ, ಉಳಿಯುವನು ಜಗದ ಜಲಗಾರ! ಊರ ತೋಟಿಯು ನೀನು; ಜಗದ ತೋಟಿಯು ನಾನು! ಬಾ ಎನ್ನ ಸೋದರನೆ. ನೀನೆನ್ನ ನಿಜಭಕ್ತ! ನಿನ್ನದೇ ಶಿವಭಕ್ತಿ! ನೀನೇ ಶಿವಭಕ್ತ! ನೀನೆ ನಾನಾಗಿಹೆನು! ನಾನೆ ನೀನಾಗಿರುವೆ!" ಎನ್ನುತ್ತಾನೆ.

ಈಗಿನ ನಮ್ಮ ದೇಶದ ಪ್ರಧಾನಿ ಪೌರಕಾರ್ಮಿಕರ ಕಾಲು ತೊಳೆದು ಪ್ರಚಾರ ಗಿಟ್ಟಿಸಿಕೊಳ್ಳುತ್ತಾರೆ. ಪ್ರಚಾರಪ್ರಿಯತೆಯನ್ನು ಬಿಟ್ಟು ಮಲ ಬಳಿಯುವವರ ಮರುವಸತಿಗೆ ಹಣ ಬಿಡುಗಡೆ ಮಾಡುವುದಾಗಿ, ಇವರಿಗಾಗಿ ಮೀಸಲಿಟ್ಟ ಹಣವನ್ನು ಪೂರ್ಣವಾಗಿ ವಿನಿಯೋಗಿಸಿ, ಅವರ ಆರ್ಥಿಕ ಸ್ಥಿತಿಗತಿಗಳನ್ನು ಕಿಂಚಿತ್ತಾದರೂ ಸುಧಾರಿಸುವುದಾಗಿ, ಇನ್ನು ಮುಂದೆ ಮಲದ ಗುಂಡಿಗಳಲ್ಲಿ ಸಫಾಯಿ ಕರ್ಮಚಾರಿಗಳನ್ನು ಇಳಿಯಲು ಬಿಡುವುದಿಲ್ಲ – ಎಂಬಂತಹ ವಿಷಯಗಳ ಬಗ್ಗೆ ದಿಟ್ಟ ನಿರ್ಧಾರ ತೆಗೆದುಕೊಳ್ಳುವ ಎಲ್ಲಾ ಅಧಿಕಾರಗಳು ಅವರಲ್ಲಿಯೇ ಇದ್ದವು. ಆದರೂ ಸಾಧ್ಯವಾಗಲಿಲ್ಲ. ಬದಲಾಗಿ ತಮ್ಮ ಅಧಿಕಾರಕ್ಕಾಗಿ ಅವರನ್ನು ಸಾಯಿಸಲು ತೀರ್ಮಾನಿಸಿದಂತೆ ಯೋಧರಿಗೆ ಹೋಲಿಸಿದರು. ಇಂತಹ ಯೋಚನೆ ಹಾಗೂ ಕಾರ್ಯಗಳಲ್ಲಿಯೇ ಕವಿ ಹಾಗೂ ಪ್ರಭುಗಳು ಜಲಗಾರರನ್ನು ಗುರುತಿಸುವ ನೆಲೆಗಳು ತಿಳಿಯುತ್ತವೆ. ಪೌರಕಾರ್ಮಿಕರಂತಹ ಅಲಕ್ಷಿತ ವರ್ಗಗಳಿಗೆ ಕುವೆಂಪು ಪ್ರತಿಪಾದಿಸುವ ಶಿವನಂಥ ಮನುಷ್ಯ ಹೃದಯಿ 'ಪ್ರಜಾಸೇವಕ'ನ ಅವಶ್ಯಕತೆಯಿದೆ.

ಪೌರಕಾರ್ಮಿಕರ ದಾರುಣ ಬದುಕಿನ ಬಗೆಗೆ ಗಮನ ಸೆಳೆವ ಕನ್ನಡದ ಇನ್ನೆರಡು ಕೃತಿಗಳೆಂದರೆ : ಒಂದು – ದು. ಸರಸ್ವತಿಯವರ 'ಬಚ್ಚೀಸು'. ಮತ್ತೊಂದು – ದಯಾನಂದ ಟಿ. ಕೆ. ಅವರ 'ರಸ್ತೆ ನಕ್ಷತ್ರ'. ಚಳವಳಿ, ಹೋರಾಟದ ಪ್ರೇರಣೆಯಿಂದ ರೂಪುಗೊಂಡ ದು. ಸರಸ್ವತಿಯವರ 'ಬಚ್ಚೀಸು' ಕಥಾಸಂಕಲನದಲ್ಲಿ 'ಬಚ್ಚೀಸು', 'ಹೊನ್ನಹೇಲು' ಕತೆಗಳು ನಗರ ಪ್ರದೇಶದ ಪೌರಕಾರ್ಮಿಕರ ಪಾಡನ್ನು

ತೆರೆದಿಡುತ್ತವೆ. ಆರಂಭದಲ್ಲಿ ದಯಾನಂದ ಟಿ. ಕೆ. ವೈಚಾರಿಕ ತತ್ವಸಿದ್ಧಾಂತಗಳ ಪ್ರಭಾವಗಳಿಂದ ಪ್ರೇರಿತರಾದವರು. ಕ್ರಮೇಣ ಜನಸಾಮಾನ್ಯರ ಪ್ರಾಕ್ಟಿಕಲ್ ಬದುಕಿನೊಂದಿಗೆ ಅವುಗಳ ಅನುಸಂಧಾನ ಕಷ್ಟವೆಂದು ಅರಿತವರು. ಹಾಗಾಗಿ ಸಿದ್ಧಾಂತಗಳು ನಿರ್ಮಿಸಿರುವ ಕಂದಕವನ್ನು ಜಿಗಿದು ಸಾಮಾನ್ಯರೊಂದಿಗೆ ಬೆರೆಯುತ್ತಾರೆ. ಅದರ ಪರಿಣಾಮವಾಗಿ ಕನ್ನಡದಲ್ಲಿ ವಿಶಿಷ್ಟವಾದ 'ರಸ್ತೆ ನಕ್ಷತ್ರ' ಮಿನುಗಿದೆ. ಇದರಲ್ಲಿನ 'ಚಿನ್ನ ತೆಗೆಯುತ್ತಿದ್ದ ಕೈಗಳು ಸಾರೂ.. ಇವತ್ತು ನೋಡಿ..!' ಮತ್ತು 'ಲಿಂಗಾಯಿತನಾಗಿ ಟಾಯ್ಲೆಟ್ ತೊಳೆಯೋ ಕೆಲ್ಸ ಮಾಡ್ತಿದ್ದೀಯ' ಎಂಬ ಬರಹಗಳು ಸಫಾಯಿ ಕರ್ಮಚಾರಿಗಳ ಜೀವನ ಕತೆಯನ್ನು ಹೇಳುತ್ತವೆ.

ಈ ಎರಡೂ ಕೃತಿಗಳಲ್ಲಿನ ನಾಲ್ಕು ಕತೆ / ಬರಹಗಳ ಕ್ರಿಯಾಭೂಮಿ ಬೆಂಗಳೂರು. ಈ ಬೃಹತ್ ಮಾಯಾನಗರಿಯಲ್ಲಿನ ಕೊಳೆಗೇರಿಗಳಲ್ಲಿ ಬದುಕುತ್ತಿರುವ ನೂರಾರು ಜೀವಂತ ಪಾತ್ರಗಳ ಕತೆಯನ್ನು ಮನ ಕಲಕುವಂತೆ ಪರಿಚಯಿಸುತ್ತವೆ. ಇವರ ಶೋಷಿತ ಪ್ರತಿನಿಧಿಗಳಾಗಿಯೇ ನರ್ಸಿಮ್ಮ (ನರಸಿಂಹ), ಆಂಜಿನಮ್ಮ, ಲಕ್ಷ್ಮಿ, ಕೆ.ಜಿ.ಎಫ್.ನಲ್ಲಿ ಮಲಹೊರುವ ಪ್ರಸಾದ್, ಮೆಜೆಸ್ಟಿಕ್ ಟಾಯ್ಲೆಟ್ ವರ್ಕರ್ ಮಂಜು – ಅಂಥವರು ಈ ಬರಹಗಳಲ್ಲಿ ಉಸಿರಾಡುತ್ತಿದ್ದಾರೆ. 'ಬಚ್ಚೀಸು' ಕತೆಯು ಪೌರಕಾರ್ಮಿಕರ ವೃತ್ತಿಯನ್ನೇ ಮಾಡುತ್ತಾ, ಕೊಳಚೆ ಪ್ರದೇಶದಲ್ಲಿ ವಾಸಿಸುವ ಕುಟುಂಬವೊಂದರ ಬಡತನದ ಜೀವನವನ್ನು ಚಿತ್ರಿಸಿದೆ. ಅದರೊಂದಿಗೆ ಪೌರಕಾರ್ಮಿಕರನ್ನು ಪರ್ಮನೆಂಟ್ ಆಗಿ ನೇಮಕ ಮಾಡಿಕೊಳ್ಳುವ ಆಸೆ ತೋರಿಸಿ, ದುಡಿಸಿಕೊಳ್ಳುತ್ತಿದ್ದ ಗುತ್ತಿಗೆದಾರರ ಕ್ರೌರ್ಯವನ್ನು ನಿರೂಪಿಸುತ್ತದೆ. ಪೌರಕಾರ್ಮಿಕರು ಶಿಕ್ಷಿತರಾಗಬೇಕು, ಸಂಘಟಿತರಾಗಬೇಕು, ಹೋರಾಟ ಮಾಡಬೇಕು – ಎಂಬ ಅಂಶಗಳನ್ನು ಕಾಮ್ರೇಡ್ ಉನ್ನಿಕೃಷ್ಣನ್ ಮೂಲಕ, ಸಾಮಾಜಿಕ ಸಮಾನತೆಯ ಬದುಕಿಗಾಗಿ ಎಚ್ಚರಗೊಳ್ಳಬೇಕೆಂಬುದನ್ನು ಪ್ರತಿಪಾದಿಸುತ್ತದೆ. ಮೇಸ್ತ್ರಿ ಕೆಲಸಗಾರರಿಗೆ ಆಯುಧ ಪೂಜೆಯ ಭಕ್ಷೀಸು ಕೊಡದೆ 'ನಾಯ್ಗಳು' ಎಂದು ನಿಂದಿಸಿದ್ದಕ್ಕೆ, ಆಂಜಿನಮ್ಮ ಅವನಿಗೆ ಸ್ವೀಟಿನ ಪ್ಯಾಕೇಟ್‌ನ್ನು ಭಕ್ಷೀಸಾಗಿ ಕೊಟ್ಟು, ತಣ್ಣಗೆ ಬೆವರಿಳಿಸುವಂತೆ ಆಡುವ ಮಾತುಗಳು ದುಷ್ಟ ವ್ಯವಸ್ಥೆಯನ್ನು ವಿರೋಧಿಸುತ್ತವೆ. ಲಕ್ಷ್ಮಿ ತಾಯಿಯಾಗುವ ಹೊತ್ತಿಗೆ ತಾನು ಬಾಲ್ಯದಲ್ಲಿ ಶಾಲೆಗೆ ಹೋಗದೆ ಕಸಗುಡಿಸುವ ತನ್ನವ್ವ ಆಂಜಿನಮ್ಮನೊಂದಿಗೆ ಹೋಗುತ್ತಿದ್ದರ ಬಗ್ಗೆ ಕೊರಗುತ್ತಾಳೆ. ಆದರೆ ತನಗೆ ಹುಟ್ಟಿದ ಮಗನ ಕೈಬೆರಳುಗಳು ಅಂಟಿಕೊಂಡಿದ್ದರೂ ಅದನ್ನು ದೇವರು ಕೊಟ್ಟ 'ಬಚ್ಚೀಸು' ಎಂದೇ ಭಾವಿಸಿ: "ಈ ಮಗನ ಸ್ಕೂಲ್‌ಗೆ ಕಳ್ಸೇ ತೀರ್ತೀನಿ, ಯಾಕೇಳು? ಅದ್ಕಿರ ಎಲ್ಡ್ ಬೆಳ್‌ನಾಗ್ ಪೆನ್ನೆ ಇಡ್ಯಕಾಗಾದು; ಪರ್ಕೆನಲ್ಲ" ಅನ್ನುತ್ತಾಳೆ. ಹೀಗೆ ಕತೆ ಅಕ್ಷರದ ಕಡೆಗೆ ಲಕ್ಷ್ಮಿ ಅಂತವರನ್ನು ಕೈಹಿಡಿದು ನಡೆಸುತ್ತದೆ.

ಹೀಗೆಯೇ 'ಚಿನ್ನ ತೆಗೆಯುತ್ತಿದ್ದ ಕೈಗಳು ಸಾರೂ.. ಇವತ್ತು ನೋಡಿ..!' ಮತ್ತು 'ಲಿಂಗಾಯಿತನಾಗಿ ಟಾಯ್ಲೆಟ್ ತೊಳೆಯೋ ಕೆಲ್ಸ ಮಾಡ್ತಿದ್ದೀಯ'– ಎಂಬ ಬರಹಗಳು ಒಂದು ಹೊತ್ತಿನ ತುತ್ತಿಗಾಗಿ ಕೆ.ಜಿ.ಎಫ್.ನಲ್ಲಿ ಮಲಹೊರುವ ಪ್ರಸಾದ್, ಮೆಜೆಸ್ಟಿಕ್ ಟಾಯ್ಲೆಟ್ ವರ್ಕರ್ ಮಂಜು– ಅವರ ಬದುಕಿನ ಬಂಡಿ ಸಾಗುತ್ತಿರುವುದನ್ನು ಮಂಡಿಸುತ್ತವೆ. ಪ್ರಸಾದ್ ಕಕ್ಕಸ್ಸು ಗುಂಡಿ ಬಳಿಯುವವರು ಬಗ್ಗೆ: "ನಲವತ್ತರ ಮೇಲೆ ಬದುಕೋ ಗಂಡು ಒಬ್ಬನಾದ್ರೂ ಇದಾನಾ ನಮ್ ಜೊತೆ, ಉಹುಂ. ಏನಾಗ್ತದೆ.. ಆ ಗುಂಡಿಗಿಳಿದು ಕೆಲಸ ಮಾಡಿ ಮಾಡಿ ಆ ಗಲೀಜು ಕೆಲಸಕ್ಕೆ ಬರಬಾರದ ಕಾಯಿಲೆಗಳೆಲ್ಲ ಬತ್ತವೆ ಸಾರೂ.. ಇವಾಗ ಒಂದು ಕೆಲಸ ಮಾಡನ ಸಾರೂ.. ನಾಲಕ್ ಕಲ್ಲು ತಗಂಡು ಮ್ಯಾಕೆ ಚಿಮ್ಮನ.. ಆ ನಾಕು ಕಲ್ಲಲಿ ೩ ಕಲ್ಲು ಯಾರಾದ್ರೂ ಗಂಡ ಇಲ್ಲದೋಳ ಮನೆ ಮೇಲೆ ಹೋಗಿ ಬೀಳ್ತವೆ ಇಲ್ಲಿ. ಯಾರೂ ಬದುಕಲ್ಲ ಸಾರೂ. ೪೦ ವಯಸ್ಸು ಆಗೋಕೆ ಮುಂಚೇನೇ ಎಲ್ಲಾರೂ ಏನಾರಾ ಕಾಯಿಲೆ ಬಂದು ಮಣ್ಣು ಸೇರ್ಕತರೆ" ಎಂದು ಅವಧಿಪೂರ್ವ ಲೈಫ್ ವ್ಯಾಲಿಡಿಟಿಯನ್ನು ನೊಂದ ಧ್ವನಿಯಲ್ಲಿ ಹೇಳಿಕೊಂಡಿದ್ದಾರೆ. ಆ ಧ್ವನಿಯಲ್ಲಿ ಎಲ್ಲವನ್ನೂ ಸುಟ್ಟು ಹಾಕಬಲ್ಲ ಬೆಂಕಿಯ ಕೆಂಡದುಂಡೆಗಳೇ ಅಡಗಿವೆ! ಮೇಲೆ ಉಲ್ಲೇಖಿಸಿದ ಬರಹಗಳ ಭಾಷೆ ಅವರವರ ಒಡಲಾಳದಿಂದ ಬಂದಿದ್ದಾಗಿದೆ. ಹಾಗಾಗಿ ಬರಹಗಳಲ್ಲಿ ಕೃತಕತೆ ಕಾಣಿಸುತ್ತಿಲ್ಲ. ಇವರೆಲ್ಲರಿಗೂ ಮೂಲಭೂತವಾಗಿ ಸಾಮಾಜಿಕ ಮಾನ್ಯತೆ, ಆರ್ಥಿಕ ಭದ್ರತೆ ಬೇಕಾಗಿದೆ. ಆದರೆ, ಇವರ ಸಮಸ್ಯೆಗಳು ನಗರಗಳು ಬೆಳೆದಂತೆ, ದಿನೇದಿನೇ ಹೆಚ್ಚುತ್ತಲೇ ಇವೆ. ಅವುಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಬೇಕೆ ವಿನಾ ಪಾದಪೂಜೆ ಮಾಡುವುದರಿಂದ ಯಾವುದೇ ಉಪಯೋಗವಿಲ್ಲ. ತನ್ನ ದೊಡ್ಡತನದ ಪ್ರದರ್ಶನಕ್ಕಾಗಿ ಕಾಲುಗಳನ್ನು ತೊಳೆಯಬೇಕಷ್ಟೆ!

– ೪ –

ಪೌರಕಾರ್ಮಿಕರ ಬದುಕನ್ನು ದೃಶ್ಯಮಾಧ್ಯಮದಲ್ಲಿ ಸಮಾಜದ ಮುಂದೆ ಗಂಭೀರವಾಗಿ ಮಂಡಿಸಿದವರು ತಮಿಳುನಾಡಿನ ಸಾಕ್ಷ್ಯಚಿತ್ರ ನಿರ್ದೇಶಕಿ ದಿವ್ಯಾ ಭಾರತಿಯವರು. ಇವರ 'ಕಕ್ಕೂಸ್' ನಮ್ಮ ಸುತ್ತಲಿನ ಪೌರಕಾರ್ಮಿಕರ ಜಗತ್ತನ್ನು ಪರದೆಯ ಮೇಲೆ ಪರಿಣಾಮಕಾರಿಯಾಗಿ ತೆರೆದಿಟ್ಟಿದೆ. ಇದು ಜನಪ್ರಿಯ ಸಿದ್ಧಮಾದರಿಯ ಕಲಾಪ್ರಕಾರ, ಮನರಂಜನೆ, ಉದ್ಯಮ, ಹಣ ಗಳಿಕೆಯಿಂದ ದೂರ ನಿಂತು ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸಿದ ಸಾಕ್ಷ್ಯಚಿತ್ರ, ಕಲಾವಿದರು ಪೌರಕಾರ್ಮಿಕರಾಗಿ ಅಭಿನಯಿಸಿದ ಸಿನಿಮಾವೊಂದು ಕನ್ನಡದಲ್ಲಿ ತೆರೆಕಂಡಿತು. ಅದು ಬಿ.ಎಂ. ಗಿರಿರಾಜ್ ನಿರ್ದೇಶನ ಮಾಡಿರುವ 'ಅಮರಾವತಿ' ಸಿನಿಮಾ. ಈ ಎರಡೂ ಚಿತ್ರಗಳು ದೃಶ್ಯಮಾಧ್ಯಮದಲ್ಲಿ ಸಫಾಯಿ ಕರ್ಮಚಾರಿಗಳ ಬದುಕನ್ನು, ಸಮಸ್ಯೆ, ಸವಾಲುಗಳನ್ನು ಯಥಾವತ್ತಾಗಿ ತೋರಿಸಿದವು.

ತಮಿಳುನಾಡಿನ ಚೆನ್ನೈ, ಮಧುರೆ, ಕೊಯಮತ್ತೂರ್, ತಿರುನಲ್ವೇಲಿ, ತಿರುಮಂಗಲಮ್, ಪಡುಕೊಟ್ಟಾಯ್–





## ಸೀಮಿತ

ಸುತ್ತಮುತ್ತಲ
ಕತ್ತಲನ್ನೆಲ್ಲ
ದಬ್ಬಿ ಕಳಿಸಿತು ಆಚೆಗೆ
ಆದರೆ
ತನ್ನ ಬುಡದಲ್ಲಿ
ಉಳಿದ
ಕತ್ತಲು ಕಾಣಲಿಲ್ಲ ಹಣತೆಗೆ

ಶಿವಮೊಗ್ಗ ಗೀತಾಶಾಸ್ತ್ರಿ
ಬೆಂಗಳೂರು – ೫೬೦ ೦೨೮

ಇಂತಹ ಹಲವು ನಗರ ಪ್ರದೇಶಗಳಲ್ಲಿರುವ ಸಫಾಯಿ ಕರ್ಮಚಾರಿಗಳನ್ನೇ ನೇರವಾಗಿ ಮಾತನಾಡಿಸುವ 'ಕಕ್ಕೂಸ್' ಅನ್ನು ೨೦೧೭ರಲ್ಲಿ ಚಿತ್ರೀಕರಿಸಲಾಗಿದೆ. ಇದು ೧೦೯ ನಿಮಿಷದ ಚಿತ್ರ. ಇದನ್ನು ತಮಿಳುನಾಡಿಗೆ ಸಂಬಂಧಿಸಿದ ಸಾಕ್ಷ್ಯಚಿತ್ರವೆನ್ನುವುದಕ್ಕಿಂತ; ಭಾರತದ ಎಲ್ಲಾ ನಗರಗಳಲ್ಲಿರುವ ಸಫಾಯಿ ಕರ್ಮಚಾರಿಗಳ ಧಾರುಣ ಸ್ಥಿತಿಗತಿಯ ನೈಜ ಅನಾವರಣ ಎಂದರೂ ತಪ್ಪಾಗುವುದಿಲ್ಲ. ಈ ಚಿತ್ರವು "ಮಲದ ತೊಟ್ಟಿಯಲ್ಲಿನ ಸಾವುಗಳಿಗೆ ಸಂಬಂಧಿಸಿದಂತೆ ನಿಮ್ಮ ಮೌನ ಪಿತೂರಿಗೆ" ಎಂಬ ಅರ್ಪಣೆಯ ಬರಹದೊಂದಿಗೆ ಆರಂಭವಾಗುತ್ತದೆ. ಈ ಮಾತು ನಾಗರಿಕ ಸಮಾಜದ ಪ್ರತಿಯೊಬ್ಬರೂ ತಲೆತಗ್ಗಿಸುವಂತೆ ಮಾಡುತ್ತದೆ!

ಚಿತ್ರದಲ್ಲಿ ಇಳಿವಯಸ್ಸಿನ ತಾಯಿಯೊಬ್ಬಳು ತನ್ನೆಲ್ಲಾ ನೋವು, ಅವಮಾನಗಳನ್ನು ಒಟ್ಟುಮಾಡಿ ಆವೇಶದಿಂದ "ಯಾಕೆ ಬಡವರ ಮಕ್ಕಳೇ ಚರಂಡಿಯಲ್ಲಿ ಇಳಿಬೇಕು? ನಿಮ್ಮ ಮಕ್ಕಳು ಓದಿ ಡಾಕ್ಟರ್ ಆಗ್ತಾರೆ, ವಕೀಲರಾಗ್ತಾರೆ, ಎಂಜಿನಿಯರ್ ಆಗ್ತಾರೆ. ನಮ್ಮ ಮಕ್ಕಳು ಮಾತ್ರ ಚರಂಡಿಯಲ್ಲಿ ಇಳಿದು ಮಲ ಬಾಚುತ್ತಾರೆ. ನಿಮ್ಮಿಂದ ಕಟ್ಟಿಕೊಂಡಿರುವ ಚರಂಡಿಯನ್ನು ನಿಮ್ಮ ಮಕ್ಕಳೇ ಸ್ವಚ್ಛಗೊಳಿಸಲಿ. ಅದಕ್ಕೆ ನನ್ನ ಮಕ್ಕಳನ್ನು ಯಾಕೆ ಕರೆಯುತ್ತೀರಿ?" ಎಂದು ಪ್ರಶ್ನಿಸುತ್ತಾಳೆ. ಅವರ ಈ ಮಾತುಗಳಿಗೆ ನಾಗರಿಕ ಸಮಾಜದವರು ಎಂದಾದರೂ ಉತ್ತರಿಸುವುದಕ್ಕೆ ಸಾಧ್ಯವಾ? ಚಿತ್ರ ಯಾವುದೇ ಸಲಕರಣೆಗಳಿಲ್ಲದೆ ಚರಂಡಿಗಳಿಗೆ ಇಳಿವ, ಮಲದ ಗುಂಡಿಗಳಿಗೆ ಇಳಿದು ಸತ್ತವರ ಹಾಗೂ ಅವರ ಸಾವಿಗೆ ಸರ್ಕಾರ ನೀಡಿದ ಬಿಡಿಗಾಸಿನಲ್ಲಿ ಅಧಿಕಾರಿಗಳು ಕಿತ್ತುಕೊಳ್ಳುವ, ತನ್ನ ಮಕ್ಕಳಿಗೆ ಬಟ್ಟೆ ಕೊಡಿಸಬೇಕು ಹಣ ಕೊಡಿ ಎಂದು ಕೇಳುವ ಟಾಯ್ಲೆಟ್ ಕ್ಲೀನರ್ ಒಬ್ಬರ ಕಣ್ಣೀರು, ಮಲದ ಗುಂಡಿಯಲ್ಲಿ ಜೀವ ಬಿಟ್ಟ ವ್ಯಕ್ತಿಯ ಹೆಂಡತಿ, ಮಕ್ಕಳು, ಅವರ ಪರಿಸರ, ರಾಜಕಾರಣಿಗಳ ಒಣ ಭಾಷಣ, ಗುತ್ತಿಗೆದಾರರ ಕ್ರೌರ್ಯ – ಈ ಎಲ್ಲಾ ಸಂಗತಿಗಳನ್ನು ಎಳೆಎಳೆಯಾಗಿ ಬಿಚ್ಚಿಡುತ್ತದೆ. ಇವುಗಳನ್ನು ನೋಡುವುದಕ್ಕೇ ಸಾಧ್ಯವಾಗುವುದಿಲ್ಲ. ಇನ್ನೂ ಮಾಡುವವರ ಗತಿ? ಇವರಿಗೆ ಆಧುನಿಕ ನಗರ–ನಾಗರಿಕ ಸಮಾಜ ಕೊಟ್ಟಿದ್ದಾದರೂ ಏನು? ಅಂದರೆ ಕೇವಲ ರೋಗ, ಸಾವು, ಅಸಮಾನ ಸಾಮಾಜಿಕ ಅಸ್ತಿತ್ವ , ಬಡತನ, ಹಸಿವುಗಳಷ್ಟೆ! ಇಂತಹ ಗಂಭೀರ ಸಮಸ್ಯೆಗಳನ್ನು ಇಟ್ಟುಕೊಂಡು 'ಪ್ರಪಂಚ ಭಾರತದತ್ತ ನೋಡುತ್ತಿದೆ', 'ವಿಶ್ವಗುರು ಭಾರತ', 'ಡಿಜಿಟಲ್ ಇಂಡಿಯಾ', 'ಸ್ವಚ್ಛ ಭಾರತ' ಎಂದರೆ ಏನು ಬಂತು? ಪೌರಕಾರ್ಮಿಕರ ಸಮಸ್ಯೆಗಳನ್ನು ಚಿತ್ರಿಸಿ, ಬಿಡುಗಡೆ ಮಾಡಿದ್ದಕ್ಕೆ ನಮ್ಮ ರಾಜಕೀಯ ವ್ಯವಸ್ಥೆ ದಿವ್ಯಾ ಭಾರತಿಯವರನ್ನು ಬಂಧಿಸಲು ನೆರವಾಯಿತು! ಹೀಗೆ ನಮ್ಮ ಸಮಾಜದಲ್ಲಿ ಇಲ್ಲದವರ ಬಗ್ಗೆ; ವಾಸ್ತವ ಸ್ಥಿತಿಗತಿಗಳ ಕುರಿತು ಪ್ರಶ್ನಿಸುವ ಮತ್ತು ಮಾತಾಡುವವರನ್ನೇ ಮೆಟ್ಟುವಂತಹ ವಾತಾವರಣ ನಿರ್ಮಾಣವಾಗಿದೆ!

ಪ್ರಸ್ತುತ ಸಮಾಜದಲ್ಲಿನ ಸಫಾಯಿ ಕರ್ಮಚಾರಿಗಳ ಬದುಕನ್ನು ನಿರೂಪಿಸುವ 'ಅಮರಾವತಿ' ಚಿತ್ರ ಬೃಹತ್ ಬೆಂಗಳೂರನ್ನು ಕೇಂದ್ರವಾಗಿಟ್ಟುಕೊಂಡಿದೆ. "ನಾವು ಕ್ರಾಂತಿ ಮಾಡಲಿಕ್ಕೆ ಹೊರಟಿಲ್ಲ. ಒಂದು ಡೀಸೆಂಟ್ ಬದುಕನ್ನು ಬದುಕಲಿಕ್ಕೆ ಅವಕಾಶ ಮಾಡಿಕೊಡಿ ಅಂತ ಕೇಳುತ್ತಾ ಇದ್ದೇವೆ" ಎನ್ನುವ ಪೌರಕಾರ್ಮಿಕರ ಮಾತು 'ಅಮರಾವತಿ' ಚಿತ್ರದಲ್ಲಿ.



ಈ ಮಾತಿನಲ್ಲಿ ಸಾಮಾಜಿಕ ನ್ಯಾಯದ ಪ್ರಶ್ನೆಯೇ ಅಡಗಿದೆ. ಜೊತೆಗೆ, ಸಂವಿಧಾನದ ಆಶಯವನ್ನು ಪ್ರಭುತ್ವ ಸರಿಯಾಗಿ ನಿರ್ವಹಿಸಿಲ್ಲ ಎಂಬುದನ್ನೂ ಧ್ವನಿಸುತ್ತಿದೆ. ಇಷ್ಟೇ ಅಲ್ಲದೆ, ಅಭಿವೃದ್ಧಿ ಎಂಬ ಹುಸಿತನದ ಮುಖವಾಡಗಳನ್ನು ಕಳಚುತ್ತಲೇ ಅದರ ಪಾಲುದಾರರ ಬಗ್ಗೆ ಪ್ರಶ್ನೆ ಎತ್ತುತ್ತದೆ. ಜೊತೆಗೆ ನಗರೀಕರಣದ ಕೊಡುಗೆಗಳಾದ ಕಸದ ರಾಶಿ, ಕೊಳಚೆ ನೀರು ಇವುಗಳಿಗೆ, ನಗರ ಪ್ರದೇಶದ ಪ್ರತಿಯೊಬ್ಬರೂ ಕಾರಣ ಎನ್ನುವುದನ್ನು ಹೇಳುತ್ತದೆ. ಇವುಗಳೊಂದಿಗೆ ನಮ್ಮ ವ್ಯವಸ್ಥೆಯ ಕ್ರೂರ ಮುಖಗಳನ್ನು ಅನಾವರಣ ಗೊಳಿಸುತ್ತದೆ.

– ೫ –

ಆರಂಭದಿಂದಲೂ ಸಫಾಯಿ ಕರ್ಮಚಾರಿಗಳು ಅಸ್ಪೃಶ್ಯ ವರ್ಗಕ್ಕೆ ಸೇರಿದವರೇ ಆಗಿದ್ದಾರೆ. ತಮ್ಮ ಬದುಕಿನ ಅಸ್ತಿತ್ವಕ್ಕಾಗಿ, ಹಸಿವು – ಅಭದ್ರತೆಗಳ ವಿರುದ್ಧ ದಿನನಿತ್ಯ ಹೋರಾಡುತ್ತಿದ್ದ ಅಸಂಖ್ಯಾತ ಅಸ್ಪೃಶ್ಯರು ಝಾಡಮಾಲಿ ವೃತ್ತಿಯನ್ನು ಅನಿವಾರ್ಯವಾಗಿ ಒಪ್ಪಿಕೊಂಡಿದ್ದಾರೆ. ಇಂದಿಗೂ ವ್ಯವಸ್ಥೆ ಅವರನ್ನು ಇದೇ ವೃತ್ತಿಯಲ್ಲಿಡಲು ಪ್ರಯತ್ನಿಸುತ್ತಿದೆ. ಇದರ ಬಗ್ಗೆಯೇ ಮೇಲಿನ ಸಾಹಿತ್ಯ ಬರಹಗಳು, ಸಿನಿಮಾ, ಸಾಕ್ಷ್ಯಚಿತ್ರಗಳು ಪ್ರಶ್ನೆ ಎತ್ತಿರುವುದು. ಪ್ರತಿಯೊಬ್ಬರೂ ಅವರ ಪರವಾಗಿ ಧ್ವನಿ ಎತ್ತುವಂತೆ ಮಾಡುತ್ತವೆ. ಸಮಾಜದಲ್ಲಿ ಗೌರವಯುತವಾಗಿ ಬಾಳುವುದಕ್ಕೆ ಅವಕಾಶ ಮಾಡಿಕೊಡಬೇಕೆಂದು ಹೇಳುತ್ತವೆ.

ಇವುಗಳನ್ನೆಲ್ಲಾ ಗಮನಿಸಿದ ನಂತರ ವಿಜ್ಞಾನ – ತಂತ್ರಜ್ಞಾನಗಳ ಆವಿಷ್ಕಾರಗಳ ಮೇಲೆ ಪ್ರಶ್ನೆಗಳು ಏಳುತ್ತವೆ. ಏಕೆಂದರೆ ಚಂದ್ರ, ಮಂಗಳ ಗ್ರಹಗಳ ಮೇಲೆ ನೌಕೆ ಇಳಿಸುವ ತಂತ್ರಜ್ಞಾನವನ್ನು ಕಂಡುಕೊಂಡಿದ್ದೇವೆ. ಆದರೆ ನಮ್ಮ ಮನೆ ಮುಂದಿನ ಚರಂಡಿಯನ್ನು ಸ್ವಚ್ಛಗೊಳಿಸಲು, ಹೇಲುಗುಂಡಿ ಗಳನ್ನು ಬಳಿಯುವ ಆಧುನಿಕ ಯಂತ್ರಗಳನ್ನು ಪರಿಪೂರ್ಣವಾಗಿ ಕಂಡುಕೊಳ್ಳಲಾಗಿಲ್ಲ. ಅಲ್ಲದೇ ಈ ಕೆಲಸಗಳಿಗೆ ಮನುಷ್ಯರನ್ನು ಬಳಸಿಕೊಂಡರೂ ಅವರಿಗೆ ಸೂಕ್ತವಾದ ಸಲಕರಣೆಗಳಿಲ್ಲ! ಇದ್ದಿದ್ದರೆ ಅಮಾಯಕರು ಕಕ್ಕಸು ಗುಂಡಿಗಳಲ್ಲಿ ಉಸಿರುಗಟ್ಟಿ ಸಾಯುತ್ತಿರಲಿಲ್ಲ. ಬರಿಗೈನಲ್ಲಿ ಚರಂಡಿಯ ಹೇಸಿಗೆಯನ್ನು ಎತ್ತುತ್ತಿರಲಿಲ್ಲ. ಅನೇಕ ರೋಗಗಳಿಂದ ಮಧ್ಯವಯಸ್ಸಿನಲ್ಲಿ ಜೀವ ಬಿಡುತ್ತಿರಲಿಲ್ಲ. ವಿಜ್ಞಾನ – ತಂತ್ರಜ್ಞಾನದ ಆವಿಷ್ಕಾರಗಳು ಮನುಷ್ಯ ಹೀನ ಕೆಲಸ ಮಾಡುತ್ತಾ, ಅನುಭವಿಸುತ್ತಿರುವ ವೇದನೆ ಗಳನ್ನು ಹೋಗಲಾಡಿಸಬೇಕಿತ್ತು. ಅದು ಇಂದಿಗೂ ಸಾಧ್ಯವಾಗಿಲ್ಲ.

ಇವುಗಳ ಜೊತೆಗೆ ಸಫಾಯಿ ಕರ್ಮಚಾರಿಗಳ ಜೀವನಾಭಿವೃದ್ಧಿಗೆ ಈಗ ಇರುವ ಎಲ್ಲಾ ಸವಲತ್ತುಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನ ಗೊಳಿಸುವ ಜವಾಬ್ದಾರಿಯನ್ನು ಸಮರ್ಥವಾಗಿ ನಿರ್ವಹಿಸುವ ಆಡಳಿತಾಂಗದ ಅಗತ್ಯತೆಯೂ ಇದೆ. ಆ ಮೂಲಕ ಸಾಮಾಜಿಕವಾಗಿ ಘನತೆಯ ಬದುಕನ್ನು ಬಾಳುವಂತೆ ಅವರಿಗೂ ಅವಕಾಶ ಕಲ್ಪಿಸಬೇಕಾಗಿದೆ. ಆರ್ಥಿಕವಾಗಿ ಬಲಗೊಳಿಸಬೇಕಿದೆ. ಶಿಕ್ಷಣವನ್ನು ಒದಗಿಸಬೇಕಿದೆ. ಉದ್ಯೋಗಗಳಲ್ಲಿ ಸೈನಿಕರಿಗೆ ನೀಡುವ ಆದ್ಯತೆಯಂತೆ ಪೌರಕಾರ್ಮಿಕರಿಗೂ ನೀಡಬೇಕಿದೆ. ಇವುಗಳು ಸಾಧ್ಯವಾಗಲಿಲ್ಲವೆಂದರೆ ನಾವು ನಮ್ಮ ಸಂವಿಧಾನ ಪ್ರತಿಪಾದಿಸುವ ಭಾರತದ ಪ್ರಜೆಗಳಂತೂ ಆಗುವುದೇ ಇಲ್ಲ!

**ರವಿ ಎಂ. ಸಿದ್ಲಿಪುರ**
ಸಂಶೋಧನಾ ವಿದ್ಯಾರ್ಥಿ
ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ
ಶಿವಮೊಗ್ಗ – ೫೭೭ ೨೦೧

# ಸಮೂಹ ಹತ್ಯೆಗೆ ಮೂಕ ಸಾಕ್ಷಿಯಾದ ಬಾವಿ!

**ಎಂ. ಅಬ್ದುಲ್ ರೆಹಮಾನ್ ಪಾಷ**

ಇದೊಂದು ಐತಿಹಾಸಿಕ ಬಾವಿ. ರಾಜಸ್ಥಾನ, ಗುಜರಾತ್ ರಾಜ್ಯಗಳಲ್ಲಿ ಕಂಡುಬರುವ ತಮ್ಮ ಮನಮೋಹಕ ಶಿಲ್ಪ ಕಲೆಯಿಂದ ಕಂಗೊಳಿಸುವ ಮೆಟ್ಟಲು ಬಾವಿಯಂಥ ಬಾವಿಯಲ್ಲವಿದು. ಇದರ ಹತ್ತಿರಕ್ಕೆ ಹೋಗಿ ಒಳಗೆ ಇಣುಕಿಹಾಕಿದರೆ, ನಿಮಗೆ ಇತಿಹಾಸದಲ್ಲಿ ಅಳಿಸಿ ಹೋಗಿರುವ ದೃಶ್ಯವನ್ನು ಕಾಣುವ, ಅಡಗಿಹೋಗಿರುವ ಧ್ವನಿಯನ್ನು ಆಲಿಸುವ ಸಂವೇದನೆ ಇದ್ದರೆ, ಅಮಾಯಕ ಜನರ ಆರ್ತನಾದ ಇಂದಿಗೂ ಈ ಬಾವಿಯೊಳಗಿಂದ ಕೇಳಿಸುತ್ತದೆ. ಒಬ್ಬರಡಿ ಒಬ್ಬರು ಬಿದ್ದು ಕೊನೆಯುಸಿರಿರುವವರೆಗೂ ಸಹಾಯಕ್ಕಾಗಿ ಬೇಡಿದ ಅಳಲುಗಳು. ಆದರೆ ದುರಂತವೆಂದರೆ ಇವರ್‍ಯಾರಿಗೂ ಅಂಥ ನೆರವು ಸಿಗಲಿಲ್ಲ. ಮೂರು ದಿನಗಳ ನಂತರ ಇದರಿಂದ ಹೊರಗೆ ತೆಗೆಯಲಾದ ಶವಗಳ ಸಂಖ್ಯೆ ೧೨೦.

ಈ ದುರಂತದ ಕಥೆ ಹೇಳುವ ಬಾವಿಯಿರುವುದು ಪಂಜಾಬದ ಅಮೃತಸರದ ಜಲಿಯನ್‌ವಾಲಾ ಬಾಗ್ ಎಂಬ ಪಾರ್ಕಿನಲ್ಲಿ. ಈ ಬಾವಿಯಷ್ಟೇ ಅಲ್ಲ, ಅಲ್ಲಿನ ಗೋಡೆಗಳ ಮೇಲೆ ಚೌಕಗಳಿಂದ ತೋರಿಸಲಾಗಿರುವ ಬಂದೂಕಿನ ಗುಂಡುಗಳು ತಾಗಿರುವ ಗುರುತುಗಳೂ ಕಥೆಯ ಇನ್ನೊಂದು ಮಗ್ಗುಲನ್ನು ಹೇಳುತ್ತವೆ. ಗೋಡೆಗೆ ತಾಗಿ ವ್ಯರ್ಥವಾದ ಗುಂಡುಗಳು ಕೇವಲ ಕೆಲವು. ಆದರೆ ಕೊಲೆಗಡುಕರ ಗುರಿಯನ್ನು ಸರಿಯಾಗಿ ಮುಟ್ಟಿ ಜೀವವುಳಿಸಿಕೊಳ್ಳಲು ಓಡಿದ ಮನುಷ್ಯರನ್ನು ಹೊಡೆದು ಕೆಡವಿದ ಗುಂಡುಗಳು ನೂರಾರು. ಸೂರ್ಯ ನಡುನೆತ್ತಿಯ ಮೇಲಿದ್ದ ಹಾಡುಹಗಲಲ್ಲಿ ನೂರಾರು ಮುಗ್ಧ ಪುರುಷರು, ಮಹಿಳೆಯರು, ವೃದ್ಧರು, ಮಕ್ಕಳು ಇದ್ದ ಸಮೂಹದ ಮೇಲೆ ಗುಂಡಿನ ಮಳೆಗರೆದು ಹತ್ಯೆ ಮಾಡಲಾದ ಈ ಘೋರ ಘಟನೆ ನಡೆದದ್ದು ೧೯೧೯ರ ಏಪ್ರಿಲ್ ೧೩ರಂದು; ಎಂದರೆ ೨೦೧೯ರ ಏಪ್ರಿಲ್ ೧೩ಕ್ಕೆ ಸರಿಯಾಗಿ ನೂರು ವರ್ಷಗಳ ಹಿಂದೆ. ಸ್ವತಂತ್ರ ಭಾರತದಲ್ಲಿ ಬದುಕುತ್ತಿರುವ ನಾವು ಒಂದು ಕ್ಷಣ ಈ ಘಟನೆಯನ್ನು ಧ್ಯಾನಿಸುವುದು ಒಳ್ಳೆಯದು. ನಾವು ಅನುಭವಿಸುತ್ತಿರುವ ಸ್ವಾತಂತ್ರ್ಯ ಮತ್ತು ಗಣತಂತ್ರ ನಮಗೆ ಪುಕ್ಕಟೆಯಾಗಿ ಸಿಗಲಿಲ್ಲ. ಇಂಥ ಸಾವಿರಾರು ಕಾಂಡಗಳಲ್ಲಿ ಜೀವತೆತ್ತ ಲಕ್ಷಾಂತರ ಮಂದಿಯ ಗೋರಿಗಳ ಮೇಲೆ ನಾವು ಸ್ವಾತಂತ್ರ್ಯವನ್ನು ಕಟ್ಟಿಕೊಂಡಿದ್ದೇವೆ ಎಂಬ ಅರಿವು ನಮ್ಮಲ್ಲಿರಬೇಕು.

**ಅಮಾನವೀಯ ಹತ್ಯಾಕಾಂಡ**

ಏಪ್ರಿಲ್ ೧೩. ಅಂದು ಸಿಕ್ಖರ ವರ್ಷದ ಆರಂಭದ ಶುಭ ದಿನ. ಇಡೀ ಪಂಜಾಬದಲ್ಲಿ ಬೈಸಾಖಿ ಹಬ್ಬವನ್ನು ಆಚರಿಸುವ ಸಡಗರ. ದೂರದೂರದಿಂದ ಈ ಸಂಭ್ರಮವನ್ನು ಸವಿಯಲು ಅಮೃತಸರಕ್ಕೆ ಬಂದಿದ್ದ ಜನರಲ್ಲಿ ಜಲಿಯನ್‌ವಾಲಾ ಬಾಗ್ ಎಂಬ ಸುಮಾರು ಏಳು ಎಕರೆಯಷ್ಟು ವಿಶಾಲವಾದ ಮೈದಾನದಲ್ಲಿ ೨೦ ಸಾವಿರಕ್ಕೂ ಹೆಚ್ಚು ಜನ ಸೇರಿದ್ದರು. ಹಾಗೆ ಸೇರಿದ್ದವರಿಗೆ ಆ ಜಾಗವು ಮೂರೂ ಕಡೆಗಳಲ್ಲಿ ಹತ್ತು ಅಡಿಗಳಿಗೂ ಎತ್ತರವಾದ ಗೋಡೆಗಳಿಂದ ಆವೃತವಾಗಿದೆ, ಹೊರಗೆ ಹೋಗಲು ಇದ್ದ ಒಂದೇ ಒಂದು ಕಿರಿದಾದ ಮಾರ್ಗ ಬಿಟ್ಟರೆ ಉಳಿದೆಲ್ಲಾ ಗೇಟುಗಳಿಗೆ ಸಾಮಾನ್ಯವಾಗಿ ಬೀಗ ಹಾಕಲಾಗಿರುತ್ತದೆ ಎಂಬುದು ಗಮನಕ್ಕೆ ಬಂದಿರಲಿಲ್ಲ, ಏಕೆ ಬರಬೇಕು, ಪ್ರತಿ ದಿನ, ಪ್ರತಿ ವರ್ಷ ಅಲ್ಲಿ ಸೇರುವುದಿಲ್ಲವೇ? ಆದರೆ ಆ ದಿನ ತಾವು ಮಾರಣಾಂತಿಕ ಇಕ್ಕಟ್ಟಿನಲ್ಲಿ ಇದ್ದೇವೆ ಎನ್ನುವುದು ಅವರ



ನಿರಂತರವಾಗಿ ಬಂದೂಕುಗಳ ದಾಳಿಗೆ ಒಳಗಾದವರ ಚೀತ್ಕಾರದಲ್ಲಿ ಅವುಗಳ ಸದ್ದೂ ಅಡಗಿಹೋಯಿತು. ತಪ್ಪಿಸಿಕೊಳ್ಳಲು ಗೋಡೆಗಳನ್ನು ಹತ್ತಲು ನೋಡಿದ ಜನ ಅಲ್ಲಿಯೇ ಗುಂಡಿಗೆ ಬಲಿಯಾಗಿ ನೆಲಕ್ಕುರುಳಿದರು. ಅಮ್ಮಂದಿರ ಹಿಂದೆ ಅಡಗಿಕೊಳ್ಳಲು ನೋಡಿದ ಮಕ್ಕಳೂ ಇನ್ನೆಲ್ಲಿಂದಲೋ ತೂರಿಬಂದ ಗುಂಡಿಗೆ ಸಿಲುಕಿ ಸತ್ತರು. ಎಷ್ಟು ಜನ ಸತ್ತರು ಎಂದು ಈಗಲೂ ಸರಿಯಾದ ಅಂಕಿಅಂಶಗಳು ಸಿಗುವುದಿಲ್ಲ. ಬ್ರಿಟಿಷ್ ಸರಕಾರ ಹೇಳಿತು ೩೭೯ ಎಂದು, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಹೇಳಿತು ೧೦೦೦ ಎಂದು. ಸತ್ತವರಿಗೇ ಗೊತ್ತು ಖಚಿತವಾಗಿ ಎಷ್ಟು ಜನ ಎಂದು! ಗಾಯಗೊಂಡವರು ಇನ್ನೆರಡು ಸಾವಿರ ಜನ. ಎಲ್ಲೆಂಲ್ಲಿಂದಲೋ ಹಾರಿ ಬರುತ್ತಿದ್ದ ಮಾರಕ ಗುಂಡುಗಳಿಂದ ತಪ್ಪಿಸಿಕೊಳ್ಳುವ ಕೊನೆಯ ಉಪಾಯವಾಗಿ ಒಬ್ಬೊಬ್ಬರು ಈ ಬಾವಿಯಲ್ಲಿ ಜಿಗಿದರು. ಇದೇ ಉಪಾಯವನ್ನು ಹಲವರು ಮಾಡಿದ್ದೇ ತಪ್ಪಾಯಿತು. ಹೆಚ್ಚು ಅಗಲವಿಲ್ಲದ ಆಳವಾದ ಬಾವಿಯಲ್ಲಿ ಒಬ್ಬರ ಮೇಲೆ ಒಬ್ಬರು ಬಿದ್ದು ಉಸಿರುಕಟ್ಟಿ ಸತ್ತವರೇ ಹೆಚ್ಚು.



**ಜಲಿಯನ್‌ವಾಲಾ ಬಾಗ್‌ನಲ್ಲಿ ಗೋಡೆಗಳ ಮೇಲೆ ಚೌಕಗಳಿಂದ ತೋರಿಸಲಾಗಿರುವ ಬಂದೂಕಿನ ಗುಂಡುಗಳು ತಾಗಿರುವ ಗುರುತುಗಳು**

ಅರಿವಿನಲ್ಲಿದ್ದಿದ್ದರೆ ಚೆನ್ನಾಗಿತ್ತೇನೋ ಎಂದು ಈಗ ನಮಗೆ ಅನ್ನಿಸುತ್ತದೆ.

೧೯೧೪-೧೮ರವರೆಗೆ ಇಡೀ ಜಗತ್ತನ್ನು ಜರ್ಜರಿತಗೊಳಿಸಿದ ಮೊದಲನೇ ಜಾಗತಿಕ ಯುದ್ಧ ಮೊದಲೇ ಬ್ರಿಟಿಷರ ಸುದೀರ್ಘ ದುರಾಡಳಿತದ ತುಳಿತಕ್ಕೆ ಸಿಕ್ಕು ನಲುಗಿದ್ದ ಭಾರತವನ್ನು ಇನ್ನಷ್ಟು ಕಂಗೆಡಿಸಿತ್ತು. ಹಣದುಬ್ಬರ, ದುಬಾರಿ ತೆರಿಗೆಗಳು, ಯುದ್ಧದಲ್ಲಿ ಮಡಿದ ಅಥವಾ ಗಾಯಗೊಂಡು ಮರಳಿದ ಸಾವಿರಾರು ಸೈನಿಕರು – ಇವೆಲ್ಲವುಗಳಿಂದಾಗಿ ಜನರು ಬ್ರಿಟಿಷ್ ಆಡಳಿತದ ವಿರುದ್ಧ ಮತ್ತಷ್ಟು ರೋಸಿಹೋಗಿದ್ದರು. ಪಶ್ಚಿಮ ಬಂಗಾಳ ಮತ್ತು ಪಂಜಾಬಿನಲ್ಲಂತೂ ಪರಿಸ್ಥಿತಿ ತೀರಾ ಹದಗೆಟ್ಟಿತ್ತು. ಜನ ಬಹಿರಂಗವಾಗಿ ಪ್ರತಿಭಟಿಸತೊಡಗಿದರು. ಇದನ್ನು ಹತ್ತಿಕ್ಕಲು ಬ್ರಿಟಿಷ್ ಸರಕಾರ ರೌಲೆಟ್ ಕಾಯ್ದೆಯನ್ನು ಜಾರಿಗೆ ತಂದಿತು. ಇದರಡಿಯಲ್ಲಿ ಕೆಲವು ರಾಜಕೀಯ ಪ್ರಕರಣಗಳನ್ನು ಯಾವುದೇ ವಿಚಾರಣೆ ಇಲ್ಲದೆಯೂ ನೇರವಾಗಿ ಶಿಕ್ಷೆಗೆ ಒಳಪಡಿಸಬಹುದಾಗಿತ್ತು. ಇದು ಜನರಲ್ಲಿದ್ದ ಅಸಹನೆಯ ಬೆಂಕಿಗೆ ತುಪ್ಪ ಸುರಿದಂತಾಯಿತು. ಮಹಾತ್ಮಾ ಗಾಂಧಿ ರಾಷ್ಟ್ರ ಮಟ್ಟದ ಹರತಾಳಕ್ಕೆ ಕರೆಕೊಟ್ಟರು. ಅಮೃತಸರದ ಲೆಫ್ಟಿನೆಂಟ್ ಗವರ್ನರ್ ಮೈಕೆಲ್ ಒಡ್ವೋವರ್ ದಿಗಿಲುಗೊಂಡರು.

ಅಮೃತಸರದ ಡೆಪ್ಯುಟಿ ಕಮಿಷನರ್ ಸದನದ ಎದುರು ಪ್ರತಿಭಟನೆ ನಡೆಯಿತು. ಬಂಧನಕ್ಕೆ ಒಳಗಾಗಿದ್ದ ಇಬ್ಬರು ಸ್ವಾತಂತ್ರ್ಯ ಹೋರಾಟಗಾರರಾದ ಡಾ॥ ಸತ್ಯ ಪಾಲ್ ಮತ್ತು ಡಾ॥ ಸೈಫುದ್ದೀನ್ ಕಿಚ್ಲ್ಯು ಅವರ ಬಿಡುಗಡೆಗಾಗಿ ಒತ್ತಾಯಿಸಲಾಯಿತು. ಪ್ರತಿಭಟನೆ ವಿಕೋಪಕ್ಕೆ ತಿರುಗಿ ಟೌನ್ ಹಾಲ್ ಮತ್ತು ರೇಲ್ವೇ ಸ್ಟೇಷನ್‌ನ್ನು ಸುಡಲಾಯಿತು. ಟೆಲಿಗ್ರಾಫ್ ಮತ್ತು ಇತರ ಸಂವಹನ ವ್ಯವಸ್ಥೆಯನ್ನು ಭಂಗಪಡಿಸಲಾಯಿತು. ಇದೆಲ್ಲದರ ನಡುವೆ ಕೆಲವು ಬ್ರಿಟಿಷ್ ಅಧಿಕಾರಿಗಳೂ ಸೇರಿದ ಹಾಗೆ ಹಲವರು ಮೃತಪಟ್ಟರು. ಬಹಿರಂಗವಾಗಿ ಕೆಲವೇ ಜನ ಸೇರುವುದನ್ನೂ ನಿಷಿದ್ಧಗೊಳಿಸಲಾಯಿತು.

ಬೈಸಾಖಿಯ ದಿನ ಬೆಳಿಗ್ಗೆ ಕರ್ನಲ್ ರೆಜಿನಾಲ್ಡ್ ಡೈಯರ್ ಇಡೀ ಅಮೃತಸರದಲ್ಲಿ ಕರ್ಫ್ಯೂವನ್ನು ಹೇರಿದ, ಎಲ್ಲ ಮೆರವಣಿಗೆ, ನಾಲ್ಕು ಜನಕ್ಕಿಂತ ಹೆಚ್ಚಿನ ಸಂದಣಿಯನ್ನು ನಿಷೇಧಿಸಿದ. ಇಂಥ ಪರಿಸ್ಥಿತಿಯಲ್ಲಿಯೂ ಡೈಯರ್‌ಗೆ ಮಧ್ಯಾಹ್ನ ೧೨.೪೦ರ ಹೊತ್ತಿಗೆ ಗುಪ್ತದಳದ ಮೂಲಕ ಮಾಹಿತಿ ದೊರೆಯುತ್ತದೆ, ಜಲಿಯಾನ್‌ವಾಲಾ ಬಾಗ್‌ನಲ್ಲಿ ಒಂದು ದೊಡ್ಡ ಸಭೆ ಸೇರಿದೆ, ಇದರ ಪರಿಣಾಮವಾಗಿ ಪ್ರತಿಭಟನೆ, ಗಲಭೆಗಳು ಉಂಟಾಗುವ ಸಂಭವವಿದೆ ಎಂದು.

ತಾನು ಹೇರಿದ್ದ ಕರ್ಫ್ಯೂ ಆಜ್ಞೆಯನ್ನು ಉಲ್ಲಂಘಿಸಿದ್ದಕ್ಕಾಗಿ ಕೋಪದಿಂದ ಕೆಂಡಾಮಂಡಲನಾದ ಕರ್ನಲ್ ರೆಜಿನಾಲ್ಡ್ ಡೈಯರ್ ಅಪರಾಹ್ನ ೪.೩೦ಕ್ಕೆ ಜಲಿಯನ್‌ವಾಲಾ ಬಾಗ್‌ಗೆ ಬರುತ್ತಾನೆ. ಆತ ಮತ್ತು ಮೊದಲು ಆತನ ಶಸ್ತ್ರಾಸ್ತ್ರ ದಳ ಇದ್ದ ಒಂದೇ ಒಂದು ಪ್ರವೇಶ ಮಾರ್ಗವನ್ನು ಅಡ್ಡಗಟ್ಟುತ್ತಾರೆ. ಪೊಲೀಸರು ತಮ್ಮ ಉದ್ದನೆಯ ಬಂದೂಕುಗಳನ್ನು ಜನರತ್ತ ಗುರಿಯಿಡುತ್ತಾರೆ. ಸೇರಿರುವ ಜನ ಜಾಸ್ತಿ, ಇರುವ ಮದ್ದುಗುಂಡುಗಳು ಸುಮ್ಮನೇ ವ್ಯರ್ಥವಾಗಬಾರದು ಎಂಬ 'ದಕ್ಷತೆ', ಕರ್ನಲ್ ಡೈಯರ್ ಮೊದಲು ಹೆಚ್ಚು ದಟ್ಟಣೆ ಇದ್ದ ಭಾಗದಿಂದ ಫೈರಿಂಗ್‌ಅನ್ನು ಆರಂಭಿಸಲು ಹೇಳುತ್ತಾನೆ. ಭಾರತೀಯರೇ ಆಗಿದ್ದರೂ ಭಾರತ ಉಪ್ಪನ್ನೇ ಬ್ರಿಟಿಷರ ಬೊಕ್ಕಸದಿಂದ ತಿನ್ನುತ್ತಿದ್ದೇವೆ ಎಂಬ ಭ್ರಮೆಗೆ ಒಳಗಾದ ಶಸ್ತ್ರಾಸ್ತ್ರ ದಳ ಅಮಾಯಕ ಜನರ ಮೇಲೆ ಗುಂಡುಗಳ ಸುನಾಮಿಯನ್ನು ಸುರಿಸುತ್ತದೆ. ನಿಯಮದ ಪ್ರಕಾರ ಗೋಲೀಬಾರ್ ಕ್ರಮ ಇರುವುದು ಪ್ರತಿಭಟನಾಕಾರರನ್ನು ಹೆದರಿಸಿ ಚದುರಿಸಲು. ಆದರೆ ಇಲ್ಲಿ ಉದ್ದೇಶ ಸ್ಪಷ್ಟವಾಗಿತ್ತು. ತಪ್ಪಿಸಿಕೊಳ್ಳಲು ಇರುವ ಎಲ್ಲಾ ಮಾರ್ಗಗಳನ್ನು ಭದ್ರಗೊಳಿಸಿ ಜನರನ್ನು ಉಪದ್ರವಿ ಇಲಿಗಳನ್ನು ಕೊಂದಹಾಗೆ ಹತ್ಯೆಮಾಡುವುದಕ್ಕಾಗಿ ತಂತ್ರ ಹೂಡಲಾಗಿತ್ತು. ಭಾರತೀಯರಿಗೆ ಬುದ್ಧಿ ಕಲಿಸಬೇಕಾಗಿತ್ತು. ಹತ್ತು ನಿಮಿಷಗಳ ಅವ್ಯಾಹತ ದಾಳಿಯ ನಂತರ ಗೋಲೀಬಾರ್ ನಿಂತಿತು. ಇಷ್ಟು ಸಾಕು ಎಂದಲ್ಲ, ಹೊತ್ತು ತಂದ ಮದ್ದುಗುಂಡುಗಳೆಲ್ಲಾ ಮುಗಿದವೆಂದು.

ಅಷ್ಟೂ ಹೊತ್ತು ನಿರಂತರವಾಗಿ ಬಂದೂಕುಗಳು ಮೊಳಗಿದವು; ಆದರೆ ಅವುಗಳ ದಾಳಿಗೆ ಒಳಗಾದವರ ಚೀತ್ಕಾರದಲ್ಲಿ ಅವುಗಳ ಸದ್ದೂ ಅಡಗಿಹೋಯಿತು. ತಪ್ಪಿಸಿಕೊಳ್ಳಲು ಗೋಡೆಗಳನ್ನು ಹತ್ತಲು ನೋಡಿದ ಜನ ಅಲ್ಲಿಯೇ ಗುಂಡಿಗೆ ಬಲಿಯಾಗಿ ನೆಲಕ್ಕುರುಳಿದರು. ಅಮ್ಮಂದಿರ ಹಿಂದೆ ಅಡಗಿಕೊಳ್ಳಲು ನೋಡಿದ ಮಕ್ಕಳೂ ಇನ್ನೆಲ್ಲಿಂದಲೋ ತೂರಿಬಂದ ಗುಂಡಿಗೆ ಸಿಲುಕಿ ಸತ್ತರು. ಎಷ್ಟು ಜನ ಸತ್ತರು ಎಂದು ಈಗಲೂ ಸರಿಯಾದ ಅಂಕಿಅಂಶಗಳು ಸಿಗುವುದಿಲ್ಲ. ಬ್ರಿಟಿಷ್ ಸರಕಾರ ಹೇಳಿತು ೩೭೯ ಎಂದು, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಹೇಳಿತು ೧೦೦೦ ಎಂದು. ಸತ್ತವರಿಗೇ ಗೊತ್ತು ಖಚಿತವಾಗಿ ಎಷ್ಟು ಜನ ಎಂದು! ಗಾಯಗೊಂಡವರು ಇನ್ನೆರಡು ಸಾವಿರ ಜನ. ಆದರೆ ಒಂದು ಮಾತು ಮಾತ್ರ ಖಾತ್ರಿಯಾಗಿತ್ತು, ಎರಡು ದಿನಗಳ ನಂತರ ನಾವು ಆರಂಭದಲ್ಲಿ ಒಂದು ಬಾವಿಯ ಬಗ್ಗೆ ಮಾತಾಡಿದೆವಲ್ಲ, ಅದರಿಂದ ಹೊರಗೆ ತೆಗೆದ ಹೆಣಗಳ ಸಂಖ್ಯೆ ೧೨೦. ಎಲ್ಲೆಲ್ಲಿಂದಲೋ ಹಾರಿ ಬರುತ್ತಿದ್ದ ಮಾರಕ ಗುಂಡುಗಳಿಂದ ತಪ್ಪಿಸಿಕೊಳ್ಳುವ ಕೊನೆಯ ಉಪಾಯವಾಗಿ ಒಬ್ಬಿಬ್ಬರು ಈ ಬಾವಿಯಲ್ಲಿ ಜಿಗಿದರು. ಇದೇ ಉಪಾಯವನ್ನು ಹಲವರು ಮಾಡಿದ್ದೇ ತಪ್ಪಾಯಿತು. ಹೆಚ್ಚು ಅಗಲವಿಲ್ಲದ ಆಳವಾದ ಬಾವಿಯಲ್ಲಿ ಒಬ್ಬರ ಮೇಲೆ ಒಬ್ಬರು ಬಿದ್ದು ಉಸಿರುಕಟ್ಟಿ ಸತ್ತವರೇ ಹೆಚ್ಚು, ಅಳಿದುಳಿದವರನ್ನು ಬ್ರಿಟಿಷರ ಬಂದೂಕುಗಳು ಮುಗಿಸಿದವು.

ಘಟನೆಯ ಕುರಿತು ಪಂಜಾಬದ ಬ್ರಿಟಿಷ್ ಲೆಫ್ಟಿನೆಂಟ್ ಗವರ್ನರ್ ಸರಕಾರಕ್ಕೆ ಕಳಿಸಿದ ಟೆಲಿಗ್ರಾಮ್‌ನಲ್ಲಿ ಕರ್ನಲ್ ಡೈಯರ್ ತೆಗೆದುಕೊಂಡ ಕ್ರಮ ಸಿಂಧುವಾಗಿದೆ, ಇದು ನಡೆದದ್ದು ನನ್ನ ಸಹಮತಿಯಿಂದಲೇ ಎಂದು ಹೇಳಿದ್ದು, ಪಂಜಾಬದಲ್ಲಿ ಮಾರ್ಷಲ್ ಲಾವನ್ನು ಹೇರಬೇಕು ಎಂದೂ ಮನವಿ ಮಾಡಲಾಗಿತ್ತು. ವೈಸ್‌ರಾಯ್ ಲಾರ್ಡ್ ಚೆಲ್ಮ್‌ಫರ್ಡ್ ಇದನ್ನು ಮಂಜೂರು ಮಾಡುತ್ತಾನೆ. ಆದರೆ ಈ ಘೋರ ಹತ್ಯಾಕಾಂಡಕ್ಕೆ ಭಾರತದಲ್ಲಷ್ಟೇ ಅಲ್ಲ, ಇಡೀ ಜಗತ್ತಿನಲ್ಲಿ ವ್ಯಾಪಕ ಖಂಡನೆ ವ್ಯಕ್ತವಾಗಿತ್ತು. ರವೀಂದ್ರನಾಥ ಟಾಗೋರರು ಪ್ರತಿಭಟನೆಯ ರೂಪದಲ್ಲಿ ತಮ್ಮ ನೈಟ್‌ಹುಡ್ ಪದವಿಯನ್ನು ತ್ಯಜಿಸಿದರು. ಬ್ರಿಟನ್ನಿನ ಜನ ಮತ್ತು ವಿರೋಧ ಪಕ್ಷಗಳೂ ಇದನ್ನು ಪ್ರಖರವಾಗಿ

## ಉಗುಳು

ನನ್ನ ದಾರಿಯಲ್ಲಿ
ಯಾರ್‍ಯಾರೋ
ಉಗುಳಿದರೂ
ನನಗೆ ತಾಗಲೇ ಇಲ್ಲ
ಉಗುಳಿದವರೇ
ಮೆಟ್ಟಿ ಹೋದರಲ್ಲಾ!

**ಉಮೇಶ ಕಾರಂತ**
ಮಂಗಳೂರು – ೫೭೫೦೦೧

ಖಂಡಿಸುತ್ತಾರೆ. ಆಗ ಸೆಕ್ರಟರಿ ಆಫ್ ಸ್ಟೇಟ್ ಫಾರ್ ವಾರ್ ಆಗಿದ್ದ ವಿನ್ಸ್‌ಟನ್ ಚರ್ಚಿಲ್ ಮತ್ತು ಮಾಜಿ ಪ್ರಧಾನ ಮಂತ್ರಿ ಎಚ್. ಎಚ್. ಅಸ್ಕಿವ್ತ್, ಬಹಿರಂಗವಾಗಿ ಇದನ್ನು ಖಂಡಿಸುತ್ತಾರೆ. ಇದನ್ನು ಚರ್ಚಿಲ್ "ರಾಕ್ಷಸಿ" ಕೃತ್ಯವೆನ್ನುತ್ತಾರೆ. ಅಸ್ಕಿವ್ತ್ ಇದನ್ನು "ಇಡೀ ಇತಿಹಾಸದಲ್ಲಿಯೇ ಇದೊಂದು ಅತ್ಯಂತ ಕೆಟ್ಟ ಹಿಂಸಾಚಾರವಾಗಿದೆ" ಎನ್ನುತ್ತಾರೆ. ಹೌಸ್ ಆಫ್ ಕಾಮನ್ಸ್‌ನಲ್ಲಿ ೧೯೨೦ರ ಜುಲೈ ೮ರಂದು ನಡೆದ ಚರ್ಚೆಯಲ್ಲಿ ವಿನ್ಸ್‌ಟನ್ ಚರ್ಚಿಲ್, "ಜನ ನಿರಾಯುಧರಾಗಿದ್ದರು. ಬಡಿಗೆಗಳ ಹೊರತಾಗಿ ಅವರು ನಿರಾಯುಧರಾಗಿದ್ದರು, ಅವರು ಯಾರ ಮೇಲೂ ಯಾವುದರ ಮೇಲೂ ಆಕ್ರಮಣ ಮಾಡುತ್ತಿರಲಿಲ್ಲ.... ಗುಂಪನ್ನು ಚದುರಿಸಲು ಗುಂಡು ಹಾರಿಸಿದಾಗ, ಜನ ಬೆದರಿ ಓಡಿ ಹೋಗಲು ನೋಡಿದರು. ಸ್ಥಳವು ಎಷ್ಟೊಂದು ಇಕ್ಕಟ್ಟಾಗಿತ್ತು ಎಂದರೆ ಒಂದೊಂದು ಬುಲೆಟ್ ಮೂರು ಅಥವಾ ನಾಲ್ಕು ದೇಹಗಳನ್ನು ತೂರಿ ಕೊಲ್ಲಬಹುದಾಗಿತ್ತು."


**ಕರ್ನಲ್ ಡೈಯರ್**

**ಹಂಟರ್ ಕಮಿಷನ್**

೧೯೧೯ ಅಕ್ಟೋಬರ್ ೧೪ರಂದು ಭಾರತ ಸರಕಾರವು ಪಂಜಾಬದ ವಿದ್ಯಮಾನದ ಕುರಿತು ವಿಚಾರಣೆ ನಡೆಸಲು ಒಂದು ಆಯೋಗವನ್ನು ನೇಮಿಸಿತು. ಲಾರ್ಡ್ ವಿಲಿಯಮ್ ಹಂಟರ್ ಅಧ್ಯಕ್ಷರು ಮತ್ತು ೯ ಜನರ ಸಮಿತಿ ಇದಾಗಿತ್ತು. ಇದರಲ್ಲಿ ಸರ್ ಚಿಮನ್‌ಲಾಲ್ ಹರಿಲಾಲ್ ಸೆತಲ್ವಾದ್, ಪಂಡಿತ್ ಜಗತ್ ನಾರಾಯಣ್, ಸರ್ದಾರ್ ಸಾಹಿಬ್‌ಜ಼ಾದಾ ಸುಲ್ತಾನ್ ಅಹಮದ್ ಖಾನ್ ಎಂಬ ಭಾರತೀಯರೂ ಇದರಲ್ಲಿದ್ದರು. ಇದನ್ನು ಹಂಟರ್ ಕಮಿಷನ್ ಎಂದು ಕರೆಯಲಾಯಿತು.

ನವೆಂಬರ್ ೧೯ರಂದು ಡೈಯರ್ ಕಮಿಷನ್ ಎದುರು ಹಾಜರಾದ. ಆತನ ಮಿಲಿಟರಿ ಹಿರಿಯರು ಆತನಿಗೆ ವಕೀಲರ ನೆರವನ್ನು ಕೊಡುವುದಾಗಿ ಹೇಳಿದರೂ ಡೈಯರ್ ಅದನ್ನು ನಿರಾಕರಿಸಿದ. ತನ್ನ ಪರವಾಗಿ ತಾನೇ ವಾದಿಸಿದ. ವಿಚಾರಣೆಯ ವೇಳೆಯಲ್ಲಿ ಯಾವುದೇ ಎಗ್ಗಿಲ್ಲದೇ ಈತ ಹೇಳಿದ, "ಜನರನ್ನು ಫೈರಿಂಗ್ ಮಾಡದೆಯೂ ಚದುರಿಸಬಹುದಾಗಿತ್ತು ಎನ್ನಿಸುತ್ತದೆ. ಆದರೆ ನಾನು ಹಾಗೆ ಮಾಡಿದ್ದರೆ, ಅವರು ಮತ್ತೆ ಹಿಂದಕ್ಕೆ ಬಂದು ನನ್ನ ಹೇಡಿತನಕ್ಕಾಗಿ ನಗುತ್ತಿದ್ದರು, ನಾನು ಮೂರ್ಖನಾಗುತ್ತಿದ್ದೆ."

ಸರ್ ಚಿಮನ್‌ಲಾಲ್ ಕೇಳಿದರು, "ಶಸ್ತ್ರಾಸ್ತ್ರ ವಾಹನಗಳು ಒಳಗೆ ಬರುವಷ್ಟು ಪ್ರವೇಶವು ಅಗಲವಾಗಿದ್ದರೆ, ನೀವು ಮಷಿನ್‌ಗನ್‌ಗಳನ್ನು ಬಳಸಿ ಫೈರಿಂಗ್ ಮಾಡಿಸುತ್ತಿದ್ದಿರಾ?" ಅದಕ್ಕೆ ಡೈಯರ್ "ಹೌದು, ನನಗನ್ನಿಸುತ್ತದೆ ನಾನು ಮಷಿನ್ ಗನ್ನುಗಳನ್ನು ಬಳಸುತ್ತಿದ್ದೆ" "ಆಗ ಸಾವಿನ ಸಂಖ್ಯೆ ಇನ್ನೂ ಹೆಚ್ಚಾಗುತ್ತಿತ್ತು." "ಹೌದು. ನನ್ನ ಉದ್ದೇಶ ಇಡೀ ಪಂಜಾಬದಲ್ಲಿ ಭಯವನ್ನು ಹರಡುವುದಾಗಿತ್ತು. ದಂಗೆಕೋರರ ನೈತಿಕ ಬಲವನ್ನು ಕುಗ್ಗಿಸುವುದಾಗಿತ್ತು. ಗುಂಪು ಚದುರಲು ಆರಂಭಿಸಿದ ನಂತರವೂ ನಾನು ಫೈರಿಂಗ್ ನಿಲ್ಲಿಸಲಿಲ್ಲ, ಏಕೆಂದರೆ ಪೂರ್ತಿ ಚದುರುವವರೆಗೆ ಶೂಟಿಂಗ್ ಮಾಡುವುದು ನನ್ನ ಕರ್ತವ್ಯವಾಗಿತ್ತು. ಅಲ್ಪ ಸ್ವಲ್ಪ ಫೈರಿಂಗ್‌ನಿಂದ ಏನೂ ಪ್ರಯೋಜನವಿಲ್ಲ ಎಂದು ನನಗೆ ಗೊತ್ತಿತ್ತು." "ಗಾಯಗೊಂಡವರ ಚಿಕಿತ್ಸೆಗೆ ನೀವು ಯಾವ ಪ್ರಯತ್ನವನ್ನೂ ಮಾಡಲಿಲ್ಲ." "ಖಂಡಿತ ಇಲ್ಲ. ಅದು ನನ್ನ ಕೆಲಸವಾಗಿರಲಿಲ್ಲ. ಆಸ್ಪತ್ರೆಗಳು ತೆರೆದಿದ್ದವು, ಅವರು ಅಲ್ಲಿಗೆ ಹೋಗಬೇಕಾಗಿತ್ತು." ಇದು ವಿಚಾರಣೆಯ ಸಾರ.

ವಿಚಾರಣೆಯ ವಿವರ ಬಹಿರಂಗಗೊಂಡ ನಂತರ ಬ್ರಿಟಿಷ್ ಮಾಧ್ಯಮ ಮತ್ತು ಹಲವಾರು ಎಂ.ಪಿ.ಗಳು ಡೈಯರ್‌ನ ರಾಕ್ಷಸೀ ಪ್ರವೃತ್ತಿಯ ಬಗ್ಗೆ ಅಸಹ್ಯ ಪಟ್ಟುಕೊಂಡರು, ಕಟುವಾಗಿ ಖಂಡಿಸಿದರು. ಕಮಿಷನ್ ತನ್ನ ಅಂತಿಮ ವರದಿಯನ್ನು ತಯಾರಿಸುವುದರಲ್ಲಿತ್ತು. ಹಂಟರ್ ಆಯೋಗವು ಆತನಿಗೆ ಯಾವುದೇ ಶಿಕ್ಷೆಯನ್ನು ವಿಧಿಸಲಿಲ್ಲ, ಯಾವುದೇ ಶಿಸ್ತು ಕ್ರಮವನ್ನೂ ಹೇರಲಿಲ್ಲ. ಏಕೆಂದರೆ ಡೈಯರ್ ಕ್ರಮಕ್ಕೆ ಹಲವು ಸ್ತರಗಳ ಮೇಲಧಿಕಾರಿಗಳ ಅನುಮೋದನೆ, ಕ್ಷಮೆ ಇತ್ತು. ಆರ್ಮಿ ಕೌನ್ಸಿಲ್ ಅದನ್ನು ಎತ್ತಿ ಹಿಡಿದಿತ್ತು. ರಾಜಕೀಯ ಕಾರಣಕ್ಕಾಗಿ ಮಿಲಿಟರಿ ಅಥವಾ ಕಾನೂನು ವಿಚಾರಣೆ ಸಾಧ್ಯವಾಗುವುದಿಲ್ಲ ಎಂಬ ನಿರ್ಣಯ ಮೂಡಿತ್ತು. ಕೊನೆಗೂ ಜನರಲ್ ಡೈಯರ್ ತನ್ನ ಕರ್ತವ್ಯವನ್ನು ತಪ್ಪಾಗಿ ಭಾವಿಸಿ ನಡೆದಿದ್ದ ಅಪರಾಧದಲ್ಲಿ ತಪ್ಪಿತಸ್ಥ ಎಂದು ತೀರ್ಮಾನಿಸಿ, ೧೯೨೦ರ ಮಾರ್ಚ್ ೨೩ರಂದು ಆತನ ಕಮ್ಯಾಂಡ್‌ನಿಂದ ಆತನನ್ನು ಬರಖಾಸ್ತು ಮಾಡಲಾಯಿತು. ಮುಂದೆ ಎಂದಿಗೂ ಭಾರತದಲ್ಲಿ ನೇಮಕವಾಗದಂತೆ ನಿರ್ಬಂಧ ಹೇರಲಾಯಿತು. ಮುಂದೆ ಜನರಲ್ ಡೈಯರ್ ಜಾಂಡಿಸ್ ಮತ್ತು ಆರ್ಟರಿಯೋಸ್ಕ್ಲೆರೋಸಿಸ್‌ನಿಂದ ಬಳಲಿದ ಹಾಗೂ ಆಸ್ಪತ್ರೆಗೆ ಸೇರಿದ, ೧೯೨೭ರಲ್ಲಿ ಆತ ಸತ್ತ.

ಇದರಲ್ಲಿ ಜನರಲ್ ಡೈಯರ್‌ನ ಕುಕಾರ್ಯಕ್ಕೆ ಕುಮ್ಮಕ್ಕು ಮತ್ತು ಅಧಿಕೃತ ಅನುಮೋದನೆಯನ್ನು ನೀಡಿ ಬೆಂಬಲಿಸಿದ್ದ ಲೆಫ್ಟಿನೆಂಟ್ ಜನರಲ್ ಆಗಿದ್ದ ಮೈಕೆಲ್ ಒಡ್ವೋವರ್ ಇನ್ನೊಂದು ಬಗೆಯ ಅಂತ್ಯವನ್ನು ಕಂಡ. ಜಲಿಯನ್‌ವಾಲಾ ಬಾಗ್





**ಜಲಿಯನ್‌ವಾಲಾ ಬಾಗ್ ಐತಿಹಾಸಿಕ ಸ್ಮಾರಕ**

ಹತ್ಯಾಕಾಂಡದಲ್ಲಿ ಗಾಯಗೊಂಡು ಪ್ರಾಣ ಉಳಿಸಿಕೊಂಡಿದ್ದ ಒಬ್ಬ ವ್ಯಕ್ತಿ, ಕ್ರಾಂತಿಕಾರಿ ಉಧಾಮ್ ಸಿಂಗ್ ಈತನನ್ನು ಕೊಲ್ಲುವ ಪಣತೊಟ್ಟಿದ್ದ. ಕೊನೆಗೂ ೧೯೪೦ರ ಮಾರ್ಚ್ ೧೩ರಂದು ಲಂಡನ್ನಿನ ಕ್ಯಾಕ್ಸ್‌ಟನ್ ಹಾಲ್ ಎಂಬಲ್ಲಿ ಉಧಾಮ್ ಸಿಂಗ್ ಮೈಕೆಲ್ ಒಡ್ವೋವರನನ್ನು ಗುಂಡಿಕ್ಕಿ ಹತ್ಯೆ ಮಾಡಿದ. ಆಗ ಒಡ್ವೋವರನಿಗೆ ವಯಸ್ಸು ೭೫ ವರ್ಷ. ವಿಚಾರಣೆಯ ನಂತರ ಉಧಾಮ್ ಸಿಂಗ್‌ಗೆ ಅದೆ ವರ್ಷದ ಜುಲೈ ೩೧ರಂದು ಫಾಸಿ ಶಿಕ್ಷೆಗೆ ಗುರಿಪಡಿಸಲಾಯಿತು. ಆ ಕಾಲದಲ್ಲಿ ಜವಾಹರಲಾಲ್ ನೆಹರು ಮತ್ತು ಮಹಾತ್ಮ ಗಾಂಧಿಯವರೂ ಸೇರಿದ ಹಾಗೆ ಹಲವಾರು ರಾಷ್ಟ್ರೀಯ ಆಂದೋಲನದ ನಾಯಕರು ಉಧಾಮ್ ಸಿಂಗ್‌ನ 'ಹತ್ಯೆಯ ಕಾರ್ಯವು ಧೈರ್ಯದ ಕೆಲಸವಾಗಿದ್ದರೂ ಅದು ನಿರರ್ಥಕ' ಎಂದು ಖಂಡಿಸಿದ್ದರು. ೧೯೬೨ರಲ್ಲಿ ಪ್ರಧಾನಿಯಾಗಿದ್ದ ಜವಾಹರಲಾಲ್ ನೆಹರು ಉಧಾಮ್ ಸಿಂಗ್ ಅವರನ್ನು "ನಾವು ಸ್ವತಂತ್ರರಾಗಲು ನೇಣಿಗೆ ಮುತ್ತಿಕ್ಕಿದ್ದ ಉಧಾಮ್ ಸಿಂಗ್‌ರನ್ನು ಗೌರವದಿಂದ ನಮಸ್ಕರಿಸುತ್ತೇನೆ' ಎಂದು ಹೇಳುತ್ತ, ಅವರಿಗೆ 'ಶಹೀದ್ ಎ ಆಜ಼ಮ್' ಎಂಬ ಬಿರುದನ್ನೂ ನೀಡಿದ್ದರು.

**ಕಡೆಗೂ ಕ್ಷಮೆ ಕೋರಲಿಲ್ಲ**

೧೯೧೯ರ ಏಪ್ರಿಲ್ ೧೩ರಂದು ನಡೆದ ಸಾಮೂಹಿಕ ಪೈಶಾಚಿಕ ಹತ್ಯಾಕಾಂಡ ನಡೆದು ಈ ವರ್ಷದ ಏಪ್ರಿಲ್ ೧೩ಕ್ಕೆ ನೂರು ವರ್ಷಗಳು ತುಂಬುತ್ತವೆ. ಇದು ಬ್ರಿಟಿಷರ ವಸಾಹತುಶಾಹಿ ಆಳ್ವಿಕೆಯ ಅತ್ಯಂತ ಹೀನ ಮತ್ತು ನಾಚಿಕೆಗೇಡಿನ ಘಟನೆ ಎಂದು ಇಡೀ ಜಗತ್ತು ಸಾರಿದೆ. ಬ್ರಿಟನ್ನಿನ ಮಾಧ್ಯಮಗಳು, ವಿಚಾರವಂತರು, ಅಷ್ಟೇ ಏಕೆ ಹಲವು ರಾಜಕಾರಣಿಗಳೂ ಇದನ್ನು ಖಂಡಿಸಿ, ಬ್ರಿಟನ್ ಇದಕ್ಕಾಗಿ ಸ್ವತಂತ್ರ ಭಾರತದೊಂದಿಗೆ ಕ್ಷಮೆಯನ್ನು ಯಾಚಿಸಬೇಕು ಎಂದು ಒತ್ತಾಯಿಸುತ್ತಲೇ ಬಂದಿದ್ದಾರೆ. ಆದರೆ ಅಂಥ ಅಧಿಕೃತವಾದ ಬೇಷರತ್ತು ಕ್ಷಮಾಯಾಚನೆ ಈವರೆಗೂ ಆ ದೇಶದಿಂದ ಬಂದಿಲ್ಲ.

ರಾಣಿ ಎರಡನೇ ಎಲಿಜ಼ಬೆತ್ ೧೯೬೧ ಮತ್ತು ೧೯೮೩ರಲ್ಲಿ ಭಾರತಕ್ಕೆ ಭೇಟಿ ಕೊಟ್ಟಾಗ ಈ ಘಟನೆಯ ಉಲ್ಲೇಖವನ್ನು ಮಾಡಿರಲಿಲ್ಲ. ಆದರೆ, ೧೪ ಅಕ್ಟೋಬರ್, ೧೯೯೭ರ ಭೇಟಿಯಲ್ಲಿ ಸರಕಾರಿ ಔತಣ ಕೂಟದಲ್ಲಿ, "ನಮ್ಮ ಭೂತಕಾಲದಲ್ಲಿ ಕೆಲವು ಅಹಿತಕರ ಘಟನೆಗಳು ನಡೆದವು ಎನ್ನುವುದು ರಹಸ್ಯವಾದ ಮಾತೇನಲ್ಲ. ಜಲಿಯನ್‌ವಾಲಾ ಬಾಗ್ ಒಂದು ದುರಂತದ ಘಟನೆ. ಆದರೆ ನಾವು ಕೆಲವೊಮ್ಮೆ ಎಷ್ಟೇ ಬಯಸಿದರೂ ಇತಿಹಾಸವನ್ನು ತಿದ್ದಿ ಬರೆಯಲು ಸಾಧ್ಯವಿಲ್ಲ," ಎಂದು ಅಡ್ಡಗೋಡೆಯ ಮೇಲೆ ದೀಪವಿಟ್ಟಿದ್ದರು.

ಕ್ಷಮೆಗಾಗಿ ಬಹಳ ಕಾಲದ ಬೇಡಿಕೆಯಿದೆ. ವಿನ್‌ಸ್ಟನ್ ಚರ್ಚಿಲ್ ೮ ಜುಲೈ ೧೯೨೦, ಹೌಸ್ ಆಫ್ ಕಾಮನ್‌ನಲ್ಲಿ ಕರ್ನಲ್ ಡೈಯರ್‌ನಿಗೆ ಶಿಕ್ಷೆ ನೀಡಬೇಕು ಎಂದು ಒತ್ತಾಯಿಸಿದ್ದರು. ರಾಕ್ಷಸೀ ಕ್ರಮವೆಂದು ಬಣ್ಣಿಸಿದ ಅವರು ಕರ್ನಲ್ ಡೈಯರ್ ಕಡ್ಡಾಯ ನಿವೃತ್ತಿಗೆ ಅರ್ಹ ಎಂದರು.

ಮೊದಲ ಅಧಿಕಾರದಲ್ಲಿದ್ದ ಬ್ರಿಟಿಷ್ ಪ್ರಧಾನಿ, ಡೇವಿಡ್ ಕ್ಯಮರನ್ ಫೆಬ್ರವರಿ ೨೦೧೩, ತಾಣಕ್ಕೆ ಭೇಟಿ ನೀಡಿದರು. ಆಗ ಅವರೂ, "ಬ್ರಿಟಿಷ್ ಇತಿಹಾಸದಲ್ಲಿ ನಡೆದ, ವಿನ್‌ಸ್ಟನ್ ಚರ್ಚಿಲ್ ಅವರು ಆ ಕಾಲದಲ್ಲಿ ರಾಕ್ಷಸೀಯ ಎಂದು ಬಣ್ಣಿಸಿದ್ದ ಅತ್ಯಂತ ಲಜ್ಜಾಸ್ಪದವಾದ ಘಟನೆಯಾಗಿದೆ. ಇಲ್ಲಿ ನಡೆದದ್ದನ್ನು ನಾವು ಎಂದಿಗೂ ಮರೆಯಬಾರದು, ಶಾಂತಿಯುತ ಪ್ರತಿಭಟನೆಯ ಹಕ್ಕಿನ ಪರವಾಗಿ ನಿಲ್ಲುತ್ತೇವೆ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು" ಎಂದರೇ ವಿನಾ ಕ್ಯಮರನ್ ಅಧಿಕೃತವಾದ ಕ್ಷಮಾಯಾಚನೆ ಮಾಡಲಿಲ್ಲ.

ಈ ನಿಲುವನ್ನು ಟೀಕಿಸಿದ ಲೇಖಕ, ಪತ್ರಕರ್ತ ಸಂಕರ್ಷನ್ ಠಾಕುರ್ ಟೆಲಿಗ್ರಾಫ್ ಪತ್ರಿಕೆಯಲ್ಲಿ ಬರೆದರು ಹೀಗೆ : "ಸುಮಾರು ನೂರು ಕಳೆದರೂ, ಈ ಬ್ರಿಟಿಷ್ ಮುಂದಾಳುಗಳು ೧೯೧೯ರ ಹತ್ಯಾಕಾಂಡವನ್ನು ಉಲ್ಲೇಖಿಸಲು ಸರಿಯಾದ ಪದಕ್ಕಾಗಿ ಪದಕೋಶವನ್ನು ಹುಡಿಕಿದ್ದೇ ಹುಡುಕಿದ್ದು. ಆದರೂ ಈವರೆಗೆ ಅವರಿಗೆ 'ಸಾರಿ' (ಕ್ಷಮಿಸಿ) ಎಂಬ ಸರಳವಾದ ಪದ ದೊರಕಿಲ್ಲ." ಬ್ರಿಟನ್ ಭಾರತದ ಕ್ಷಮೆಯಾಚಿಸಬೇಕು ಎಂಬ ಬೇಡಿಕೆ ೨೦೧೬ರಲ್ಲಿ ಮತ್ತೊಮ್ಮೆ ಮೇಲೆದ್ದಿತು. ಪ್ರಿನ್ಸ್ ವಿಲಿಯಮ್ ಮತ್ತು ಕೇಟ್ ಮಿಡ್ಲ್‌ಟನ್ ತಮ್ಮ ಪ್ರವಾಸದಲ್ಲಿ ಭೇಟಿ ನೀಡಬೇಕಾದ ಸ್ಥಳಗಳ ಪಟ್ಟಿಯಿಂದ ಜಲಿಯನ್ ಸ್ಮಾರಕವನ್ನು ಕೈಬಿಡುವುದಕ್ಕೆ ನಿರ್ಧರಿಸಿದರು. ೨೦೧೭ರಲ್ಲಿ ಲೇಖಕ ರಾಜಕಾರಣಿ ಶಶಿತರೂರ್ 'ವಸಾಹತುಶಾಹಿ ಆಳ್ವಿಕೆಯಲ್ಲಿ ಬ್ರಿಟನ್ ಗೈದ ಪ್ರಮಾದಕ್ಕಾಗಿ ಭಾರತದ ಜನತೆಯ ಕ್ಷಮೆ ಯಾಚಿಸಲು ೨೦೧೯ರ ವರ್ಷ(ಶತಾಬ್ದಿ ವರ್ಷ) ಸೂಕ್ತವಾದ ಸಮಯ' ಎಂದರು. ೨೦೧೯ರ ಫೆಬ್ರವರಿಯಲ್ಲಿ ಬ್ರಿಟಿಷ್ ಹೌಸ್ ಆಫ್ ಲಾರ್ಡ್ಸ್‌ನಲ್ಲಿ ಜಲಿಯನ್‌ವಾಲಾ ಬಾಗ್ ಹತ್ಯಾಕಾಂಡದ ಕುರಿತು ಸಂವಾದವನ್ನು ಆರಂಭಿಸಲಾಯಿತು. ಇದೇ ಏಪ್ರಿಲ್ ೧೩ಕ್ಕಿಂತ ಮುಂಚೆ ಬ್ರಿಟನ್ ಪ್ರಧಾನಿ ಮಿಸ್ ಥೆರೆಸಾ ಮೇಯವರು ಘಟನೆಯನ್ನು 'ಬ್ರಿಟಿಷ್ ಇತಿಹಾಸದ ಮೇಲೆ ತಗುಲಿದ ನಾಚಿಕೆಗೇಡಿನ ಕಳಂಕ' ಎಂದರೇ ವಿನಾ ಈಗಲೂ ಅಧಿಕೃತವಾಗಿ ಕ್ಷಮೆಯಾಚನೆ ಮಾಡಲಿಲ್ಲ.

**ಐತಿಹಾಸಿಕ ಸ್ಮಾರಕ**

ಅಮೃತಸರದಲ್ಲಿ ಸಿಕ್ಖರ ಪ್ರಸಿದ್ಧ ಸ್ವರ್ಣ ಮಂದಿರ ಬಳಿಯಲ್ಲಿಯೇ ಇದೆ ಜಲಿಯನ್‌ವಾಲಾ ಬಾಗ್. ಈಗ ಅದು ಒಂದು ಮನೋಹರ ಉದ್ಯಾನವಾಗಿದೆ. ಅಮೆರಿಕದ ಆರ್ಕಿಟೆಕ್ಟ್ ಬೆಂಜಮಿನ್ ಪೋಲ್ಕ್ ಅವರು ರೂಪಿಸಿದ ಒಂದು ಸ್ಮಾರಕವಿದೆ. ಗೋಡೆಗಳ ಮೇಲೆ ಬಡಿದ ಗುಂಡುಗಳ ಗುರುತುಗಳಿವೆ, ಯಾವ ಸಂದಿಯಿಂದ ಜನರಲ್ ಡೈಯರ್ ತನ್ನ ದಳದೊಂದಿಗೆ ನುಗ್ಗಿದ್ದ ಎಲ್ಲಿ ಅವರು ನಿಂತು ಅಮಾಯಕರ ಮೇಲೆ ಗುಂಡಿನ ಮಳೆಗರೆದಿದ್ದರು, ಐತಿಹಾಸಿಕ ಬಾವಿ ಎಲ್ಲವನ್ನೂ ಗುರುತಿಸುವ ಫಲಕಗಳಿವೆ. ಆದರೆ ನಿಮಗೆ ಕಳೆದುಹೋದ ಇತಿಹಾಸವನ್ನು ಅರಿತು, ಅದರಿಂದ ಇಂದಿಗಾಗಿ ಪಾಠವನ್ನು ಕಲಿಯುವ ಮನಸ್ಸಿದ್ದರೆ ಇಲ್ಲಿ ಬಹಳಷ್ಟು ಇದೆ, ಇಲ್ಲವಾದರೆ ಸ್ವರ್ಣ ಮಂದಿರದ ತರಹ ಇದೂ ಒಂದು ಪ್ರವಾಸಿ ಆಕರ್ಷಣೆಯಾಗಿ ಉಳಿಯಬಹುದು. ಐತಿಹಾಸಿಕ ಸ್ಮಾರಕಗಳು ಇತಿಹಾಸದ ಮೂಕ ಸಾಕ್ಷಿಗಳು, ಉತ್ಕೃಷ್ಟ ಮಾಹಿತಿಯ ಹೊತ್ತಿಗೆಗಳು.


**ಎಂ. ಅಬ್ದುಲ್ ರೆಹಮಾನ್ ಪಾಷ**
೮೧/೩೭-೩, ೧೨ನೇ ಡಿ ಮೇನ್
ಶಿವನಗರ, ಬೆಂಗಳೂರು – ೫೬೦ ೦೧೦

# ಮೇ ದಿನದ ಚಿಂತನೆ

# ಕಾರ್ಮಿಕ ವರ್ಗಕ್ಕೊಂದು ಹೊಸ ಸವಾಲು ಅಲೆಮಾರಿ ಕಾರ್ಮಿಕರು

ಹೊಸತು-೨೦ ವಿಶೇಷ ಲೇಖನ

ಮುರಳಿಧರ ಚಿಕ್ಕಮಗಳೂರು

**ಬಂ**ಡವಾಳ ಅಂತರರಾಷ್ಟ್ರೀಯ ಗುಣ ಹೊಂದುವುದು ಅದರ ಮಾರುಕಟ್ಟೆಯ ಅರಸುವಿಕೆಯಿಂದಾಗಿ. ನದಿ ಹೇಗೆ ತಗ್ಗಿನ ಪ್ರದೇಶಗಳತ್ತ ಹರಿಯುತ್ತದೆಯೊ ಹಾಗೆಯೇ ಬಂಡವಾಳವೂ ಕೂಡ ಅತ್ಯಂತ ಕಡಿಮೆ ಬೆಲೆಗೆ ಕೂಲಿಕೆಲಸಗಾರರು ದೊರೆಯುವತ್ತ ಹರಿಯುತ್ತದೆ. ಬಂಡವಾಳದ ಏಕೈಕ ಗುರಿ ಲಾಭ ಗಳಿಕೆ. ಕನಿಷ್ಠ ಕೂಲಿ–ಗರಿಷ್ಠ ಲಾಭ ಎಂಬುದೇ ಬಂಡವಾಳದ ನಿತ್ಯ ಜಪ. ಆದ ಕಾರಣವೇ ಕನಿಷ್ಠ ಕೂಲಿಗೆ ಶ್ರಮಿಕರನ್ನು ಒದಗಿಸುವಂತಹ ಪ್ರಭುತ್ವಗಳನ್ನು ಸ್ಥಾಪಿಸುವುದೇ ಬಂಡವಾಳದ ಅಂತರ್ಗತ ಕಾರ್ಯಸೂಚಿ. ಈ ಕಾರ್ಯಸೂಚಿಯ ಜಾರಿಗಾಗಿಯೇ ವಿಶ್ವಬ್ಯಾಂಕ್, ವಿಶ್ವ ವ್ಯಾಪಾರಿ ಸಂಸ್ಥೆ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಇತ್ಯಾದಿ ದಲ್ಲಾಳಿ ಸಂಸ್ಥೆಗಳು ಸ್ಥಾಪಿತಗೊಂಡಿರುವುದು. ಬಂಡವಾಳ ಅಧಿಕ ಲಾಭ ಗಳಿಸಬೇಕೆಂದರೆ ಅದಕ್ಕೆ ಅವಶ್ಯಕವಾದದ್ದು ಸುಗಮವಾಗಿ ವ್ಯಾಪಾರ ವ್ಯವಹಾರ ನಡೆಸಲು ಬೇಕಾದಂತಹ ರಾಜಕೀಯ ವ್ಯವಸ್ಥೆ ಮತ್ತು ಆರ್ಥಿಕ ನೀತಿಗಳು. ಬಿತ್ತನೆಗೆ ಭೂಮಿಯನ್ನು ಹದಗೊಳಿಸುವಂತೆಯೆ ಬಂಡವಾಳ ಹೂಡಿಕೆಗೆ ಮಾರುಕಟ್ಟೆಯನ್ನು ಹದಗೊಳಿಸಿಕೊಡುವುದು ದಲ್ಲಾಳಿ ಸರ್ಕಾರದ ಕೆಲಸ. ಬಂಡವಾಳಶಾಹಿ ವ್ಯವಸ್ಥೆ ಇಂತಹ ಸರ್ಕಾರವನ್ನು ಸೃಷ್ಟಿಸುತ್ತದೆ. ಹಾಗೆ ಸೃಷ್ಟಿಸಿದ ವ್ಯವಸ್ಥೆಯನ್ನೇ ಶ್ರೇಷ್ಠ ಪ್ರಜಾಪ್ರಭುತ್ವವೆಂದು ಬಿರುದು ನೀಡಿ ಪ್ರಶಂಸಿಸುತ್ತದೆ. ಜೊತೆಗೇ ತನ್ನ ನೆಲೆಯನ್ನು ಖಾಯಂಗೊಳಿಸಿಕೊಳ್ಳುತ್ತದೆ.

**ಕಾರ್ಮಿಕ ಕಾನೂನುಗಳು – ಸುಧಾರಣೆಯ ಸೋಗು**

ಬಂಡವಾಳಶಾಹಿ ಜಾಗತೀಕರಣಕ್ಕೆ ಶರಣಾದ ಭಾರತ ಸರ್ಕಾರ ನವ ಉದಾರ ಆರ್ಥಿಕ ನೀತಿಗಳನ್ನು ಜಾರಿಗೊಳಿಸಿದ ಕಾರಣವೇ ಈಗ ದೇಶದಲ್ಲಿ ಅಸಮಾನತೆ ಅಗಾಧ ಪ್ರಮಾಣದಲ್ಲಿ ಬೆಳೆದು ನಿಂತಿರುವುದು. ನವ ಉದಾರವಾದ ಭಾರತದ ಸಂವಿಧಾನದ ಪ್ರಸ್ತಾವನೆಯಲ್ಲಿರುವ ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಮಾನತೆಯ ಆಶಯಗಳ ಉಲ್ಲಂಘನೆ. ಸಂವಿಧಾನಾತ್ಮಕವಾಗಿ ಆಳ್ವಿಕೆ ನಡೆಸಬೇಕಾದ ಚುನಾಯಿತ ಸರ್ಕಾರವೇ ಸಂವಿಧಾನದ ಆಶಯಗಳನ್ನು ಉಲ್ಲಂಘಿಸುತ್ತಿರುವುದು ಈ ದೇಶದ ದುರಂತ. ಇದಕ್ಕೆ ಒಂದು ನಿದರ್ಶನವೆಂದರೆ ಪ್ರಧಾನ ಮಂತ್ರಿ ನರೇಂದ್ರ ಮೋದಿ ೨೦೧೪ರ ಆಗಸ್ಟ್ ೧೫ರಂದು ದೆಹಲಿಯ ಕೆಂಪುಕೋಟೆ ಮೇಲೆ ನಿಂತು ಪ್ರಪಂಚದ ಎಲ್ಲ ಬಂಡವಳಿಗರನ್ನು "ಮೇಕ್ ಇನ್ ಇಂಡಿಯ" ಹೆಸರಿನಲ್ಲಿ ಭಾರತದಲ್ಲಿ ಬಂಡವಾಳ ಹೂಡಲು ಕೈಬೀಸಿ ಕರೆದದ್ದು ಅಗ್ಗದ ಕೂಲಿಕಾರರನ್ನು ಅವರ ಸೇವೆಗೆ ದೊರಕಿಸಿಕೊಡುವ ಆಶ್ವಾಸನೆಯಾಗಿತ್ತು. ಈ ಹಿನ್ನೆಲೆಯಲ್ಲೆ ವಿವಿಧ ಕಾರ್ಮಿಕ ಕಾನೂನುಗಳನ್ನು ಸುಧಾರಣೆಯ ಸೋಗಿನಲ್ಲಿ ಬಂಡವಳಿಗರ ಬೇಡಿಕೆಗಳಿಗನುಗುಣವಾಗಿ ತಿದ್ದುಪಡಿ ಮಾಡಲು ಸಜ್ಜಾಯಿತು. ಪ್ರಸ್ತುತ ಚಾಲ್ತಿಯಲ್ಲಿರುವ ನಲವತ್ನಾಲ್ಕು ಕಾರ್ಮಿಕ ಕಾನೂನುಗಳನ್ನು ಕ್ರೋಢೀಕರಿಸಿ, ಮಾಲೀಕರ ಅವಶ್ಯಕತೆಗೆ ತಕ್ಕಂತೆ ರೂಪಿಸಿ ನಾಲ್ಕು ಕೋಡ್‌ಗಳನ್ನು ಕೇಂದ್ರ ಸರ್ಕಾರ ರಚಿಸಿದೆ, ಟ್ರೇಡ್ ಯೂನಿಯನ್ಸ್ ಕಾಯ್ದೆ ೧೯೨೬ರಲ್ಲಿರುವ ಹೊರಗಿನ ನಾಯಕತ್ವ ಪಡೆಯುವ ಸಂಘಟಿತ ಕಾರ್ಮಿಕ ಸಂಘಗಳ ಸ್ವಾತಂತ್ರ್ಯವನ್ನು ಚ್ಯುತಿಗೊಳಿಸಲು ತಯಾರಿ ನಡೆಸಿದೆ. ಕೈಗಾರಿಕಾ ಬಾಂಧವ್ಯದ ಕೋಡ್, ವೇತನದ ಕೋಡ್, ಸುರಕ್ಷತೆಯ ಕೋಡ್ ಮತ್ತು ಕಲ್ಯಾಣ ಭದ್ರತೆಯ ಕೋಡ್ ರಚಿಸಿ, ವಿದೇಶಿ ಹಾಗೂ ದೇಶೀಯ ಬಂಡವಳಿಗರನ್ನು ಸಂಪ್ರೀತಗೊಳಿಸಿದರೂ, ಕೇಂದ್ರ ಕಾರ್ಮಿಕ ಸಂಘಟನೆಗಳು ರಾಷ್ಟ್ರೀಯ ಮಟ್ಟದಲ್ಲಿ ನಡೆಸಿದ ಸಾರ್ವತ್ರಿಕ ಮುಷ್ಕರಗಳು ಮತ್ತು ಪ್ರತಿಭಟನೆಗಳಿಂದಾಗಿ ಈ ಕೋಡ್‌ಗಳು ಇನ್ನೂ ಜಾರಿಗೊಂಡಿಲ್ಲ, ಪಾರ್ಲಿಮೆಂಟ್‌ನಲ್ಲಿ ಎಡಪಕ್ಷಗಳು ತಮ್ಮ ಪ್ರಬಲ ವಿರೋಧವನ್ನು ವ್ಯಕ್ತಪಡಿಸಿವೆ.

ಕಾರ್ಮಿಕ ಕಾನೂನುಗಳ "ಸುಧಾರಣೆ"ಯ ಯೋಜನೆಯ ಜೊತೆ ಜೊತೆಗೆ ಮೋದಿ ಸರ್ಕಾರ ಸದ್ದಿಲ್ಲದೆ ಹಲವಾರು ಕ್ರಮಗಳ ಮೂಲಕ ಬಂಡವಳಿಗರ ಪ್ರಮುಖ ಬೇಡಿಕೆಗಳಾದ ಅಗ್ಗದ ಶ್ರಮಶಕ್ತಿ ಮತ್ತು ಕಾರ್ಮಿಕರನ್ನು ಬೇಕಾದಾಗ ನೇಮಕಾತಿ ಮಾಡಿಕೊಳ್ಳುವ ಮತ್ತು ಬೇಡವೆನಿಸಿದಾಗ ತೆಗೆದುಹಾಕುವ ಸ್ವಾತಂತ್ರ್ಯವನ್ನು ಈಡೇರಿಸಿದೆ. ಮೋದಿ ಸರ್ಕಾರದ ಈ ಕೆಳಕಂಡ ಕ್ರಮಗಳು ಮತ್ತು ಯೋಜನೆಗಳು ಕಾರ್ಮಿಕರು ಮತ್ತು ಕಾರ್ಮಿಕ ಸಂಘಟನೆಗಳ ಮೇಲೆ ಬೀರುವ ದುಷ್ಪರಿಣಾಮಗಳ ಬಗ್ಗೆ ವಿಮರ್ಶಿಸಬೇಕಾದದ್ದು ಅತ್ಯಂತ ಅಗತ್ಯ.

**(ಅ) ಸಣ್ಣ ಕಾರ್ಖಾನೆಗಳ ಕಾಯ್ದೆ**

ಭಾರತದ ಎಲ್ಲ ಕಾರ್ಖಾನೆಗಳಿಗೂ ಅನ್ವಯವಾಗುವ ಏಕೈಕ ಕಾನೂನು "ಕಾರ್ಖಾನೆಗಳ ಕಾಯ್ದೆ–೧೯೪೮". ಈ ಕಾಯ್ದೆಯಿಂದ ಸಣ್ಣ ಉದ್ದಿಮೆದಾರರಿಗೆ ವಿನಾಯ್ತಿ ನೀಡಬೇಕೆಂಬುದು ಸಣ್ಣ ಉದ್ದಿಮೆದಾರರ ಸಂಘದ ಬೇಡಿಕೆ. ಈ ಬೇಡಿಕೆಯನ್ನು ಈಡೇರಿಸಲು ಸಜ್ಜಾದ ಮೋದಿ ಸರ್ಕಾರ ಕಾರ್ಖಾನೆಗಳ ಕಾಯ್ದೆ–






೧೯೪೮ನ್ನು ವಿಭಜಿಸಿ "ಸಣ್ಣ ಕಾರ್ಖಾನೆಗಳ ಕಾಯ್ದೆ" ಎಂಬ ಹೊಸ ಮಸೂದೆಯನ್ನು ಸಿದ್ಧಪಡಿಸಿದೆ. ನಲವತ್ತು ಮತ್ತು ಅದಕ್ಕಿಂತ ಕಡಿಮೆ ಕಾರ್ಮಿಕರಿರುವ ಉತ್ಪಾದನೆಯಲ್ಲಿ ತೊಡಗಿರುವ ಕಾರ್ಖಾನೆಗಳನ್ನು "ಸಣ್ಣ ಕಾರ್ಖಾನೆ"ಯ ವ್ಯಾಪ್ತಿಗೆ ತರಲಾಗಿದೆ. ಈ ಕಾರ್ಮಿಕರೆಲ್ಲರೂ ಗುತ್ತಿಗೆ ಕಾರ್ಮಿಕರಾಗಬಹುದಾದ ಸಾಧ್ಯತೆಗಾಗಿ "ಗುತ್ತಿಗೆ ಕಾರ್ಮಿಕ ಪದ್ಧತಿ (ನಿಯಂತ್ರಣ ಹಾಗೂ ರದ್ದತಿ)" ಕಾಯ್ದೆಯಲ್ಲಿ ಒಬ್ಬ ಗುತ್ತಿಗೆದಾರ ಯಾವುದೇ ಪರವಾನಗಿಯಿಲ್ಲದೆ ೪೯ ಕಾರ್ಮಿಕರನ್ನು ತೆಗೆದುಕೊಳ್ಳಲು ಸಾಧ್ಯವಾಗುವ ಹಾಗೆ ತಿದ್ದುಪಡಿ ಮಾಡಲು ತಯಾರಿ ನಡೆಸಿದೆ ಅಂದರೆ "ಸಣ್ಣ ಕೈಗಾರಿಕೆ"ಗಳಲ್ಲಿ ದುಡಿಯುವ ಕಾರ್ಮಿಕರೆಲ್ಲರೂ ಗುತ್ತಿಗೆ ಕಾರ್ಮಿಕರಾಗ ಬಹುದು. ಈ ಕಾರ್ಮಿಕರೇನಾದರೂ ಸಂಘಟಿತರಾದಲ್ಲಿ ಕಾರ್ಖಾನೆ ಮಾಲೀಕರು ಇವರನ್ನು ಕೆಲಸದಿಂದ ತೆಗೆಯಬೇಕೆಂದಲ್ಲಿ ಗುತ್ತಿಗೆದಾರನ ಗುತ್ತಿಗೆ ರದ್ದು ಪಡಿಸಿದರೆ ಸಾಕು. ಸಣ್ಣ ಕಾರ್ಖಾನೆಯ ವ್ಯಾಪ್ತಿಗೆ ಬರುವ ಕಾರ್ಖಾನೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಹದಿನಾಲ್ಕು ಕಾರ್ಮಿಕ ಕಾನೂನುಗಳು ಅನ್ವಯ ವಾಗುವುದಿಲ್ಲ. ಅವುಗಳಲ್ಲಿ ಕನಿಷ್ಠ ಕೂಲಿ ಕಾಯ್ದೆ ೧೯೪೮, ಹೆರಿಗೆ ರಜೆ ಸೌಲಭ್ಯ ಕಾಯ್ದೆ ೧೯೬೧ ಇತ್ಯಾದಿ ಪ್ರಮುಖ ಕಾನೂನುಗಳೂ ಸೇರಿವೆ. ಅಂದಾಗ ಸಣ್ಣ ಕಾರ್ಖಾನೆಗಳಲ್ಲಿನ ಕಾರ್ಮಿಕರು ಅತ್ಯಂತ ಶೋಷಣೆಗೊಳಗಾಗುವುದು ಖಂಡಿತ.

**(ಆ) ಅಪ್ರೆಂಟೀಸ್ ಕಾಯ್ದೆ – ೧೯೬೧**

ಈ ಕಾಯ್ದೆಯ ಪ್ರಮುಖ ಉದ್ದೇಶವೆಂದರೆ ಅಪ್ರೆಂಟೀಸ್‌ಗಳ ತರಬೇತಿಯ ನಿಯಂತ್ರಣ ಮತ್ತು ಹತೋಟಿ, ಕೆಲವೇ ಕೆಲವು ನಿಗದಿತ ವೃತ್ತಿಗಳಲ್ಲಿ ತರಬೇತಿ ನೀಡಿ ತರಬೇತಿದಾರರ ಕೌಶಲ್ಯವನ್ನು ಹೆಚ್ಚಿಸುವ ಸರ್ಕಾರಗಳ ಪ್ರಯತ್ನ. ಒಂದು ಕಾರ್ಖಾನೆಯಲ್ಲಿ ಎಷ್ಟು ಅಪ್ರೆಂಟೀಸ್‌ಗಳಿರಬೇಕೆಂಬುದು ಕಾಯ್ದೆಯಲ್ಲೇ ನಿರ್ಧರಿಸಲ್ಪಟ್ಟಿತ್ತು. ಸರ್ಕಾರ ಕಳುಹಿಸಿದ ಅಪ್ರೆಂಟೀಸ್‌ಗಳಿಗೆ ತರಬೇತಿ ನೀಡುವ ಜವಾಬ್ದಾರಿ ಕಾರ್ಖಾನೆಯ ಆಡಳಿತ ವರ್ಗದ್ದಾಗಿತ್ತು. ಕೇಂದ್ರದಲ್ಲಿ ಮೋದಿ ಸರ್ಕಾರ ಬಂದದ್ದೇ ತಡ ೨೦೧೪ರಲ್ಲಿ ಅಪ್ರೆಂಟೀಸ್‌ಕಾಯ್ದೆಗೆ ಹಲವಾರು ತಿದ್ದುಪಡಿಗಳನ್ನು ತಂದು ಅದಕ್ಕಿದ್ದ ನಿಯಂತ್ರಣ ಮತ್ತು ಹತೋಟಿಯನ್ನು ಕೈಬಿಟ್ಟಿದೆ. ಈಗ ಸರ್ಕಾರ ಮಾತ್ರವಲ್ಲದೆ "ಆಪ್ಷನಲ್ ಟ್ರೇಡ್" ಹೆಸರಿನಲ್ಲಿ ಮಾಲೀಕರೂ ಕೂಡ ಯಾವುದೇ ಮಿತಿಗೊಳಪಡದೆ ಅಪ್ರೆಂಟೀಸ್‌ಗಳನ್ನು ನೇರ ನೇಮಕಾತಿ ಮಾಡಿಕೊಳ್ಳಬಹುದು. ಈ ರೀತಿ ಸರ್ಕಾರದಿಂದ ಹಾಗೂ ಮಾಲೀಕರಿಂದ ಈ ಕಾಯ್ದೆಯ ಹೆಸರಿನಲ್ಲಿ ನೇಮಕಾತಿಗೊಂಡ ಅಪ್ರೆಂಟೀಸ್‌ಗಳು ಕೈಗಾರಿಕಾ ವಿವಾದಗಳ ಕಾಯ್ದೆ ೧೯೪೭ರಲ್ಲಿನ "ಕಾರ್ಮಿಕ" ಅರ್ಥವ್ಯಾಪ್ತಿಗೆ ಒಳಪಡದ ಕಾರಣ ಅನೇಕ ಕಾರ್ಮಿಕ ಕಾನೂನುಗಳು ಇವರಿಗೆ ಅನ್ವಯವಾಗುವುದಿಲ್ಲ. ಉದ್ದಿಮೆಗಳ ಮಾಲೀಕರು ಅಪ್ರೆಂಟೀಸ್‌ಗಳನ್ನು ನೇರವಾಗಿ ಕೆಲಸದಲ್ಲಿ ತೊಡಗಿಸಬಹುದು ಮತ್ತು ಅವರಿಗೆ ಕೊಡಬೇಕಾದ ವೇತನವನ್ನು ಸ್ಟೈಫಂಡ್ ಎಂದು ನಾಮಕರಣ ಮಾಡಿ ಅದನ್ನು ನಿರ್ಧರಿಸ ಬಹುದು. ೨೦೧೪ರ ತಿದ್ದುಪಡಿಯ ನಂತರ ಲಕ್ಷಾಂತರ ಕಾರ್ಮಿಕರು ಅಪ್ರೆಂಟೀಸ್ ಎಂದು ಕರೆಸಿಕೊಂಡು ಅಗ್ಗದ ಕೂಲಿಗೆ ತಮ್ಮ ಶ್ರಮ ಶಕ್ತಿ ಮಾರಿಕೊಳ್ಳುತ್ತಿದ್ದಾರೆ. ಮೋದಿ ಸರ್ಕಾರದ ಈ ಕೊಡುಗೆಯಿಂದಾಗಿ ಬಂಡವಾಳಿಗರಿಗೆ ಅಗ್ಗದ ಕೂಲಿಯ ಸುಗ್ಗಿ. ಹೆಚ್ಚಾಗಿ ಸಂಘಟನೆಯ ಭಯವಿಲ್ಲ.

**(ಇ) ನೀಮ್ ಸ್ಕೀಮ್**

ನ್ಯಾಷನಲ್ ಎಂಪ್ಲಾಯಬಿಲಿಟಿ ಎನ್‌ಹ್ಯಾನ್ಸ್‌ಮೆಂಟ್ ಮಿಷನ್ ಎಂಬ ಯೋಜನೆ ಮೋದಿ ಸರ್ಕಾರ ಬಂಡವಾಳಿಗರಿಗೆ ನೀಡಿದ ಅತ್ಯುತ್ತಮ ಬಳುವಳಿ ಎಂದಾದಲ್ಲಿ ಕಾರ್ಮಿಕ ವರ್ಗಕ್ಕೆ ಮಾಡಿದ ಮಹಾ ಮೋಸ ಎಂದೇ ಕರೆಯಬಹುದು. ಈ ಯೋಜನೆ ಯಾವ ಕಾರ್ಮಿಕ ಕಾನೂನನ್ನು ಬಳಸಿ ರೂಪಿಸಿದ್ದಲ್ಲ. ಆಲ್ ಇಂಡಿಯ ಕೌನ್ಸಿಲ್ ಫಾರ್ ಟೆಕ್ನಿಕಲ್ ಎಜುಕೇಶನ್ ಕಾಯ್ದೆಯ ಪರಿಚ್ಛೇದ ೧೦ ಮತ್ತು ೨೩ರಲ್ಲಿರುವ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಜಾರಿಗೊಳಿಸಿದ ಯೋಜನೆ. ಈ ನೀಮ್ ಸ್ಕೀಮ್‌ನ ಉದ್ದೇಶ ತಾಂತ್ರಿಕ ವಿದ್ಯಾಭ್ಯಾಸ ಪಡೆದ ಅಭ್ಯರ್ಥಿಗಳಿಗೆ ಕುಶಲತೆಯ ತರಬೇತಿ ನೀಡಿ ಉದ್ಯೋಗಾವಕಾಶವನ್ನು ಹೆಚ್ಚಿಸುವುದು ಎಂದು ಸಾರಲಾಗಿದೆ. ಆದರೆ ಈ ಯೋಜನೆಯ ವಿವರಗಳನ್ನು ಪರಿಶೀಲಿಸಿದಲ್ಲಿ ಇದರ ಒಳಗುಟ್ಟು ಬಹಿರಂಗಗೊಳ್ಳುತ್ತದೆ. ಶೋಷಣೆಯ ಮಾನದಂಡದಿಂದ ಅಳೆಯುವದಾದರೆ ನೀಮ್ ಸ್ಕೀಮ್ ಗುತ್ತಿಗೆ ಕಾರ್ಮಿಕ ಪದ್ಧತಿಯನ್ನು ಮೀರಿಸುತ್ತದೆ. ಯೋಜನೆಯ ವಿವರಗಳು ಹೀಗಿವೆ:

* ನೀಮ್ ಸ್ಕೀಮ್ ಅಡಿಯಲ್ಲಿ ತಾಂತ್ರಿಕ ಶಿಕ್ಷಣ ಪಡೆದ ಅಭ್ಯರ್ಥಿಗಳನ್ನು ಕಾರ್ಖಾನೆಗಳಿಗೆ ತರಬೇತಿಗೆ ಕಳುಹಿಸಬಹುದು.
* ಅಭ್ಯರ್ಥಿಗಳನ್ನು ಆರಿಸಿ ಕಾರ್ಖಾನೆಗಳಿಗೆ ಕಳುಹಿಸಲು ಫೆಸಿಲಿಟೇಟರ್ಸ್ (ಏಜೆಂಟ್ಸ್ )ಗಳು ನೊಂದಾಯಿಸಿಕೊಳ್ಳಬೇಕು.
* ಮಾನವ ಸಂಪನ್ಮೂಲ ತರಬೇತಿ ವ್ಯವಹಾರದಲ್ಲಿ ೨೫ ಕೋಟಿ ರೂಪಾಯಿಗಳಿಗೂ ಹೆಚ್ಚು ವಹಿವಾಟು ಹೊಂದಿರುವ ನೀಮ್ ಏಜೆಂಟರುಗಳು ಪ್ರತಿವರ್ಷ ೫೦೦೦ ಅಭ್ಯರ್ಥಿಗಳನ್ನು ತರಬೇತಿಯ ಹೆಸರಿನಲ್ಲಿ ಕಾರ್ಖಾನೆಗಳಿಗೆ ಕಳುಹಿಸಬಹುದು.
* ೧೫ರಿಂದ ೨೫ ಕೋಟಿ ರೂಪಾಯಿಗಳ ವಹಿವಾಟು ಹೊಂದಿರುವ ಏಜೆಂಟರುಗಳು ೩೦೦೦ ಅಭ್ಯರ್ಥಿಗಳನ್ನು ಮತ್ತು ೧೫ ಕೋಟಿ ರೂಪಾಯಿಗಳಿಗಿಂತ ಕಡಿಮೆ ವಹಿವಾಟು ಹೊಂದಿರುವ ಏಜೆಂಟರುಗಳು ೧೦೦೦ ಅಭ್ಯರ್ಥಿಗಳನ್ನು ಕಾರ್ಖಾನೆಗಳಿಗೆ ಕಳುಹಿಸಬಹುದು.
* ನೀಮ್ ಸ್ಕೀಮ್‌ನ ತರಬೇತಿಯ ಅವಧಿ ಮೂರು ತಿಂಗಳುಗಳಿಂದ ಮುವತ್ತಾರು ತಿಂಗಳುಗಳು.
* ನೀಮ್ ಸ್ಕೀಮ್‌ನ ತರಬೇತಿದಾರರು ಉತ್ಪಾದನೆಯಲ್ಲಿ ತೊಡಗಿದ್ದರೂ ಕೂಡ ಅವರು ಕೈಗಾರಿಕಾ ವಿವಾದಗಳ ಕಾಯ್ದೆ ೧೯೪೭ರ "ಕಾರ್ಮಿಕ" ಎಂಬ ಅರ್ಥವ್ಯಾಪ್ತಿಗೆ ಒಳಪಡುವುದಿಲ್ಲ. ಆದಕಾರಣ ಇವರಿಗೆ ಯಾವ ಕಾರ್ಮಿಕ ಕಾನೂನುಗಳೂ ಅನ್ವಯವಾಗುವುದಿಲ್ಲ."
* ನೀಮ್ ಸ್ಕೀಮ್ ತರಬೇತಿದಾರರು ಎಂಜಿನಿಯರಿಂಗ್ ಪದವೀಧರರಿರ ಬಹುದು. ಡಿಪ್ಲೊಮಾ ಅಥವಾ ಐಟಿಐ ಯೋಗ್ಯತಾ ಪತ್ರ ಹೊಂದಿರುವವರಿರಬಹುದು. ಆದರೆ ಅವರಿಗೆ ಕಾರ್ಖಾನೆಯ ಆಡಳಿತ ವರ್ಗ ಕೊಡುವ ಸಹಾಯ ಧನ ಕುಶಲರಲ್ಲದವರ ಕನಿಷ್ಠ ಕೂಲಿ ಮಾತ್ರ.

ನೀಮ್ ಸ್ಕೀಮ್ ಈ ಕಾರಣಗಳಿಂದಲೇ ಬಂಡವಾಳಿಗರಿಗೆ ಮೋದಿ ಸರ್ಕಾರ ನೀಡಿದ ವರದಾನವೆಂದು ಅವರ ಪ್ರಶಂಸೆಗೆ ಒಳಗಾಗಿದೆ. ಆದರೆ ಈ ಯೋಜನೆಯಲ್ಲಿ ಕಾರ್ಮಿಕರ ಪಾಡು ಮಾತ್ರ ನಿಜಕ್ಕೂ ಶೋಚನೀಯ. ಈಗ ಲಕ್ಷಾಂತರ ಕಾರ್ಮಿಕರು ತರಬೇತಿಯ ಹೆಸರಿನಲ್ಲಿ ಕನಿಷ್ಠ ಕೂಲಿಗೆ ದುಡಿಯುತ್ತಾ ಭವಿಷ್ಯದ ಅಂಧಕಾರವನ್ನೆದುರಿಸುತ್ತಿದ್ದಾರೆ. ಜೀವನಪರ್ಯಂತ ನೀಮ್ ಯೋಜನೆಗೆ ಮೊರೆಹೋಗಬೇಕಾದ ಪರಿಸ್ಥಿತಿಯಲ್ಲಿದ್ದಾರೆ. ಬಂಡವಾಳಿಗರು



ಯಾವ ಬಾಧ್ಯತೆಯೂ ಇಲ್ಲದೆ ಪರಿಸ್ಥಿತಿಯ ಲಾಭವನ್ನು ದೋಚುತ್ತಿದ್ದಾರೆ.

**(ಈ) ಕಾಲ ಮಿತಿ ಉದ್ಯೋಗ ಅಥವಾ ನಿಯತಕಾಲಿಕ ಉದ್ಯೋಗ**

ಬಂಡವಳಿಗರಿಗೆ ಮೋದಿ ಸರ್ಕಾರ ನೀಡಿರುವ ಇನ್ನೊಂದು ಮಹಾನ್ ಕೊಡುಗೆ ಎಂದರೆ ಕಾಲಮಿತಿ ಉದ್ಯೋಗವನ್ನು ಕಾನೂನು ಬದ್ಧ ವಾಗಿಸಿರುವುದು. ೨೦೧೮ರ ಮಾರ್ಚ್‌ನಲ್ಲಿ ಕೈಗಾರಿಕಾ ಸ್ಥಾಯಿ ಆದೇಶಗಳ ಕಾಯ್ದೆ ೧೯೪೬ಕ್ಕೆ ತಂದ ಒಂದು ಸಣ್ಣ ತಿದ್ದುಪಡಿ ಮಾಲೀಕರಿಗೆ ದೊಡ್ಡ ಪ್ರಮಾಣದ ಲಾಭ ತಂದುಕೊಟ್ಟಿದೆ. ಕಾಲಮಿತಿ ಉದ್ಯೋಗ ಸ್ಥಾಯಿ ಆದೇಶಗಳ ಕಾಯ್ದೆಯಲ್ಲಿ ಕೇವಲ ಸಿದ್ಧ ಉಡುಪುಗಳ ತಯಾರಿಕಾ ಉದ್ದಿಮೆಗಳಿಗೆ ಅನ್ವಯವಾಗಿತ್ತು. ಈಗ ಕೇಂದ್ರ ಸರ್ಕಾರ ತಿದ್ದುಪಡಿಯ ಮೂಲಕ ಎಲ್ಲ ಕೈಗಾರಿಕೆ ಗಳಿಗೂ ಅದನ್ನು ವಿಸ್ತರಿಸಿದೆ. ಹಾಗಾಗಿ ಉದ್ದಿಮೆ ದಾರರು ಈ ತಿದ್ದುಪಡಿಯನ್ವಯ ಕಾರ್ಮಿಕರ ನೇಮಕಾತಿಯನ್ನು ಕಾಲಮಿತಿಗೆ ಒಳಪಡಿಸ ಬಹುದು. ಕಾಲಮಿತಿ ಕಳೆಯುತ್ತಿದ್ದಂತೆ ಯಾವುದೇ ನೋಟೀಸ್ ಕೊಡದೆ ಕಾರ್ಮಿಕನಿಗೆ ಕೆಲಸ ನಿಲ್ಲಿಸಬಹುದು. ಕಾಲಮಿತಿ ಉದ್ಯೋಗ ಮಾಲೀಕ ಮತ್ತು ಕಾರ್ಮಿಕನ ನಡುವಿನ ಕರಾರು. ಈ ಕಾರಣದಿಂದಲೇ ಕಾರ್ಮಿಕ ನ್ಯಾಯಾಲಯದ ಮೆಟ್ಟಿಲೂ ಹತ್ತುವಂತಿಲ್ಲ.

ನಿಯತಕಾಲಿಕ ಉದ್ಯೋಗಿಗಳ ಬದುಕು ಅನಿಶ್ಚಿತ, ಯಾವ ಉದ್ಯೋಗದಲ್ಲೂ ಸ್ಥಿರವಾಗಿ ನಿಂತು ಬದುಕನ್ನು ರೂಪಿಸಿಕೊಳ್ಳುವಂತಿಲ್ಲ. ಇದರ ಪರಿಣಾಮ ಕೇವಲ ಕಾರ್ಮಿಕನ ಮೇಲೆ ಮಾತ್ರವಲ್ಲ ಅವನ ಕುಟುಂಬದ ಸದಸ್ಯರ ಮೇಲೆ ಅದರಲ್ಲೂ ಹೆಚ್ಚಾಗಿ ಮಕ್ಕಳ ಮೇಲೆ ಪರಿಣಾಮ ಬೀರುತ್ತದೆ. ಬಂಡವಳಿಗರಿಗೆ ಬೇಕಾದದ್ದು ಇದೇ. ಸಂಘಟನಾಹೀನರಾದ ನಿಯತಕಾಲಿಕ ಕಾರ್ಮಿಕರು ಕಾರ್ಮಿಕತನವನ್ನೇ ಕಳೆದುಕೊಳ್ಳುವ ದುಃಸ್ಥಿತಿ!

**ಬೆಳೆಯುತ್ತಿರುವ ಅಲೆಮಾರಿ ಕಾರ್ಮಿಕರ ಸಂಖ್ಯೆ**

ಭಾರತದಲ್ಲಿ ಈಗ ಖಾಯಂ ಕೆಲಸಗಾರರ ಸಂಖ್ಯೆ ಇಳಿಯುತ್ತಿದೆ, ಕ್ಯಾಶುವಲ್ ಮತ್ತು ಗುತ್ತಿಗೆ ಕಾರ್ಮಿಕರ ಸಂಖ್ಯೆ ತೀವ್ರವಾಗಿ ಏರುತ್ತಿದೆ. ಈಗ ಅಪ್ರೆಂಟೀಸ್‌ಗಳು, ನೀಮ್ ಯೋಜನೆಯ ತರಬೇತಿದಾರರು, ಸಣ್ಣ ಕಾರ್ಖಾನೆಗಳಲ್ಲಿನ ಕಾರ್ಮಿಕರು ಮತ್ತು ನಿಯತಕಾಲಿಕ ಕಾರ್ಮಿಕರು ಸೇರಿ ಹಂಗಾಮಿ ಕಾರ್ಮಿಕರ ಒಂದು ಬೃಹತ್ ಸೈನ್ಯವೇ ರೂಪುಗೊಂಡಿದೆ. ಕನಿಷ್ಠ ಕೂಲಿಯನ್ನೂ ಪಡೆಯಲಾಗದ ಈ ಕಾರ್ಮಿಕರು ಸಂಘಟಿತರಾಗುವ ಅವಕಾಶದಿಂದ ವಂಚಿತರಾಗಿದ್ದಾರೆ. ಮೋದಿ ಸರ್ಕಾರ ಈ ದೇಶದ ಸಂಪತ್ತನ್ನು ಸೃಷ್ಟಿಸುವ ಶ್ರಮಿಕರನ್ನು ಸಾಮಾಜಿಕ ಮತ್ತು ಆರ್ಥಿಕ ನ್ಯಾಯದಿಂದ ವಂಚಿಸಿದೆ. ಈ ಬೆಳವಣಿಗೆ ಕ್ರಮೇಣ ಇಡೀ ಶ್ರಮಶಕ್ತಿ ಮಾರುಕಟ್ಟೆಯನ್ನು ಆಕ್ರಮಿಸು ವುದರಲ್ಲಿ ಸಂಶಯವಿಲ್ಲ. ಈಗಾಗಲೇ ಖಾಯಂ ಕೆಲಸಗಾರರೂ ಕೂಡ ಕ್ರಮೇಣ ಗುತ್ತಿಗೆ ಕಾರ್ಮಿಕರಾಗಿ ರೂಪಾಂತರ ಹೊಂದಿದ ಅನೇಕ ನಿದರ್ಶನಗಳುಂಟು. ಒಂದು ಉದ್ಯೋಗ ಕಳೆದು ಕೊಂಡು ಇನ್ನೊಂದು ಉದ್ಯೋಗ ಅರಸುವ ಅಲೆಮಾರಿ ಕಾರ್ಮಿಕರ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿದೆ. ಇದರ ಪರಿಣಾಮ ಕಾರ್ಮಿಕ ಸಂಘಟನೆಗಳ ಮೇಲೆ ಬಿದ್ದಿದೆ. ಆದರೂ ಕೂಡ ಒಂದು ರೀತಿಯ ಅಸಹಾಯಕತೆ ಎದ್ದು ಕಾಣುತ್ತಿದೆ. ಕಾರ್ಮಿಕ ಸಂಘಟನೆಗಳು ಈ ಬಗ್ಗೆ ತುರ್ತಾಗಿ ಗಮನಹರಿಸಿ ಅಲೆಮಾರಿ ಕಾರ್ಮಿಕ ಅವಸ್ಥೆಯನ್ನು ಕೊನೆಗೊಳಿಸ ದಿದ್ದಲ್ಲಿ ಇದಕ್ಕೆ ಸಂಘಟಿತ ಕಾರ್ಮಿಕರು ತೆರಬೇಕಾದ ಬೆಲೆ ಅಪಾರ. ಇತಿಹಾಸ ಅದನ್ನು ಕ್ಷಮಿಸುವುದೂ ಇಲ್ಲ.


**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೩, ಎರಡನೇ ಮಹಡಿ, ಕೆನರಾ ಬ್ಯಾಂಕ್ ಮೇಲೆ, ವಿ. ವಿ. ಪುರಂ, ಬೆಂಗಳೂರು


# ಕಟ್ಟೋಣ ರಾಮನಿಗಾಗಿ ಮಂದಿರವನು....!



**ಕ**ಟ್ಟೋಣ ನಾವೆಲ್ಲರೂ ಸೇರಿ ಮಂದಿರವನು
ದೇಶವಾಸಿಗಳೆಲ್ಲರ ಒಳಿತಿಗಾಗಿ
ಸರ್ವಜನ ಹಿತಕಾಗಿ, ಸರ್ವಜನ ಸುಖಕಾಗಿ
ಕಟ್ಟೇ ಕಟ್ಟೋಣ ಒಡೆದ ಹೃದಯಗಳನು
ಒಡೆದು ಹೋದ, ಮುರಿದ ಮನಸುಗಳಲಿ

ಸೋತು ಸೊರಗಿರುವ ನಿರ್ಲಕ್ಷ್ಯ ಕೋಟಿ ದೇಹಗಳಲಿ
ರಕ್ತಸಿಕ್ತ ರಸ್ತೆಗಳ ಸಾರಿಸಿ, ಸ್ವಚ್ಛಗೊಳಿಸಿ
ಧರ್ಮ ದ್ವೇಷ ಜ್ವಾಲೆಗಳ ಶಮನಗೊಳಿಸಿ,
ಕಟ್ಟೇ ಕಟ್ಟೋಣ ಮಂದಿರ ಜನರ ಹೃದಯಗಳಲಿ
ಒಡೆದು ಹೋದ ಮುರಿದ ಮನಸುಗಳಲಿ

ಕೋಟಿಕಂತೆ ಹಣವಿಲ್ಲದಿರಬಹುದು ನಮ್ಮಲಿ
ದೆಹಲಿ, ಬೆಂಗಳೂರುಗಳ ನೆರವಿಲ್ಲದಿರಬಹುದು
ಅಕ್ಷರವೆಂಬ ಗಟ್ಟಿ ಇಟ್ಟಿಗೆಗಳನು ಹಿಡಿದು
ಜಾತಿ ಇಲ್ಲದ ಕಬ್ಬಿಣ ಸಲಾಖೆ ಜಡಿದು
ಬಾಂಧವ್ಯವೆಂಬ ಸಿಮೆಂಟು ಸುರಿದು

ಸದ್ಭಾವನೆ ಎಂಬ ನೀರು ಹುಯಿದು
ಕಟ್ಟೋಣ ಭಾರತವೆಂಬ ಸುವರ್ಣ ಸೌಧವನು
ರಾಮನ ಕನಸಿನ ಕಲ್ಯಾಣ ರಾಜ್ಯವನು
ಸರ್ವರ ವಿಕಾಸದ ನಾಡನು ಸಮತೆಯ ಬೀಡನು
ಜಾರಿಗೊಳಿಸೋಣ ಸಂವಿಧಾನದ ಆಶಯಗಳನು
ಸಮಸಮಾಜದ ನಿರ್ದೇಶಕ ತತ್ವಗಳನು

ಕಟ್ಟೋಣ ಮಂದಿರದಂತೆ ಒಳ್ಳೆಯ ಆಸ್ಪತ್ರೆ, ರಸ್ತೆಗಳನು
ಮಕ್ಕಳಿಗಾಗಿ ಆನಂದದಾಯಕ ಶಾಲೆ ಉದ್ಯಾನಗಳನು
ಮಾತಾ, ಸೀತೆಯರ ಮಾನ ರಕ್ಷಿಸುವ ಕೋರ್ಟು
ಕಛೇರಿಗಳನು
ಕೈಮುಗಿದು ಕೇಳುವೆ ನನ್ನ ದೇಶವಾಸಿಗಳನು
ಹೊರಹಾಕೋಣ ಕಪ್ಪು ಪೇಟೆ ವ್ಯಾಪಾರಿಗಳನು
ಸಂವಿಧಾನ ವಿರೋಧಿಸುವ ಗೋಸುಂಬೆ
ನಾಯಕರನು
ಮಾಡಿರಿ ನೀವು ಅವರನು ಮಾಜಿ ಎಂಪಿ,
ಎಂಎಲ್‌ಎಗಳನು
ಮಗದೊಮ್ಮೆ ಬಾಗಿ ನಮಿಸುವೆ ನೀಡಿ ಬೆಂಬಲವನು
ಬೆಳೆಸಿರಿ ದೇಶ ಉಳಿಸುವ ಧೀಶಕ್ತಿವಂತರನು

ಕಟ್ಟಿರಿ ನಿಮ್ಮೂರ ಮುರಿದ ಮನಸುಗಳನು
ಬೆಂದು ಬಳಲಿರುವ ರೈತ, ದಲಿತ, ಕಾರ್ಮಿಕರನು
ಬಡಿದೆಬ್ಬಿಸಿ, ಕನಸುಕಳಕೊಂಡ ಯುವಕರನು
ಪೊರೆಯಿರಿ ಅಶಕ್ತ ನಿರ್ಗತಿಕ ಬಾಲಬಾಲೆಯರನು

ಬೆಳೆಸಿ ಭವಿಷ್ಯದ ಮಾನವ ಸಂಪನ್ಮೂಲವನು
ಕಟ್ಟಲು ನೆರವಾಗಿ ಅರಿವು ಬೆಳೆಸುವ ಶಾಲಾ
ಕಾಲೇಜುಗಳನು
ಕಟ್ಟೋಣ ಕನಸಿನ ಕಲ್ಯಾಣ ರಾಜ್ಯವನು
ಯಾರಿಗೂ ತಲೆಬಾಗದ ಪ್ರಬುದ್ಧ ಭಾರತವನು


**ಡಾ॥ ಬಿ. ಕೆ. ಎಸ್. ವರ್ಧನ**
ಸಹನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ
ಅಪರ ಆಯುಕ್ತಾಲಯ, ಧಾರವಾಡ



# ಅರ್ಧ ಚಂದ್ರ (ಬಳಸಿ) ಪ್ರಯೋಗ

**ಮೇ** ತಿಂಗಳ ಆಕಾಶದಲ್ಲಿ ಗ್ರಹಗಳ ಸುಳಿವೇ ಇಲ್ಲ ಎನ್ನಬಹುದು. ಏಕೆಂದರೆ ಪಶ್ಚಿಮದ ಅಂಚನ್ನು ಸಮೀಪಿಸುತ್ತಿರುವ ಮಂಗಳ ಗ್ರಹ ಬಹಳ ಕ್ಷೀಣವಾಗಿದೆ. ಭೂಮಿಯಿಂದ ಗರಿಷ್ಠ ದೂರದಲ್ಲಿದೆ. ಸಂಜೆಯ ಬೆಳಕಿನಲ್ಲಿ ಕರಗಿಯೇ ಹೋಗುತ್ತದೆ. ಆದರೆ ನಕ್ಷತ್ರ ಲೋಕದ ಸೊಬಗು ಸವಿಯ ಬಹುದಾಗಿದೆ. ಪಶ್ಚಿಮದ ಅಂಚಿನಲ್ಲಿ ಮಹಾವ್ಯಾಧ (ಒರೈಯನ್), ಅದಕ್ಕೆ ಸ್ವಲ್ಪ ದಕ್ಷಿಣಕ್ಕೆ ಲುಬ್ಧಕ (ಸಿರಿಯಸ್) ನಕ್ಷತ್ರ ಕಾಣುತ್ತವೆ. ಅಗಸ್ತ್ಯ ದಿಗಂತದ ಅಂಚಿನಲ್ಲಿದ್ದು ಮಂಕಾಗಿ ಕಾಣುತ್ತದೆ. ದಕ್ಷಿಣದಲ್ಲಿ ತ್ರಿಶಂಕು (ದಕ್ಷಿಣ ಶಿಲುಬೆ) ಸಂಜೆಯಲ್ಲಿ ಉದಯಿಸುತ್ತಿರುತ್ತದೆ. ಆಕಾಶ ಶುಭ್ರವಾಗಿದ್ದಲ್ಲಿ ಅದರ ಆಸು ಪಾಸಿನಲ್ಲಿ ಮತ್ತು ನೌಕಾಪಟ (ವೇಲಾ) ಪುಂಜದವರೆಗೂ ಆಕಾಶಗಂಗೆಯ ಹರಿವನ್ನು ಕಾಣಬಹುದು. ಅಲ್ಲಿ ಅನೇಕ ನೆಬ್ಯುಲಾಗಳು ನಕ್ಷತ್ರಗುಚ್ಛಗಳೂ ಇವೆ. ಪ್ರಕಾಶಮಾನವಾದ ಈಟಾ ಕರೀನಾ ಎಂಬುದು ಬರಿಗಣ್ಣಿಗೇ ಕಾಣುವುದೂ ಸಾಧ್ಯವಿದೆ. ಪಶ್ಚಿಮದತ್ತ ಸಾಗುತ್ತಿರುವ ಮಿಥುನ, ಅದಕ್ಕಿಂತ ಮೇಲೆ ಸಿಂಹ, ಸ್ವಲ್ಪ ಪೂರ್ವದತ್ತ ಕನ್ಯಾ ಇವುಗಳನ್ನು ಕಾಣ ಬಹುದು. ಸಂಜೆಗೆ ಉದಯಿಸುವ ತುಲಾ ರಾಶಿಯಲ್ಲಿ ಅಷ್ಟೇನೂ ಪ್ರಕಾಶಮಾನವಾದ ನಕ್ಷತ್ರಗಳಿಲ್ಲ. ಆದರೆ ಪೂರ್ವದಲ್ಲಿ ಸ್ವಾತಿ, ಚಿತ್ರಾ, ಹಸ್ತಾ ಇವು ಪ್ರಮುಖವಾಗಿ ಕಾಣುತ್ತವೆ. ಉತ್ತರದಲ್ಲಿ ಸಪ್ತರ್ಷಿ ಮಂಡಲ ಕಾಣುತ್ತದೆ.




ಈ ವರ್ಷದುದ್ದಕ್ಕೂ ಪ್ರತಿ ತಿಂಗಳೂ ಚಂದ್ರ ಶನಿಗ್ರಹವನ್ನು ಮರೆ ಮಾಡುವ ಆಚ್ಛಾದನೆಗಳು ನಡೆಯಲಿವೆ. ಆದರೆ ಅವೆಲ್ಲವೂ ನಮಗೆ ಅನುಕೂಲಕರವಾಗಿಲ್ಲ. ಈಗ ಶನಿಗ್ರಹ ಬೆಳಗಿನ ಜಾವ ಕಾಣುತ್ತದೆ. ಅಂದರೆ ನಡು ರಾತ್ರಿಯ ಹೊತ್ತಿಗೆ ಉದಯಿಸಿರುತ್ತದೆ. ಗುರು ಗ್ರಹ ಸುಮಾರು ರಾತ್ರಿ ಎಂಟು ಗಂಟೆಗೇ ಪೂರ್ವದಲ್ಲಿ ಕಾಣುತ್ತದೆ. ತಿಂಗಳ ಕೊನೆಗೆ ಸಂಜೆಗೇ ಕಾಣುತ್ತದೆ. ಹಾಗಾಗಿ ತಿಂಗಳ ಕೊನೆಯ ದಿನದಲ್ಲಿ ಪೂರ್ವದ ಅಂಚಿನಲ್ಲಿ ಗುರು ಕಾಣಿಸಿಕೊಳ್ಳುತ್ತದೆ. ಪಶ್ಚಿಮದ ಈ ಅಂಚಿನಲ್ಲಿ ಕ್ಷೀಣವಾದ ಮಂಗಳ ಮತ್ತು ಬುಧ ಕಾಣುತ್ತವೆ. ಬೆಳಗಿನ ಜಾವ ಕಾಣುವ ಶುಕ್ರ ಗ್ರಹವನ್ನು ಗುರುತಿಸುವುದು ಕಷ್ಟವೇನಿಲ್ಲ. ತಿಂಗಳ ಮೊದಲ ಎರಡು–ಮೂರು ದಿನಗಳಲ್ಲಿ ಶುಕ್ರ ದಿಂದ ಕೆಳಗೆ ದಿಗಂತದ ಅಂಚಿನಲ್ಲಿ ಬುಧ ಕಾಣುತ್ತದೆ.



*ಚಂದ್ರ – ಶುಕ್ರ – ಬುಧ ಪುಟ್ಟ ಗುಂಪು*
*ಮೇ ೨ ಬೆಳಗಿನ ಜಾವ*

ಹಾಗೆಯೇ ಕೆಳಗಿಳಿಯುವ ಬುಧ ತಿಂಗಳ ಕೊನೆಗೆ ಸಂಜೆಯಲ್ಲಿ ಪಶ್ಚಿಮದಲ್ಲಿ ಕಾಣುತ್ತದೆ. ೨೧ರಂದು ಬುಧ ಗ್ರಹದ ಯುತಿ; ಸೂರ್ಯನನ್ನು ಆಚೆ ಬದಿಯಿಂದ ಹಾದು ಬರುವ ಕಾರಣ ಇದಕ್ಕೆ ಉಚ್ಚಯುತಿ ಎಂದು ಹೆಸರು. ಈ ತಿಂಗಳಲ್ಲಿ ಅರ್ಧ ಚಂದ್ರ ಕಾಣುವ ಸಂದರ್ಭಗಳಲ್ಲಿ ವಿಶೇಷವೊಂದಿದೆ. ೧೨ರಂದು ಚಾಂದ್ರಮಾಸದ ಮೊದಲ ಪಾದ, ಅಂದರೆ, ಚಂದ್ರ ಸಂಜೆಯಲ್ಲಿ ನೆತ್ತಿಯ ಮೇಲಿದ್ದು ಮಧ್ಯರಾತ್ರಿಗೆ ಕಂತುವುದು. ಈ ಅರ್ಧ ಚಂದ್ರದ ಚಿತ್ರ ಕ್ಲಿಕ್ ಮಾಡಿಕೊಳ್ಳಿ. ಎಷ್ಟು ಝೂಮ್ ಮಾಡಿದ್ದಿರಿ ಎಂದು ನೆನಪಿಟ್ಟುಕೊಳ್ಳಿ, ೨೬ ರಂದು ಬೆಳಗಿನಲ್ಲಿ ಪುನಃ ಅರ್ಧ ಚಂದ್ರ ಕಾಣುತ್ತದೆ. ಪುನಃ ಕ್ಲಿಕ್ ಮಾಡಿ (ಅಷ್ಟೇ ಝೂಮ್ ಇಟ್ಟುಕೊಳ್ಳಲು ಮರೆಯದಿರಿ) ಎರಡೂ ಚಿತ್ರಗಳನ್ನು ಹೋಲಿಸಿ ದಾಗ ಗಾತ್ರದ ವ್ಯತ್ಯಾಸ ಎದ್ದು ಕಾಣುತ್ತದೆ. ಏಕೆಂದರೆ 12 ರಂದು ಚಂದ್ರ ಹತ್ತಿರದಲ್ಲಿ ಅಂದರೆ ಪುರಭೂ ಬಿಂದುವಿ ನಲ್ಲಿತ್ತು. 26ರಂದು ಅಪಭೂ ಬಿಂದುವಿನಲ್ಲಿ ಗರಿಷ್ಠ ದೂರ ದಲ್ಲಿತ್ತು. ಈ ತಿಂಗಳ ಮೊದಲ ವಾರ ಈಟಾ ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿ ಇದೆ. ೬–೭ರ ಬೆಳಗಿನ ಜಾವ ಗರಿಷ್ಠ ಅಂದರೆ ಗಂಟೆಗೆ ೫೦ ಉಲ್ಕೆಗಳು ಬೀಳುವುವು. ಕುಂಭರಾಶಿಯಿಂದ ಹೊರಟಂತೆ ಕಾಣುವುದರಿಂದ ಈ ಹೆಸರಿದೆ. ಹ್ಯಾಲೀ ಧೂಮಕೇತು ಬಿಟ್ಟು ಹೋದ ಧೂಳಿನ ತುಣುಕುಗಳು ಇವು.

**ಖಗೋಳ ದಿನಚರಿ**

| | |
|---|---|
| ಮೇ ೨ | ಚಂದ್ರ–ಶುಕ್ರ ಜೋಡಿ ✴ |
| ೩ | ಚಂದ್ರ–ಶುಕ್ರ–ಬುಧ ಪುಟ್ಟಗುಂಪು ✴ |
| ೫ | ೦೪:೧೫ಕ್ಕೆ ಅಮಾವಾಸ್ಯೆ |
| ೬–೭ | ಉಲ್ಕಾವೃಷ್ಟಿ |
| ೭ | ಮಂಗಳ–ಚಂದ್ರ ಜೋಡಿ ✴ |
| ೧೨ | ಚಾಂದ್ರಮಾಸದ ಮೊದಲ ಪಾದ |
| ೧೩ | ಚಂದ್ರ ಪುರಭೂ ಬಿಂದುವಿನಲ್ಲಿ |
| ೧೯ | ೦೨:೨೧ಕ್ಕೆ ಹುಣ್ಣಿಮೆ |
| ೨೦ | ಗುರು–ಚಂದ್ರ ಜೋಡಿ ✴ |
| ೨೧ | ಬುಧ ಗ್ರಹದ ಉಚ್ಚಯುತಿ |
| ೨೨ | ಚಂದ್ರ–ಶನಿ ಜೋಡಿ ✴ |
| ೨೬ | ಚಂದ್ರ ಅಪಭೂ ಬಿಂದುವಿನಲ್ಲಿ |
| ಜೂನ್ ೧ | ಚಂದ್ರ–ಶುಕ್ರ ಜೋಡಿ ✴ |

(*ಛಾಯಾಗ್ರಹಣಕ್ಕೆ ಸದವಕಾಶ)


**ಡಾ॥ ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್, ಬೆಂಗಳೂರು – ೧



# ಅಂಬೇಡ್ಕರ್ ಮತ್ತು ಮಾರ್ಕ್ಸ್

## ಭಾಗ-೨



ಲೇಖನದ ಮೊದಲ ಭಾಗದಲ್ಲಿ ಅಂಬೇಡ್ಕರ್ ಮತ್ತು ಮಾರ್ಕ್ಸ್‌ರವರ ತತ್ವಶಾಸ್ತ್ರೀಯ ನೆಲೆಗಟ್ಟುಗಳನ್ನು, "ಧರ್ಮ"ದ ಕುರಿತು ಅವರುಗಳಿಗಿದ್ದ ಅಭಿಪ್ರಾಯಗಳನ್ನೂ ಮತ್ತು "ಸಮಾಜವಾದ"ದ ಬಗ್ಗೆ ಅವರುಗಳ ವಿಶ್ಲೇಷಣಾತ್ಮಕ ನಿಲುವುಗಳನ್ನೂ ಚರ್ಚೆ ಮಾಡಲಾಗಿದ್ದು ಲೇಖನದ ಈ ಅಂತಿಮ ಭಾಗದಲ್ಲಿ ನಾವು ಅಂಬೇಡ್ಕರ್ ಹಾಗೂ ಮಾರ್ಕ್ಸ್‌ರವರ "ಆರ್ಥಿಕ ನೀತಿ"ಗಳ ಕುರಿತು ಚರ್ಚಿಸಲಿದ್ದೇವೆ. ಅಂಬೇಡ್ಕರ್ ಮತ್ತು ಮಾರ್ಕ್ಸ್‌ರವರ ಚಿಂತನೆಗಳ ನಡುವಿನ ಸಾಮ್ಯತೆ ಹಾಗೂ ಅವುಗಳು ಎಲ್ಲಿ "ಪರಸ್ಪರ ಸಂಧಿ"ಸುತ್ತವೆ ಎಂಬುದನ್ನೂ ಸಹ ಗುರುತಿಸುವ ಪ್ರಯತ್ನವನ್ನು ಕೈಗೊಳ್ಳಲಾಗಿದೆ.

**ಆರ್ಥಿಕ ನೀತಿ ಹಾಗೂ ಕಾರ್ಮಿಕ ವರ್ಗ**

೧೯೪೭ರಲ್ಲಿ 'ಅಖಿಲ ಭಾರತ ಪರಿಶಿಷ್ಟ ಜಾತಿಗಳ ಒಕ್ಕೂಟದ (All India Sheduled Castes Federation) ಪರವಾಗಿ ಅಂಬೇಡ್ಕರ್ ಅವರು ಸ್ವಾತಂತ್ರ್ಯಾನಂತರದ ಭಾರತದಲ್ಲಿ ಪರಿಶಿಷ್ಟ ಜಾತಿಗಳ ಸುರಕ್ಷತೆಯನ್ನು ಕುರಿತು 'ಸಂವಿಧಾನ ರಚನಾ ಸಭೆಗೆ (Constituent Assembly) ಒಂದು ಮನವಿಯನ್ನು ತಯಾರಿಸಿ ಸಲ್ಲಿಸುತ್ತಾರೆ. ಈ ಮನವಿಯಲ್ಲಿರುವ ಅಂಶಗಳ ತಿರುಳೇ ನಂತರದಲ್ಲಿ ಭಾರತದ ಸಂವಿಧಾನ ರಚನೆಯ ಸಂದರ್ಭದಲ್ಲಿ ಪಕ್ವಗೊಂಡು ಫಲಿತಗೊಳ್ಳುತ್ತವೆ. ೧೯೪೭ರ ಈ ಮನವಿಯು ಅನೇಕ ಕುತೂಹಲಕಾರೀ ಅಂಶಗಳಿಂದ ಕೂಡಿದೆ. ಪರಿಶಿಷ್ಟ ಜಾತಿಗಳ ರಕ್ಷಣೆಗೆ ವಿಶಿಷ್ಟ ಆರ್ಥಿಕ ನೀತಿಗಳು ಬಹಳ ಅತ್ಯಗತ್ಯವೆಂದು ಅಂಬೇಡ್ಕರ್ ಅವರು ಭಾವಿಸಿರುವುದು ಅತ್ಯಂತ ಆಸಕ್ತಿಜನಕ ಅಂಶವಾಗಿದೆ. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಆರ್ಥಿಕ ಶೋಷಣೆಯಿಂದ ಪರಿಶಿಷ್ಟ ಜಾತಿಯ ಜನರನ್ನು ರಕ್ಷಿಸಲು ಈ ಕೆಲವು ಪ್ರಮುಖ ಆರ್ಥಿಕ ನೀತಿಗಳ ಅನುಷ್ಠಾನವನ್ನು ಅಂಬೇಡ್ಕರ್ ಅವರು ಒತ್ತಿ ಹೇಳುತ್ತಾರೆ.

೧. ಅತಿ ಪ್ರಮುಖ ಉದ್ದಿಮೆಗಳನ್ನು (Key Industries) ಸರ್ಕಾರೀ ಸ್ವಾಮ್ಯದಲ್ಲಿದ್ದು, ಸರ್ಕಾರವೇ ಅವುಗಳನ್ನು ನಡೆಸಬೇಕು.
೨. ಅಷ್ಟು ಪ್ರಮುಖವಲ್ಲದ ಆದರೆ ಮೂಲಭೂತ ಉದ್ದಿಮೆಗಳನ್ನೂ ಕೂಡ ಸರ್ಕಾರವೇ ತನ್ನ ಕೈಯಲ್ಲಿರಿಸಿ ಕೊಂಡಿರಬೇಕು. ಅಥವಾ ಸರ್ಕಾರೀ ಕಾರ್ಪೊರೇಷನ್ನುಗಳಾಗಿ ನಿಯಂತ್ರಣದಲ್ಲಿಟ್ಟು ಕೊಳ್ಳಬೇಕು.
೩. 'ವಿಮಾ ವ್ಯವಹಾರವೂ' ಸಹ ಸರ್ಕಾರದ ಸ್ವಾಮ್ಯದಲ್ಲಿರಬೇಕು ಹಾಗೂ ಪ್ರತಿಯೊಬ್ಬ ಪ್ರಜೆಯೂ ಅವನ ಗಳಿಕೆಗೆ ತಕ್ಕಂತೆ ಜೀವ ವಿಮೆಯನ್ನು ಮಾಡಿಸುವ ವ್ಯವಸ್ಥೆಯಿರಬೇಕು.
೪. 'ಕೃಷಿ'ಯೂ ಸಹ ಸರ್ಕಾರದ ಕೈಯಲಿರುವ (ಸರ್ಕಾರೀ ಸ್ವಾಮ್ಯದ) ಉದ್ದಿಮೆಯಾಗಿರಬೇಕು.
೫. 'ಕೃಷಿ'ಯನ್ನು ಸರ್ಕಾರವು ಈ ಕೆಳಗೆ ವಿವರಿಸಿದ ರೀತಿಯಲ್ಲಿ ನಡೆಸಬೇಕು:
   (ಅ) ಖಾಸಗೀ ಜಮೀನುಗಳನ್ನು ವಶಪಡಿಸಿಕೊಂಡ ನಂತರ ಸರ್ಕಾರವು ಅವುಗಳನ್ನು ಏಕರೀತಿಯ ಅಳತೆಗೆ ವಿಭಾಗಿಸಿ ಅವುಗಳನ್ನು ಸ್ಥಳೀಯರಿಗೆ ಈ ಕೆಲವು ನಿಬಂಧನೆಗಳೊಂದಿಗೆ ಬಾಡಿಗೆಗೆ ನೀಡಬೇಕು.
   (೧) ಕೃಷಿಯನ್ನು ಎಲ್ಲರೂ ಸಾಮೂಹಿಕವಾಗಿ ನಡೆಸಬೇಕು.
   (೨) ಸರ್ಕಾರವು ನಿಗದಿಪಡಿಸುವ ಕಾನೂನು ಹಾಗೂ ನಿರ್ಬಂಧನೆಗಳಿಗೆ ಅನುಗುಣವಾಗಿ ಕೃಷಿಯನ್ನು ನಡೆಸಬೇಕು.
   (೩) ಯಾವುದೇ ಜಾತಿ ಅಥವಾ ಪಂಗಡದ ಹೆಸರಲ್ಲಿ ಭೇದಭಾವ ಇರಕೂಡದು. ಅಲ್ಲದೇ ಜಮೀನುದಾರ, ಗೇಣೀದಾರ ಅಥವಾ ಭೂಹೀನ ಕಾರ್ಮಿಕನೆಂಬ ಭೇದಭಾವವಿರಕೂಡದು.

೧೯೪೭ರ ತಮ್ಮ ಮನವಿಯಲ್ಲಿ ಅಂಬೇಡ್ಕರ್ ಅವರು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಹೇಳುತ್ತಾರೆ, "ಭಾರತದ ಶೀಘ್ರ ಔದ್ಯೋಗೀಕರಣಕ್ಕೆ ಪ್ರಭುತ್ವದ ಸಮಾಜವಾದ (State Socialism)" ಅತೀ ಅಗತ್ಯವಾಗಿದೆ. ಖಾಸಗೀ ಉದ್ಯಮಗಳಿಂದ ಇದು ಅಸಾಧ್ಯ. ಖಾಸಗಿಯವರಿಗೆ ಇದನ್ನು ವಹಿಸಿದರೂ ಕೂಡ ಅದರಿಂದ ಸಂಪತ್ತಿನ ಹಂಚುವಿಕೆಯಲ್ಲಿ ತಾರತಮ್ಯ ಉಂಟಾಗಿ ಪಾಶ್ಚಿಮಾತ್ಯ ದೇಶಗಳಲ್ಲಾದಂತೆ ಆರ್ಥಿಕ ಅಸಮಾನತೆಗೆ ಅವಕಾಶ ಮಾಡಿಕೊಟ್ಟಂತಾಗುತ್ತದೆ. ಇದು ಭಾರತೀಯರಿಗೊಂದು ಎಚ್ಚರಿಕೆಯ ಪಾಠ." ಅಂಬೇಡ್ಕರ್ ಅವರು 'ಪ್ರಭುತ್ವದ ಸಮಾಜವಾದದ (State Socialism)' ಅಗತ್ಯತೆ ಕುರಿತು ಬಹಳ ದೃಢವಾದ ಅಭಿಪ್ರಾಯವನ್ನು ಹೊಂದಿದ್ದರು ಹಾಗೂ ಯಾವುದೇ ಶಾಸನಗಳಿಂದ ಅಥವಾ ಕಾರ್ಯಾಂಗದ ಮೂಲಕ ಈ ಅಂಶವನ್ನು ಬದಲಾಯಿಸದೇ ಇರುವ ಹಾಗೆ ಮಾಡಬೇಕೆಂದು ಅವರ ದೃಢ ನಿಲುವಾಗಿತ್ತು. ಅಂಬೇಡ್ಕರ್ ಅವರ 'ರಾಜ್ಯಗಳು ಹಾಗೂ ಅಲ್ಪಸಂಖ್ಯಾತರು (States and Minorities)' ಎಂಬ ಲೇಖನದ ಅಂಶಗಳನ್ನು

ಮೂಲ : **ಎಂ. ಸತ್ಯಾನಂದ**
ಅನುವಾದ : **ಎಂ. ಸಿ. ಡೋಂಗ್ರೆ**

ಮಾರ್ಕ್ಸ್‌ರವರ 'ಕಮ್ಯುನಿಸ್ಟ್ ಪ್ರಣಾಳಿಕೆ'ಯೊಂದಿಗೆ ಹೋಲಿಸಿದ್ದಲ್ಲಿ ಈ ಇಬ್ಬರು ಚಿಂತಕರ ಆಲೋಚನೆಗಳ ನಡುವಿರುವ ಸಾಮ್ಯತೆ ಎದ್ದು ಕಾಣುತ್ತದೆ. ಅಂಬೇಡ್ಕರ್ ಅವರು ಪ್ರತಿ ಪಾದಿಸಿರುವ "ಆರ್ಥಿಕ ಕಾರ್ಯಾಚರಣೆಗಳು (Economic Program)" ಮಾರ್ಕ್ಸ್‌ವಾದದಲ್ಲಿ ಹೇಳಿರುವ "ಉತ್ಪಾದನಾ ಮೂಲಗಳು ಸರ್ಕಾರದ (ಪ್ರಭುತ್ವದ) ಕ್ರೋಢೀಕೃತವಾಗಬೇಕೆಂಬ ಯೋಚನೆಗೆ ಸರಿಸಮವಾಗಿದೆ. ವಿಮಾಕ್ಷೇತ್ರ ಹಾಗೂ ಬ್ಯಾಂಕಿಂಗ್ ವಲಯಗಳು ರಾಷ್ಟ್ರೀಕರಣ ಗೊಳ್ಳಬೇಕೆಂಬ ಅಂಬೇಡ್ಕರ್ ಅವರ ನಿಲುವು "ಬೂರ್ಷ್ವಾಗಳ ಕೈಯಿಂದ ಶ್ರಮಜೀವಿ ವರ್ಗವು ಅಧಿಕಾರವನ್ನು ತನ್ನ ಕೈಯಲ್ಲಿ ವಶಪಡಿಸಿಕೊಳ್ಳಬೇಕೆಂಬ ಮಾರ್ಕ್ಸ್ ವಾದೀ ನಿಲುವಿಗೆ ಸರಿಸಮನಾಗಿದೆ. ಉತ್ಪಾದನಾ ವಿಧಾನದಲ್ಲಿ ಅಥವಾ ಉತ್ಪಾದನಾ ಸ್ವಾಮ್ಯದಲ್ಲಿ ಬದಲಾವಣೆಯಾದಾಗ ಉತ್ಪಾದನಾ ಸಂಬಂಧ (ಆರ್ಥಿಕ ಸಂಬಂಧ)ಗಳಲ್ಲೂ ಕ್ರಾಂತಿಕಾರೀ ಆಮೂಲಾಗ್ರ ಬದಲಾವಣೆಗಳಾಗುತ್ತವೆ ಎಂದು ಮಾರ್ಕ್ಸ್ ಗುರುತಿಸಿರುವುದನ್ನು ಇಲ್ಲಿ ನೆನಪು ಮಾಡಿಕೊಳ್ಳಬೇಕು. ಈ ಹಿನ್ನೆಲೆಯಲ್ಲೇ ಕಮ್ಯುನಿಸ್ಟ್ ಪ್ರಣಾಳಿಕೆಯಲ್ಲಿ "ಮಾನವನ ಇತಿಹಾಸವೆಂದರೆ ಅದು ವರ್ಗ ಸಮರದ ಇತಿಹಾಸ" ಎಂದು ಹೇಳಿರುವುದು. ಫ್ಯೂಡಲ್ ವ್ಯವಸ್ಥೆಯ ಒಳಗಿನಿಂದಲೇ ಫ್ಯೂಡಲ್ ವ್ಯವಸ್ಥೆಯ ನಾಶದೊಂದಿಗೆ ಬಂಡವಾಳಶಾಹೀ ವ್ಯವಸ್ಥೆ ತಲೆಯೆತ್ತುತ್ತದೆ ಎನ್ನುವುದಕ್ಕೆ ಇದೊಂದು ಉತ್ತಮ ಉದಾಹರಣೆ. ಗ್ರಾಮೀಣ ಬದುಕಿನ ಕುರಿತು ಇರುವ 'ರಮ್ಯ ಕಲ್ಪನೆ'ಗಳನ್ನು ಛೇಡಿಸುತ್ತ "ಒಂದು ಗ್ರಾಮವೆಂದರೆ ಸಂಕುಚಿತ ಸ್ಥಳೀಯತೆಯ ಉಗ್ರಾಣ, ಅಜ್ಞಾನದ, ಸಂಕುಚಿತ ಮನೋಭಾವನೆಯ ಹಾಗೂ ಜಾತೀಯತೆಯ ಕೇಂದ್ರ" ಎಂದು ಅಂಬೇಡ್ಕರ್ ಅವರು ಹೇಳುತ್ತಾರೆ. ಫ್ಯೂಡಲ್ ವ್ಯವಸ್ಥೆಯು ಒಳಗೊಂಡಿರುವ ಅಸಮಾನತೆ ಮತ್ತು ಅನ್ಯಾಯಗಳ ವಿರುದ್ಧ ಅಂಬೇಡ್ಕರ್ ಅವರು ತಮ್ಮ ಜೀವಿತದ ಉದ್ದಕ್ಕೂ ಹೋರಾಡಿರುವುದನ್ನು ನೋಡಬಹುದು. ಫ್ಯೂಡಲ್ ವ್ಯವಸ್ಥೆಯ ಕ್ರೂರ ವಿಧಾನಗಳ ಅವಿರತ ಹೋರಾಟವೇ ಅಂಬೇಡ್ಕರ್ ಅವರ ಜೀವನವಾಗಿತ್ತು. ನಗರ ಕೇಂದ್ರಗಳು ಹಾಗೂ ನಗರಾಧಾರಿತ ಉದ್ದಿಮೆಗಳು ಫ್ಯೂಡಲ್ ಶೋಷಣೆಗೊಳಗಾದವರಿಗೆ ಉತ್ತಮ ಅವಕಾಶಗಳನ್ನು ಒದಗಿಸಬಲ್ಲವು ಎಂದು ಅಂಬೇಡ್ಕರ್ ಅರಿತಿದ್ದರು. ಔದ್ಯೋಗೀಕರಣಗೊಂಡ ಸಮಾಜದಲ್ಲಿ ತಾರತಮ್ಯವು ಕಮ್ಮಿಯಿರುತ್ತದೆ ಹಾಗೂ ಬಂಡವಾಳಶಾಹೀ ವ್ಯವಸ್ಥೆಯಲ್ಲಿ ಶೋಷಣೆಗೊಳಗಾದ ಜಾತಿಗಳು ಹೆಚ್ಚು ಸುರಕ್ಷತೆಯನ್ನು ಹೊಂದಿರುತ್ತವೆ ಎಂಬುದನ್ನು ಅಂಬೇಡ್ಕರ್ ಅರಿತಿದ್ದರು. ಅಂಬೇಡ್ಕರ್ ಅವರ ಈ ತಿಳುವಳಿಕೆಯು ಇತಿಹಾಸದ ಕುರಿತು ಇರುವ ಮಾರ್ಕ್ಸ್‌ವಾದೀಯ ತಿಳುವಳಿಕೆಗೆ ಸರಿಸಮನಾಗಿದೆ. ೧೭೮೯ರ ಫ್ರಾನ್ಸಿನ ಕ್ರಾಂತಿಯನ್ನು "ಫ್ಯೂಡಲ್ ಆಸ್ತಿ ಬದಲು ಬಂಡವಾಳಶಾಹೀ ಆಸ್ತಿಯನ್ನು ತಂದಂತಹ ಕ್ರಾಂತಿ ಎಂದು ಮಾರ್ಕ್ಸ್ ಬಣ್ಣಿಸಿದ್ದು ಕಮ್ಯುನಿಸ್ಟ್ ಪ್ರಣಾಳಿಕೆಯಲ್ಲಿ ಮಾರ್ಕ್ಸ್ ಹೇಳುತ್ತಾರೆ, "ಬಂಡವಾಳಶಾಹೀ ವ್ಯವಸ್ಥೆಯು ದೊಡ್ಡ ದೊಡ್ಡ ನಗರಗಳನ್ನು ಸೃಷ್ಟಿಸಿದೆ, ನಗರದ ಜನಸಂಖ್ಯೆಯನ್ನೂ ಅಪಾರವಾಗಿ ಹೆಚ್ಚಿಸಿದೆ ಹಾಗೂ ತನ್ಮೂಲಕ ಗ್ರಾಮೀಣ ಜೀವನದಿಂದ ಅಪಾರ ಸಂಖ್ಯೆಯಲ್ಲಿ ಜನರನ್ನು ಕಾಪಾಡಿದೆ." ಲಾಭವನ್ನು ತನ್ನದಾಗಿಸುವ ಭರದಲ್ಲಿ ಬಂಡವಾಳಶಾಹೀ ಪದ್ಧತಿಯು ಕ್ರೂರವಾಗಿದ್ದರೂ, ಫ್ಯೂಡಲ್ ವ್ಯವಸ್ಥೆಗಿಂತ ಎಷ್ಟೋ ಪಾಲು ಉತ್ತಮವಾದದ್ದಾಗಿದೆ. ಮಾರ್ಕ್ಸ್ ಪ್ರಕಾರ ಸಮಾಜದ ಸ್ವಾಭಾವಿಕ ವಿಕಾಸ ಅಥವಾ ಅಭಿವೃದ್ಧಿಯ ರೀತಿ ಈ ರೀತಿಯಲ್ಲೇ ಇರುವುದು. ಹೀಗಾಗಿ ಅಂಬೇಡ್ಕರ್ ಹಾಗೂ ಮಾರ್ಕ್ಸ್‌ರವರ ತಿಳುವಳಿಕೆಗಳಿಗೂ ಅಪಾರ ಸಾಮ್ಯತೆಗಳನ್ನು ನೋಡಬಹುದು.




**ಫ್ಯೂಡಲ್ ವ್ಯವಸ್ಥೆ**

"ಶ್ರಮಜೀವಿಗಳೂ ಮತ್ತು ಪಾರ್ಲಿಮೆಂಟರೀ ಪ್ರಜಾಪ್ರಭುತ್ವ" ಎಂಬ ತಮ್ಮ ಲೇಖನದಲ್ಲಿ ಅಂಬೇಡ್ಕರ್ ಅವರು "ಭಾರತದ ಶ್ರಮ ಜೀವಿ ವರ್ಗವು ತನ್ನ ಮೂರು ಮುಖ್ಯ ತಪ್ಪುಗಳನ್ನು ಸರಿಪಡಿಸಿಕೊಂಡಲ್ಲಿ ಉತ್ತಮ ಜೀವನವನ್ನು ನಡೆಸಬಹುದೆಂದು" ಹೇಳುತ್ತಾರೆ. ಅವುಗಳೆಂದರೆ:

೧. ಶ್ರಮಜೀವಿ ವರ್ಗವು ಮಾನವ ಸಮಾಜವನ್ನು ಆಳುವ ಶಕ್ತಿಯಿರುವ ಸಾಹಿತ್ಯ ಹಾಗೂ ಚಿಂತನೆಗಳನ್ನು ತಿಳಿದುಕೊಳ್ಳದೇ ಇರುವುದು ಮೊದಲನೇ ದೊಡ್ಡ ತಪ್ಪು. ಅಂಬೇಡ್ಕರ್ ಅವರ ಪ್ರಕಾರ ಶೋಷಣೆಗೊಳ ಗಾದವರೆಲ್ಲರೂ ಮಾರ್ಕ್ಸ್‌ವಾದವನ್ನು ಓದಲೇ ಬೇಕು. ಮಾರ್ಕ್ಸ್‌ವಾದವು ಆರ್ಥಿಕ ಸಂಬಂಧಗಳ ಕುರಿತು ವಿಶ್ಲೇಷಿಸುವುದರಿಂದ ಇದನ್ನು ತಿಳಿದುಕೊಂಡಿರಲೇಬೇಕು. ಅಂಬೇಡ್ಕರ್ ಅವರು ಹೇಳುತ್ತಾರೆ, "ದುಡಿವ ವರ್ಗಕ್ಕೆ ಸೇರಿದ ಪ್ರತಿಯೊಬ್ಬರೂ ರುಸೋವಿನ 'ಸಾಮಾಜಿಕ ಒಪ್ಪಂದ', ಮಾರ್ಕ್ಸ್‌ನ ಕಮ್ಯುನಿಸ್ಟ್ ಪ್ರಣಾಳಿಕೆ... ಇವುಗಳನ್ನು ತಿಳಿದಿರಲೇಬೇಕು. ಆದರೆ ಇವುಗಳ ಬದಲಾಗಿ ರಾಜ ಮಹಾರಾಜರುಗಳ ಕುರಿತಿರುವ ಸುಳ್ಳು ಹಾಗೂ ವೈಭವೀಕೃತ ಕಥೆಗಳನ್ನು ಕೇಳುತ್ತ ಬಂದಿರುತ್ತಾರೆ".

೨. ಅಂಬೇಡ್ಕರ್ ಅವರ ಪ್ರಕಾರ ಶ್ರಮಜೀವಿ ವರ್ಗದ ಎರಡನೇ ದೊಡ್ಡ ತಪ್ಪೆಂದರೆ "ಪ್ರಭುತ್ವವನ್ನು (ಸರ್ಕಾರವನ್ನು) ವಶಪಡಿಸಿಕೊಳ್ಳುವತ್ತ ಅವರಿಗಿರುವ ನಿರಾಸಕ್ತಿ" ಶ್ರಮಜೀವಿ ವರ್ಗವು ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಉದ್ದೇಶದಿಂದಾದರೂ ಸರ್ಕಾರವನ್ನು ನಿಯಂತ್ರಿಸುವುದರ ಅಗತ್ಯತೆಯನ್ನು ಕೂಡ ಮನಗಂಡಿಲ್ಲ ಎಂದು ಖೇದವನ್ನು ವ್ಯಕ್ತಪಡಿಸಿರು ತ್ತಾರೆ. ಕಾರ್ಮಿಕ ಸಂಘಟನೆಗಳು ಕಾರ್ಮಿಕರ ಪ್ರಜ್ಞೆಯನ್ನು ಸಂಕುಚಿತ ಗೊಳಿಸಿದ್ದು ಸರ್ಕಾರವನ್ನು ವಶಪಡಿಸಿಕೊಳ್ಳುವ ನಿಟ್ಟಿನಲ್ಲಿ ಕಾರ್ಮಿಕ ಸಂಘಟನೆಗಳು ಕೆಲಸ ಮಾಡಬೇಕೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ.

೩. ಶ್ರಮಜೀವಿ ವರ್ಗದ ಮೂರನೇ ಪ್ರಮುಖ ತಪ್ಪೆಂದರೆ "ಹುಸಿ ರಾಷ್ಟ್ರೀಯತೆಗೆ" ಮರುಳಾಗುವುದು. ಅಂಬೇಡ್ಕರ್ ಅವರು ಹೇಳುತ್ತಾರೆ, "ಎಲ್ಲ ರೀತಿಯಿಂದಲೂ ಶೋಷಣೆಗೆ, ಬಡತನಕ್ಕೆ ತಳ್ಳಲ್ಪಟ್ಟ ಶ್ರಮಜೀವಿ ವರ್ಗವು ದೇಶಭಕ್ತಿ, ರಾಷ್ಟ್ರೀಯತೆಯಂತಹ ಭಾವನೆಗಳಿಗೆ ಬಲಿಯಾಗಿ ಏನನ್ನು ಬೇಕಾದರೂ ತ್ಯಾಗ ಮಾಡಲು ಸಿದ್ಧರಾಗುತ್ತಾರೆ. ಇವರುಗಳ ತ್ಯಾಗ, ಬಲಿದಾನಗಳಿಂದ ಬಂದ 'ರಾಷ್ಟ್ರೀಯ ಸರ್ಕಾರ'ವು ಶ್ರಮಜೀವಿಗಳನ್ನು ತುಳಿದು ಹಾಕಿ ಅವರುಗಳ ವಿರೋಧಿಯಾಗಿ ಕೆಲಸ ಮಾಡುವುದನ್ನು ನೋಡಬಹುದು". ಅಂತಾರಾಷ್ಟ್ರೀಯತೆ ಎಂಬುದೇ ಶ್ರಮಜೀವಿ ವರ್ಗದ ನೈಜ ಗುಣ ಎಂಬುದು ಅಂಬೇಡ್ಕರ್ ಅವರ ಖಚಿತ ಅಭಿಪ್ರಾಯವಾಗಿತ್ತು. ಹಳೆಯ ಗತವೈಭವಗಳನ್ನು ಆರಾಧಿಸುವ ರಾಷ್ಟ್ರೀಯತೆಯನ್ನು ಶ್ರಮಜೀವಿ ವರ್ಗವು ತಿರಸ್ಕರಿಸಬೇಕೆಂಬುದೇ ಅಂಬೇಡ್ಕರ್ ಅವರ ಆಶಯವಾಗಿತ್ತು. ಮಾರ್ಕ್ಸ್ ಹೇಳುವ ಶ್ರಮಜೀವಿಗಳ ಅಂತಾರಾಷ್ಟ್ರೀಯತೆಯು ಕಮ್ಯುನಿಸಮ್ಮಿನ ಪ್ರಮುಖ ನಿಲುವಾಗಿದ್ದು ಅಂಬೇಡ್ಕರ್ ಅವರೂ ಸಹ ಇದನ್ನು ಸಮ್ಮತಿಸುವುದನ್ನು ನೋಡಬಹುದು. ತಮ್ಮ ಸ್ವಂತ ಹಿತಾಸಕ್ತಿಗಳನ್ನು ಕಾಪಾಡಲಾದರೂ ಶ್ರಮಜೀವಿ ವರ್ಗವು ಪ್ರಭುತ್ವವನ್ನು ತನ್ನದಾಗಿಸಿ ಕೊಳ್ಳಬೇಕೆಂದು ಅಂಬೇಡ್ಕರ್ ವಾದಿಸುತ್ತಾರೆ. ಈ ಎಲ್ಲ ಅಂಶಗಳನ್ನು ಹಿನ್ನೆಲೆಯಲ್ಲಿಟ್ಟುಕೊಂಡು ವರ್ತಮಾನದ ಕುರಿತು ಹಾಗೂ ಭವಿಷ್ಯತ್ತಿನಲ್ಲಿ ಮಾಡಬೇಕಾದ ಕೆಲಸಗಳ ಕುರಿತು ಗಮನ ಹರಿಸೋಣ.

**ವರ್ತಮಾನದ ದಿನಗಳು ಹಾಗೂ ಮುಂಬರುವ ದಿನಗಳು**

ಎರಡು ಪ್ರಮುಖ ಕಾರಣಗಳಿಗೋಸ್ಕರ ನಮ್ಮ ದೇಶದ ಸದ್ಯದ ಸ್ಥಿತಿ

ಬಹಳ ಗಂಭೀರವಾಗಿದೆ. ಫ್ಯೂಡಲ್ ಹಾಗೂ ಸನಾತನವಾದಿಗಳು 'ಧರ್ಮಾಭಿಮಾನ'ದ ಹೆಸರಿನಲ್ಲಿ ಮೆರೆಯಲು ಆರಂಭಿಸಿದ್ದಾರೆ. ಎರಡನೆಯದಾಗಿ ೧೯೯೦ರ ನಂತರದ ಹೊಸ ಆರ್ಥಿಕ ನೀತಿಯ ಪರಿಣಾಮವಾಗಿ ದೇಶದ ಆರ್ಥಿಕತೆಯು ಸಂಪೂರ್ಣವಾಗಿ ಬದಲಾವಣೆಗೆ ಒಳಪಟ್ಟಿದೆ. ೧೯೯೦ಕ್ಕೂ ಪೂರ್ವದಲ್ಲಿ (೧) ಮಿಶ್ರ ಆರ್ಥಿಕ ನೀತಿಯಡಿಯಲ್ಲಿ ಸರ್ಕಾರವೇ ಮುಂದೆ ನಿಂತು ದೇಶದ ಆರ್ಥಿಕತೆಯನ್ನು ನಿರೂಪಿಸುತ್ತಿತ್ತು ಹಾಗೂ (೨) ಜಾತ್ಯತೀತತೆ ಮತ್ತು ವೈಜ್ಞಾನಿಕ ಮನೋಭಾವವು ಪ್ರಭುತ್ವದ ನಿರ್ದೇಶನಾತ್ಮಕ ನೀತಿಗಳಾಗಿದ್ದವು. ಇವೆರಡೂ ಈಗ ನಾಶಗೊಳಿಸಲ್ಪಡುತ್ತಿವೆ ಹಾಗೂ ಕಣ್ಮರೆಯಾಗುತ್ತಿವೆ.

ದೇಶದ ಆರ್ಥಿಕತೆಗೆ ಅತೀ ಅಗತ್ಯವಾದ ಉದ್ದಿಮೆಗಳಲ್ಲಿ, ಬೃಹತ್ ಉದ್ದಿಮೆಗಳಲ್ಲಿ ಸರ್ಕಾರವೇ ಬಂಡವಾಳವನ್ನು ಹೂಡಿ ಅವುಗಳನ್ನು ನಡೆಸುವ ಕಾಲವೊಂದಿತ್ತು. ಆದರೆ ಈಗ ಸರ್ಕಾರಿ ಸ್ವಾಮ್ಯದ ಉದ್ದಿಮೆಗಳಿಂದ "ಬಂಡವಾಳದ ಹಿಂದೆಗೆತ"ವೇ ಪ್ರಭುತ್ವದ ಮಂತ್ರವಾಗಿದೆ. ಪ್ರಭುತ್ವದ ಈಗಿನ ಕ್ರಮಗಳು IMF, WTO, ವಿಶ್ವಬ್ಯಾಂಕುಗಳು ಉಪದೇಶಿಸುವ ನವ ಉದಾರೀಕರಣದ ನೀತಿಗಳಿಗೆ ಅನುಗುಣವಾಗಿವೆ. ಉದಾಹರಣೆಯಾಗಿ ನಾವು BHEL, BEL, HMT, ITI, NGEF, HAL, ವಿದ್ಯುತ್ ಪ್ರಾಜೆಕ್ಟುಗಳು, ಸ್ಟೀಲ್ ಉದ್ದಿಮೆಗಳು, ಗಣಿ ಕಂಪೆನಿಗಳು ಹೀಗೆ ಎಷ್ಟೋ ಸರ್ಕಾರೀ ಸ್ವಾಮ್ಯದ ಸಂಸ್ಥೆಗಳ ಹೆಸರುಗಳನ್ನು ಹೇಳಬಹುದು. ೧೯೫೦-೮೦ರಲ್ಲಿ ಸರ್ಕಾರದ ಭಾಗವಾಗಿ ಸಾರ್ವಜನಿಕ ಸೊತ್ತಾಗಿ ಇವುಗಳೆಲ್ಲ ಬೆಳೆಸಲ್ಪಟ್ಟವು. ಆಶ್ಚರ್ಯವೆಂದರೆ ೧೯೯೦ರ ನಂತರದಲ್ಲಿ ಸರ್ಕಾರೀ ಸ್ವಾಮ್ಯದಲ್ಲಿ ಯಾವ ಹೊಸ ಉದ್ದಿಮೆ ಅಥವಾ ಕಂಪೆನಿ ಆರಂಭಗೊಂಡಿದೆ ಎಂಬುದನ್ನು ಹೇಳಲಿಕ್ಕೂ ಆಗದ ಸ್ಥಿತಿ ಬಂದೊದಗಿದೆ. ೧೯೯೦ರ ನಂತರ ಭಾರತದ ಆರ್ಥಿಕತೆಯನ್ನು ದೇಶೀಯ ಹಾಗೂ ವಿದೇಶೀ ಬಂಡವಾಳಗಾರರ ಪರವಾಗಿ ಸಂಪೂರ್ಣ ಖಾಸಗೀಕರಣದತ್ತ ಒಯ್ಯಲಾಗಿದೆ. ಹೀಗಾಗಿ ಜನಪರ ಹಾಗೂ ಎಡ ಚಳುವಳಿಗಳು ಸಾರ್ವಜನಿಕ ಉದ್ದಿಮೆಗಳನ್ನು ರಕ್ಷಿಸುವ ನಿಟ್ಟಿನಲ್ಲಿ ಹಾಗೂ ಖಾಸಗೀಕರಣದ ದಾಳಿಯ ವಿರುದ್ಧ ಹೆಣಗಾಡುವ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಹಿಂದೆ ಕೃಷಿ ಹಾಗೂ ಗ್ರಾಮೀಣ ಕ್ಷೇತ್ರಗಳಿಗೆ ಬಂಡವಾಳದ ಹರಿವನ್ನು ಉತ್ತೇಜಿಸುವ ನಿಟ್ಟಿನಲ್ಲಿ ಬ್ಯಾಂಕುಗಳ ರಾಷ್ಟ್ರೀಕರಣವನ್ನು ನಡೆಸಲಾಯಿತು. ಆದರೆ ಈಗ ಬ್ಯಾಂಕುಗಳು ದೇಶೀ ಹಾಗೂ ವಿದೇಶೀ ಬಂಡವಾಳದ ದಾಳಿಗೆ ಒಳಗಾಗಿವೆ. ಕೃಷಿ, ಸಾಮಾಜಿಕ ಸುರಕ್ಷತಾ ಕಾರ್ಯಕ್ರಮಗಳಿಗೆ ಸಿಗುತ್ತಿದ್ದ ಸಬ್ಸಿಡಿಗಳಲ್ಲಿ ಕಡಿತ ಅಥವಾ ಹಿಂದೆಗೆತ ಈಗಿನ ಮಂತ್ರವಾಗಿದೆ. ಉದಾಹರಣೆಗೆ "ಸಾರ್ವಜನಿಕ ಪಡಿತರ ವ್ಯವಸ್ಥೆ (PDS)"ಯನ್ನು ಸಂಪೂರ್ಣವಾಗಿ ಉಪೇಕ್ಷಿಸಲಾಗಿದೆ. ಇದು ನವ ಉದಾರೀಕರಣದ ಪರ ಇರುವ ಆರ್ಥಿಕ ತಜ್ಞರ ಸಲಹೆಗಳಿಗನುಸಾರವಾಗಿ ಕೈಗೊಂಡಿರುವ ಕ್ರಮಗಳಾಗಿವೆ.

ಫ್ರಾನ್ಸಿನ ಆರ್ಥಿಕ ತಜ್ಞ ಥಾಮಸ್ ಪಿಕೆಟಿಯವರು ಭಾರತದ ಆರ್ಥಿಕತೆಯನ್ನು ಅಭ್ಯಾಸ ಮಾಡಿ ನಂತರ "ಬ್ರಿಟಿಷ್ ರಾಜರಿಂದ ಬಿಲಿಯಾಧಿಪತಿಗಳ ಕಡೆಗೆ (From British Raj to Billionaire Raj)" ಎಂಬ ತಮ್ಮ ಲೇಖನದಲ್ಲಿ ಭಾರತದ ಈಗಿನ ಆರ್ಥಿಕ ಪರಿಸ್ಥಿತಿಯನ್ನು ವಿಶ್ಲೇಷಿಸಿದ್ದಾರೆ. ಬ್ರಿಟಿಷರ ಆಡಳಿತದ ಅವಧಿಯಲ್ಲಿ ರಾಷ್ಟ್ರೀಯ ಆದಾಯದ ಶೇಕಡಾ ೨೦ರಷ್ಟು ಭಾಗವು ದೇಶದ ಶೇಕಡಾ ೧ರಷ್ಟು ಜನರು ಬಾಚಿದ್ದರು. ಸ್ವಾತಂತ್ರ್ಯಾನಂತರ ಭಾರತವು ತನ್ನ ಸಮಾಜವಾದೀ ನೀತಿಗಳಿಗನುಸಾರವಾಗಿ ಅನೇಕ ನಿರ್ಬಂಧನೆಗಳ ಮೂಲಕ ರಾಷ್ಟ್ರೀಯ ಆದಾಯವು ಹೆಚ್ಚು ಕಮ್ಮಿ ಸಮನಾಗಿ ಹಂಚಿಕೆಯಾಗುವಂತೆ ನೋಡಿಕೊಂಡಿತ್ತು. ೧೯೫೧-೮೦ರ ಅವಧಿಯಲ್ಲಿ ರಾಷ್ಟ್ರೀಯ ಆದಾಯದ ಹೆಚ್ಚಳದಲ್ಲಿ ಶೇಕಡಾ ೨೮ರಷ್ಟನ್ನು ಆರ್ಥಿಕವಾಗಿ ಹಿಂದುಳಿದವರಲ್ಲಿ ಶೇಕಡಾ ೫೦ರಷ್ಟು ಮಂದಿ ತಮ್ಮದಾಗಿಸಿಕೊಂಡರೆ, ೧೯೮೦-೨೦೧೫ರ ಅವಧಿಯಲ್ಲಿ ಒಟ್ಟಾರೆ ಅಭಿವೃದ್ಧಿಯ ಶೇಕಡಾ ೨೯ರಷ್ಟನ್ನು ಅರ್ಥಿಕವಾಗಿ ಸದೃಢರಾದ ಶೇಕಡಾ ೧ರಷ್ಟು ಮಂದಿ ಬಾಚಿಕೊಂಡಿರುವುದನ್ನು ಕಾಣಬಹುದು. ೧೯೯೬ರಲ್ಲಿ ಭಾರತದಲ್ಲಿ ೩ ಮಂದಿ ಬಿಲಿಯಾಧಿಪತಿಗಳಿದ್ದರೆ ೨೦೧೮ರ ವೇಳೆಗೆ ೧೧೦ಕ್ಕೂ ಹೆಚ್ಚು ಮಂದಿ ಬಿಲಿಯಾಧಿಪತಿಗಳನ್ನು ನೋಡಬಹುದಾಗಿದೆ. ಇವರುಗಳು ಶೇಕಡಾ ೧೭ಕ್ಕಿಂತಲೂ ಹೆಚ್ಚಿನ GDPಯನ್ನು ತಮ್ಮ ನಿಯಂತ್ರಣದಲ್ಲಿ ಇರಿಸಿಕೊಂಡಿದ್ದಾರೆ. ೧೯೯೬ರಿಂದ ಮೂರು ಲಕ್ಷಕ್ಕೂ ಹೆಚ್ಚು ಮಂದಿ ರೈತರು ಆತ್ಮಹತ್ಯೆ ಮಾಡಿಕೊಂಡಿರುತ್ತಾರೆ. ೪೫ ವರ್ಷಗಳಲ್ಲಿ ನೋಡಿರದ ಪ್ರಮಾಣದಲ್ಲಿ ಈಗ ನಿರುದ್ಯೋಗ ತಾಂಡವವಾಡುತ್ತಿದೆ. ಆರ್ಥಿಕತೆ ಹಾಗೂ ಉತ್ಪಾದನಾ ಸಂಬಂಧಗಳು ಸಂಪೂರ್ಣವಾಗಿ ಬದಲಾಗಿವೆ. GDPಯಲ್ಲಾಗುವ ಹೆಚ್ಚಳವು ದೊಡ್ಡ ದೊಡ್ಡ ಉದ್ದಿಮೆದಾರರ ಹಾಗೂ ಏಕಸ್ವಾಮ್ಯ ಬಂಡವಾಳದ ಕೈ ಸೇರುತ್ತಿದೆ. ಸರ್ಕಾರದ ಎಲ್ಲ ನೀತಿಗಳೂ ಬಂಡವಾಳಗಾರರ ಪರ ವಾಲಿವೆ. ಜಮೀನು ನೀಡುವಲ್ಲಿ, ಪರಿಸರ ಸಂರಕ್ಷಣೆಯ ವಿಚಾರಗಳಲ್ಲಿ, ಕಾರ್ಮಿಕ ಕಾಯ್ದೆಗಳ ವಿಚಾರಗಳಲ್ಲಿ– ಎಲ್ಲದರಲ್ಲೂ ಸರ್ಕಾರದ ನೀತಿಗಳು ಬಂಡವಾಳಗಾರರ ಪರವಾಗಿ ಮಾರ್ಪಾಡಾಗುತ್ತಿವೆ. ಉದಾಹರಣೆಗೆ, ಗುಜರಾತ್ ಸರ್ಕಾರವು ಟಾಟಾದವರ ಒಂದು ನ್ಯಾನೋ ಕಾರಿನ ಮೇಲೆ ರೂ. ೬೦೦೦೦/-ದಷ್ಟು ಸಬ್ಸಿಡಿ ನೀಡುತ್ತಿತ್ತು. ಇದು ಆ ಕಾರಿನ ಬೆಲೆಯ ಮೂರನೇ ಒಂದು ಭಾಗವಾಗಿದ್ದು ಸರ್ಕಾರವೇ ಈ ಕಾರಿನ ಉತ್ಪಾದನೆಗೆ ಕೈ ಹಾಕದೇ ಒಂದು ಖಾಸಗೀ ಕಂಪೆನಿಗೆ ಇಷ್ಟೆಲ್ಲ ಸಬ್ಸಿಡಿ ಕೊಡುತ್ತಿರುವುದು ಯಾಕೆಂಬುದು ಯಕ್ಷಪ್ರಶ್ನೆಯಾಗಿದೆ.

ದೇಶದ ಯುವಜನತೆಯನ್ನು ದಾರಿದ್ರ್ಯಕ್ಕೆ ತಳ್ಳಿದ ನೀತಿಗಳ ಪರಿಣಾಮವಾಗಿ ಸಾಮಾಜಿಕ ಪ್ರಕ್ಷೋಭೆ ಹೆಚ್ಚಾಗುತ್ತಿದೆ. ಭಾರತೀಯ ಸಮಾಜದ ಮೇಲ್ಜಾತಿಯ ಜನರಿಗೂ ಮೀಸಲಾತಿಬೇಕು ಎನ್ನುವ ಚಳುವಳಿಗಳು, ಕಾಯ್ದೆಗಳು ನಮ್ಮ ನಡುವೆ ತಲೆಯೆತ್ತುತ್ತಿರುವ ಅಪಾಯಕಾರೀ ಮನೋವೃತ್ತಿಗಳನ್ನು ಪ್ರತಿಫಲಿಸುತ್ತವೆ. ಆರ್ಥಿಕ ಹಾಗೂ ಸಾಮಾಜಿಕ ಹತಾಶೆಗಳು ಫ್ಯಾಸಿಸಂನ ಉದ್ಭವಕ್ಕೆ ಕಾರಣವಾಗಿ ಉರಿಯುವ ಬೆಂಕಿಗೆ ತುಪ್ಪ ಸುರಿದಂತಾಗಿದೆ. ಫ್ಯಾಸಿಸ್ಟ್ ಪ್ರಭುತ್ವವು ಮುಸ್ಲಿಮರನ್ನು ಗುರಿಯಾಗಿಸಿದ್ದು ಅವರುಗಳು ಸದಾ ತಮ್ಮ ರಾಷ್ಟ್ರಭಕ್ತಿಯನ್ನು, ರಾಷ್ಟ್ರೀಯತೆಯನ್ನು ಪ್ರದರ್ಶಿಸಬೇಕಾದ ಪರಿಸ್ಥಿತಿಗೆ ಅವರನ್ನು ಒಡ್ಡಲಾಗಿದೆ. ಮುಸ್ಲಿಮರ ವ್ಯಾಪಾರ – ವ್ಯವಹಾರಗಳನ್ನು ಗುರಿಯಾಗಿಸಿ ಕೊಂಡು ಅವರುಗಳನ್ನು ನಮ್ಮ ಸಮಾಜದಿಂದ "ಬೇರೆಯವರು" ಎಂಬಂತೆ ಬಿಂಬಿಸಲಾಗುತ್ತಿದೆ. Mob Lynching (ಒಬ್ಬನನ್ನು ಅನೇಕರು ಸೇರಿ ಹೊಡೆದು ಕೊಲ್ಲುವುದು), ಸಾಮೂಹಿಕ ಹಿಂಸೆ ಇವುಗಳಿಗೆ ಫ್ಯಾಸಿಸ್ಟ್ ಸರ್ಕಾರವು ಮೌನ ಸಮ್ಮತಿಯನ್ನು ನೀಡುತ್ತಿದೆ. ದೇಶವನ್ನಾಳುವವರು ನಿರುದ್ಯೋಗ ಸಮಸ್ಯೆ, ಆರ್ಥಿಕ ಅಸಮಾನತೆ, ಬಡತನ ಇವುಗಳ ಕುರಿತು ಮಾತನಾಡುವ ಬದಲು ಜನರನ್ನು ವಿಭಜಿಸುವ ಧಾರ್ಮಿಕ ವಿಚಾರಗಳ ಕುರಿತು, ಕೋಮುವಾದೀ ವಿಚಾರಗಳ ಕುರಿತು ಮಾತನಾಡುತ್ತಿದ್ದಾರೆ. ದೊಡ್ಡ ಬಂಡವಾಳದ ಹಿತವನ್ನು ಕಾಪಾಡುವ ಭರದಲ್ಲಿ ಸಾಮಾನ್ಯರನ್ನು ಆರ್ಥಿಕ ಕ್ಷೋಭೆಗೆ ಒಳಪಡಿಸಲಾಗುತ್ತಿದೆ. ಇದೆಲ್ಲವುಗಳ ಪರಿಣಾಮವಾಗಿ ನಮ್ಮ ದೇಶದ ಯುವ ಜನತೆ HALಅನ್ನು ಯಾಕೆ ವಿನಾಶದ ಅಂಚಿಗೆ ತರಲಾಗುತ್ತಿದೆ, ಯಾಕೆ ಒಬ್ಬ ಬಂಡವಾಳಗಾರನ ಪರವಾಗಿ ಸರ್ಕಾರ ಕೆಲಸ ಮಾಡುತ್ತಿದೆ ಎಂದು ಕೇಳುತ್ತಿಲ್ಲ.



**Mob Lynching (ಒಬ್ಬನನ್ನು ಅನೇಕರು ಸೇರಿ ಹೊಡೆದು ಕೊಲ್ಲುವುದು)**



**ಲೂಯಿ ಬೋನಪಾರ್ಟೆಯ ಹದಿನೆಂಟನೇ ಬ್ರೂಮೇರ್**

ಅದರ ಬದಲು ಮಸೀದಿಯಿರುವ ಜಾಗದಲ್ಲಿ ದೇವಸ್ಥಾನದ ನಿರ್ಮಾಣವನ್ನು ಆಗ್ರಹಿಸುವಂತೆ ಅವರುಗಳನ್ನು ಪ್ರಚೋದಿಸಿ ದಾರಿ ತಪ್ಪಿಸಲಾಗುತ್ತಿದೆ.

ಹುಸಿ ರಾಷ್ಟ್ರೀಯತೆ, ಧರ್ಮದ ಆಧಾರದಲ್ಲಿ ಜನಾಂಗೀಯ ದ್ವೇಷ, ದೇಶದ ಸಮಸ್ಯೆಗಳನ್ನು ಒಬ್ಬನೇ ಒಬ್ಬ ಏಕಾಂಗಿಯಾಗಿ ಪರಿಹರಿಸಬಲ್ಲನೆಂದು ಹೇಳಿ ಸರ್ವಾಧಿಕಾರತ್ವದ ಸ್ಥಾಪನೆ–ಇವು ಫ್ಯಾಸಿಸ್ಟ್ ಚಳುವಳಿಯ ಉದ್ದೇಶಿತ ಗುರಿಗಳಾಗಿವೆ. ಮುಸ್ಲಿಮರನ್ನು ಹೊಡೆದು ಕೊಲ್ಲುವುದನ್ನು ಕೆಲವರು ಕೇಕೆ ಹಾಕಿ ಸಂಭ್ರಮಿಸುವುದನ್ನು ಈಗೀಗ ಕಾಣಬಹುದಾಗಿದೆ. ಫ್ಯಾಸಿಸ್ಟರ ಈ ರೀತಿಯ ನಡವಳಿಕೆಗೆ ಈಗಿರುವ ಸಂವಿಧಾನದಲ್ಲಿ ಅವಕಾಶವಿಲ್ಲ. ಜಾತ್ಯತೀತತೆ, ಅಭಿವ್ಯಕ್ತಿ ಸ್ವಾತಂತ್ರ್ಯ, ಧಾರ್ಮಿಕ ಸ್ವಾತಂತ್ರ್ಯ, ಜೀವಿಸುವ ಸ್ವಾತಂತ್ರ್ಯ–ಇವೆಲ್ಲವೂ ಫ್ಯಾಸಿಸ್ಟರ ಉದ್ದೇಶಗಳಿಗಿರುವ ಅಡೆ ತಡೆಗಳಾಗಿವೆ. ಹೀಗಾಗಿ ಸ್ವಾತಂತ್ರ್ಯ ಪ್ರೇಮಿಗಳೂ, ಅಂಬೇಡ್ಕರ್‌ವಾದಿಗಳೂ, ಮಾರ್ಕ್ಸ್‌ವಾದಿಗಳೂ ಈಗ ಒಟ್ಟಾಗಿ, ಸಂವಿಧಾನದ ಆಶಯ ಹಾಗೂ ಮೌಲ್ಯಗಳನ್ನು ರಕ್ಷಿಸಲು ಒಂದಾಗಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಜಾಪ್ರಭುತ್ವವಾದೀ ಕ್ರಾಂತಿಯ ಹಾದಿಯಲ್ಲಿ ಎರಡು ವಿಚಾರಗಳನ್ನು ಎದುರಿಸಬೇಕಾಗಿದೆ. (೧) ಸಾಮಾಜಿಕ ನೆಲೆಯಲ್ಲಿ ಫ್ಯಾಸಿಸ್ಟ್ ಶಕ್ತಿಗಳನ್ನು ಎದುರಿಸುವುದು, (೨) ಏಕಸ್ವಾಮ್ಯ ಬಂಡವಾಳವನ್ನು ಹಿಮ್ಮೆಟ್ಟಿಸುವುದು. ಸಾಮಾಜಿಕ ಹಾಗೂ ಆರ್ಥಿಕ ಅಪಾಯಗಳನ್ನು ಹಿಮ್ಮೆಟ್ಟಿಸಿ ಪ್ರಜಾಪ್ರಭುತ್ವವಾದೀ ಕ್ರಾಂತಿಯನ್ನು ತರುವಲ್ಲಿ ನಮ್ಮ ಈಗಿನ ಸಂವಿಧಾನವು ಸಹಕಾರಿಯಾಗಿದೆ. ಜಾತ್ಯತೀತತೆ, ವೈಜ್ಞಾನಿಕ ಮನೋಭಾವ ಹಾಗೂ ಸಮಾಜವಾದ – ಇವುಗಳನ್ನು ದೇಶದ ಸಂವಿಧಾನವು ಉಪದೇಶಿಸಿದೆ. ಈ ಮೌಲ್ಯಗಳನ್ನು ರಕ್ಷಿಸಿ ಎತ್ತಿ ಹಿಡಿಯುವುದರ ಮೂಲಕ ಫ್ಯಾಸಿಸಂನ್ನು ಸೋಲಿಸಲು ಸಾಧ್ಯ. ಪ್ರಸ್ತುತದಲ್ಲಿ ನಮ್ಮ ದೇಶವು ಫ್ಯಾಸಿಸ್ಟ್ ಸರ್ವಾಧಿಕಾರದತ್ತ ಹೊರಳುತ್ತಿರುವುದು ಆತಂಕಕಾರಿಯಾದ ವಿಚಾರವಾಗಿದೆ.

ಸಂವಿಧಾನ ರಚನಾ ಸಭೆಯಲ್ಲಿ (Constituent Assembly) ಮಾತನಾಡುತ್ತ ಅಂಬೇಡ್ಕರ್ ಅವರು, 'ಏಕವ್ಯಕ್ತಿ ಪೂಜೆ'ಯ ಅಪಾಯದ ಕುರಿತು ಮಾತನಾಡುತ್ತ, "ಭಕ್ತಿ ಅಥವಾ ಏಕವ್ಯಕ್ತಿಯ ಪೂಜೆ ಅಥವಾ ಸಂಪೂರ್ಣ ಶರಣಾಗುವಿಕೆಯು ನಮ್ಮ ಸಮಾಜದಲ್ಲಿ ಅದು ವಹಿಸುವ ಪಾತ್ರವು ಬೇರೆ ದೇಶಗಳ ರಾಜಕೀಯದಲ್ಲಿ ಅದು ವಹಿಸುವ ಪಾತ್ರಕ್ಕಿಂತ ಬಹಳ ದೊಡ್ಡದಾಗಿದೆ. ಧಾರ್ಮಿಕ ಜಗತ್ತಿನಲ್ಲಿ ಭಕ್ತಿಯಿಂದ ಆತ್ಮವೊಂದು ಮೋಕ್ಷವನ್ನು ಪಡೆಯಬಹುದು ಆದರೆ ರಾಜಕೀಯದಲ್ಲಿ ಭಕ್ತಿ ಅಥವಾ ವ್ಯಕ್ತಿಪೂಜೆಯು ಸರ್ವಾಧಿಕಾರಕ್ಕೆ ಹಾಗೂ ಅವನತಿಗೆ ಕಾರಣವಾಗುತ್ತದೆ" ಎಂದು ಹೇಳಿರುವುದನ್ನು ಗಮನಿಸಬೇಕು. ಮಾರ್ಕ್ಸ್ ಸಹ ತನ್ನ "ಲೂಯಿ ಬೋನಪಾರ್ಟೆಯ ಹದಿನೆಂಟನೇ ಬ್ರೂಮೇರ್ (18th Brumaire of Louis Banaparte)" ಎಂಬ ಲೇಖನದಲ್ಲಿ ಅವಕಾಶವಾದೀ ರಾಜಕಾರಣಿಯೊಬ್ಬ ಬೂರ್ಷ್ವಾ ಪಾರ್ಲಿಮೆಂಟ್ ವ್ಯವಸ್ಥೆಯನ್ನು ದುರ್ಬಲಗೊಳಿಸಿ ಪ್ರತಿಗಾಮೀ ಫ್ಯೂಡಲ್ ಹಿತಾಸಕ್ತಿಗಳಿಗೆ ನೆರವಾಗುವ ಸಾಧ್ಯತೆ ಬಗ್ಗೆ ಎಚ್ಚರಿಸಿರುತ್ತಾರೆ.

ಫ್ಯಾಸಿಸಂನ್ನು ಎದುರಿಸಲು ಸಾಮಾಜಿಕ ಹಾಗೂ ಆರ್ಥಿಕ ಕಾರ್ಯಕ್ರಮಗಳನ್ನು ಮೇಳೈಸಬೇಕಾಗುತ್ತದೆ. 'ಸಾಮಾಜಿಕ ನ್ಯಾಯ'ವೆಂದರೆ ಕೇವಲ "ಮೀಸಲಾತಿ ಸೌಲಭ್ಯ"ವನ್ನು ವಿಸ್ತರಿಸುವುದು ಅಥವಾ ದಯಪಾಲಿಸುವುದು ಎಂಬ ಸಂಕುಚಿತತೆಗೆ ಎಲ್ಲರನ್ನೂ ಸೀಮಿತಗೊಳಿಸಲಾಗಿದೆ. ಆರ್ಥಿಕ ವ್ಯವಹಾರಗಳೆಲ್ಲವೂ ಖಾಸಗೀಕರಣಗೊಂಡಿರುವ ಹಿನ್ನೆಲೆಯಲ್ಲಿ "ಮೀಸಲಾತಿಯು" ತನ್ನ ಅರ್ಥವನ್ನು ಕಳೆದುಕೊಂಡಿದೆ. ಹೀಗಾಗಿ ಸಾಮಾಜಿಕ ನ್ಯಾಯವನ್ನು ಪಡೆಯಲು ಆರ್ಥಿಕವಾಗಿ ಬಲಗೊಳ್ಳುವುದು ಕೂಡ ಅತ್ಯಗತ್ಯವಾಗಿದೆ. ಮಾರ್ಕ್ಸ್‌ವಾದಿಗಳು ಹಾಗೂ ಅಂಬೇಡ್ಕರ್‌ವಾದಿಗಳು ವರ್ಗ ಮತ್ತು ಜಾತಿಗಳ ಕುರಿತು ಸೈದ್ಧಾಂತಿಕ ಚರ್ಚೆಗಳಲ್ಲಿ ಭಾಗಿಯಾಗಿದ್ದು ಸಾಮಾಜಿಕ ಪ್ರಸ್ತುತತೆಯಲ್ಲಿ ಯಾವುದು "ಮೂಲ" ಎಂಬುದನ್ನು ವ್ಯಾಖ್ಯಾನಿಸಿರುತ್ತಾರೆ. ಅಂಬೇಡ್ಕರ್ ಅವರ ಆರ್ಥಿಕ ಯೋಜನೆ/ ಕಾರ್ಯಕ್ರಮಗಳು ಮಾರ್ಕ್ಸ್‌ನ ಆರ್ಥಿಕ ಯೋಜನೆಗಳಿಗಿಂತ ಹೆಚ್ಚು ಭಿನ್ನವಾಗಿಲ್ಲದಿರುವುದನ್ನು ಈಗಾಗಲೇ ವಿಶ್ಲೇಷಿಸಿ ಆಗಿದೆ. ಅಂಬೇಡ್ಕರ್ ಅವರು "ಪ್ರಭುತ್ವ ಸಮಾಜವಾದ"ದ ಪ್ರಬಲ ಪ್ರತಿಪಾದಕರು. ಶ್ರಮಜೀವಿ ವರ್ಗವು ಪ್ರಭುತ್ವವನ್ನು ತನ್ನ ಕೈಗೆ ಬರುವಂತೆ ಹೋರಾಡಬೇಕೆಂಬುದೇ ಅವರ ಪ್ರಬಲ ಆಶಯವಾಗಿತ್ತು. ಮಾರ್ಕ್ಸ್‌ನ ಅಭಿಪ್ರಾಯವೂ ಸಹ ಇದೇ ಆಗಿರುತ್ತದೆ. ಮಾರ್ಕ್ಸ್ ಮತ್ತು ಅಂಬೇಡ್ಕರ್ ಅವರ ಮೂಲ ಆಶಯಗಳನ್ನು ಜಾರಿಗೆ ತರುವ ಪ್ರಯತ್ನ/ಹಾದಿಯಲ್ಲಿ "ವರ್ಗ ಮುಖ್ಯವೋ ಅಥವಾ ಜಾತಿ ಮುಖ್ಯವೋ" ಎಂಬುದು ಅನವಶ್ಯಕವಾದ ಚರ್ಚೆಯಾಗಿರುತ್ತದೆ. ಆರ್ಥಿಕ ಸಬಲೀಕರಣವು ತಾನೇ ತಾನಾಗಿ ಸಾಮಾಜಿಕ ಅಸಮಾನತೆ, ಜಾತಿ ಅಸಮಾನತೆಗಳನ್ನು ತೊಡೆದುಹಾಕುತ್ತವೆ ಎಂಬ ತಪ್ಪು ಗ್ರಹಿಕೆಗೆ ಕಮ್ಯುನಿಸ್ಟರು ಸಿಲುಕಿದ್ದರೆ ಅಂಬೇಡ್ಕರ್‌ವಾದಿಗಳೂ ಕೂಡ ಅಂಬೇಡ್ಕರ್ ಅವರ ಆರ್ಥಿಕ ಯೋಜನೆ/ ಕಾರ್ಯಕ್ರಮಗಳನ್ನು ಉಪೇಕ್ಷಿಸಿ ತಪ್ಪು ಮಾಡಿರುತ್ತಾರೆ. ಹೀಗಾಗಿ ಅಂಬೇಡ್ಕರ್ ಹಾಗೂ ಮಾರ್ಕ್ಸ್‌ರವರ ಸಾಮಾಜಿಕ ಹಾಗೂ ಆರ್ಥಿಕ ಕಾರ್ಯಕ್ರಮಗಳನ್ನು ಜಾರಿಗೆ ತರಲು ಐಕ್ಯ ಹೋರಾಟಗಳನ್ನು ನಡೆಸುವುದೇ ಪ್ರಸ್ತುತ ಕಾಲದ ಕರೆಯಾಗಿರುತ್ತದೆ. ದೇಶದ ಕೋಟ್ಯಂತರ ಬಡವರ ಮನದಲ್ಲಿ ಹೊಸ ಭರವಸೆಯನ್ನು ತರುವ ತೀವ್ರಗಾಮೀ ಆಂದೋಳನಗಳನ್ನು ನಡೆಸುವುದು ಅನಿವಾರ್ಯವಾಗಿದೆ. ಈ ಅಂಶಗಳ ಕುರಿತು ಅಂಬೇಡ್ಕರ್ ಹಾಗೂ ಮಾರ್ಕ್ಸ್ ಅವರುಗಳು ನೀಡಿರುವ ಕಾರ್ಯಕ್ರಮಗಳನ್ನು ಅರ್ಥೈಸಿಕೊಂಡು ಮುನ್ನಡೆಯಬೇಕಷ್ಟೆ.

ಅಂಬೇಡ್ಕರ್ ಅವರ ಭಾಷಣದ ತುಣುಕೊಂದನ್ನು ನೋಡೋಣ. "೨೬.೦೧.೧೯೫೦ರಂದು ನಾವು ಅನೇಕ ವೈರುಧ್ಯಗಳಿಂದ ಕೂಡಿದ ಜೀವನವನ್ನು ಪ್ರವೇಶಿಸಲಿದ್ದೇವೆ. ರಾಜಕೀಯದಲ್ಲಿ ನಮಗೆಲ್ಲರಿಗೂ ಸಮಾನತೆಯಿರುತ್ತದೆ. ಆದರೆ ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಅಸಮಾನತೆಯನ್ನು ಪಡೆದಿರುತ್ತೇವೆ.... ಸಾಮಾಜಿಕ ಹಾಗೂ ಆರ್ಥಿಕ ಅಸಮಾನತೆಯನ್ನು ಎಲ್ಲಿಯವರೆಗೆ ಮುಂದುವರೆಸಬೇಕು? ಈ ಎರಡೂ ಅಸಮಾನತೆಗಳನ್ನು ದೀರ್ಘಕಾಲ ಮುಂದುವರೆಸಿದ್ದಲ್ಲಿ ರಾಜಕೀಯ ಪ್ರಜಾಪ್ರಭುತ್ವವನ್ನು ಅಪಾಯಕ್ಕೆ ತಳ್ಳುವುದು ಖಂಡಿತ"

ಹೀಗಾಗಿ ಸಾಮಾಜಿಕ ಹಾಗೂ ಆರ್ಥಿಕ ಸಮಾನತೆಯನ್ನು ತರುವುದರ ಮೂಲಕ ಪ್ರಜಾಪ್ರಭುತ್ವವಾದೀ ಕ್ರಾಂತಿ ಸಾಧ್ಯ ಎಂಬುದನ್ನು ಅಂಬೇಡ್ಕರ್ ಅವರು ಬಹಳ ಸ್ಪಷ್ಟವಾಗಿ ನಮೂದಿಸಿರುತ್ತಾರೆ.

ಮೂಲ : **ಎಂ. ಸತ್ಯಾನಂದ** ಅನುವಾದ : **ಎಂ. ಸಿ. ಡೋಂಗ್ರೆ**
'ಆಶೀರ್ವಾದ' ೩ನೇ ತಿರುವು, ಎರಡನೇ ಮುಖ್ಯರಸ್ತೆ
ಆದರ್ಶನಗರ, ಹಾಸನ – ೫೬೦ ೦೬೧







ಲೇಖಕರು : ಪ್ರಸನ್ನ
ಪುಟಗಳು : ೧೮೪
ಬೆಲೆ : ೧೪೦
ಪ್ರಕಾಶಕರು : ಒಂಟಿದನಿ ಪ್ರಕಾಶನ

# ಶೂದ್ರರಾಗೋಣ ಬನ್ನಿ

**ನಾಗಜ್ಯೋತಿ ತರೀಕೆರೆ**

ಜಾಗತೀಕರಣ, ಪಾಶ್ಚಾತ್ಯೀಕರಣಗಳ ನಾಗಾಲೋಟದಲ್ಲಿ ಸಾಗುತ್ತಿರುವ ನಮ್ಮ ಪಯಣಕ್ಕೆ ಒಮ್ಮೆ ಬ್ರೇಕ್ ಹಾಕಿ ಸರಿಯಾದ ಗಮ್ಯ ತಲುಪುತ್ತೇವೆಯೇ? ಎಂಬ ಆತ್ಮವಿಮರ್ಶೆಗೆ ನಮ್ಮನ್ನು ಈ ಕೃತಿ ಒಡ್ಡುತ್ತದೆ. ನಿಮ್ಮ ದಾರಿ ಬ್ರಾಹ್ಮಣೀಕರಣದ ದಿಕ್ಕಿನ ವಿರುದ್ಧವಾಗಿ ಚಲಿಸಬೇಕು. ಶ್ರಮಸಹಿತ ಸರಳ ಬದುಕು, ಸಭ್ಯ ಬದುಕು ಶೂದ್ರ ಬದುಕಾಗಬೇಕು ಎನ್ನುವ ಅವರ ಈ ದೃಷ್ಟಿಕೋನ ಬರೀ ಅವರ ಮಾತಾಗಿ ಉಳಿದಿಲ್ಲ, ಕ್ರಿಯೆಯಾಗಿ ಬದಲಾಗಿದೆ. ಮಲೆನಾಡಿನ ಕುಗ್ರಾಮವಾದ ಹೆಗ್ಗೋಡಿನಲ್ಲಿ ಅದು ಸಾಕಾರಗೊಂಡಿದೆ.

"ಮಾನವ ಕಲ್ಯಾಣ, ಪರಿಸರ ಕಲ್ಯಾಣ, ಪ್ರಾಕೃತಿಕ ಸಮತೋಲನ, ನೈತಿಕತೆ ಹಾಗೂ ಅಹಿಂಸೆ ನಿಮ್ಮ ಆಯ್ಕೆಯಾದರೆ ನೀವು ಕೇಂದ್ರೀಕೃತ ಉತ್ಪಾದನಾ ವಿಧಾನವನ್ನು ತಿರಸ್ಕರಿಸದೆ ಬೇರೆ ದಾರಿಯಿಲ್ಲ" ಎಂಬ ಅವರ ಮಾತುಗಳನ್ನು ಚರಕ ಮಹಿಳಾ ಸಹಕಾರ ಸಂಘ ನಿರ್ವಹಣೆಯ ಮೂಲಕವೇ ಸಾಬೀತು ಪಡಿಸುತ್ತಾರೆ. ಗ್ರಾಮೀಣ ಮಹಿಳೆಯರೇ ಸಾಮೂಹಿಕ ಉತ್ಪಾದನೆಯಲ್ಲಿ ತೊಡಗಿ ಸಹಕಾರ ತತ್ವದಡಿ ಉದ್ಯಮ ಶೀಲತೆಯ ಅರ್ಥವನ್ನು ಸ್ವಯಂ ಕಂಡುಕೊಳ್ಳುವಂತೆ ಮಾಡಿದ್ದಾರೆ. ಇಲ್ಲಿ ಇದರ ಅನುಭವದ ಪಾಕವನ್ನು ಬಟ್ಟಿ ಇಳಿಸಿದ್ದಾರೆ. ಯಶಸ್ಸಿಗೆ ಅಸಾಧಾರಣವಾದ ಶಿಸ್ತು ಮತ್ತು ಉದ್ಯಮಶೀಲತೆ, ಸಂಘಟನೆಯ ಸಹಕಾರವೆಂಬ ಸಂಕೀರ್ಣ ವ್ಯವಸ್ಥೆಯ ತಜ್ಞತೆ ಬೇಕು. ಇದನ್ನು ಬದಲಾದ ಹೆಗ್ಗೋಡಿನ ಚಿತ್ರಣದಲ್ಲಿ ಸಾಕ್ಷಿರೂಪವಾಗಿ ಗುರ್ತಿಸಬಹುದು.

ಪ್ರಸನ್ನರ ಈ ಪುಸ್ತಕ ನನಗೆ ಆಪ್ತವಾಗಿ ಕಂಡಿದೆ. ಏಕೆಂದರೆ ಪರಿಸರ ನಾಶದ ಫಲವನ್ನು ಅತಿವೃಷ್ಟಿ, ಅನಾವೃಷ್ಟಿ, ಸುನಾಮಿ ಮುಂತಾದ ರೂಪಗಳಲ್ಲಿ ಉಣ್ಣುತ್ತಿದ್ದೇವೆ. ಇಂಧನ ಮೂಲಗಳು ಖಾಲಿಯಾಗುತ್ತಿರುವ ವೇಗವನ್ನು ಕಂಡಾಗ ಭವಿಷ್ಯದ ಬಗ್ಗೆ ಆತಂಕ ಮೂಡುತ್ತದೆ. ಮನೆಯಲ್ಲಿ ಆಹಾರ ತಯಾರಿಕೆಗೆ ಅನಿಲವನ್ನೇ ಅವಲಂಬಿಸಿರುವ ನಮಗೆ ಅನಿಲ ಮುಗಿದು ಹೋದರೇನು ಗತಿ ಎಂಬ ದಿಗಿಲು ಉಂಟಾಗುತ್ತದೆ. ಈ ಹೊತ್ತಿನಲ್ಲಿ ಕೊಳ್ಳುಬಾಕತನದ ಅಪಾಯವನ್ನರಿಯದೆ ಯಂತ್ರೋಪಕರಣದ ದಾಸರಾಗಿ ವೈಟ್‌ಕಾಲರ್ ಏರಿಸಿ "ಥೇರ್ ಪರ್ಸನ್" ಎಂದು ಬೀಗುತ್ತಿದ್ದೇವೆ. ಯಂತ್ರ ನಾಗರಿಕತೆಯನ್ನು ಅಪ್ಪಿಕೊಂಡಿದ್ದರ ಪ್ರಯುಕ್ತ ಆಗುವ ಪರಿಣಾಮಗಳ ಬಗ್ಗೆ ಕುರುಡರಾಗಿದ್ದೇವೆ. ನಮ್ಮ ಅಜ್ಞಾನದ ದುಷ್ಪರಿಣಾಮಗಳೇನು ಎಂಬುದಕ್ಕೆ ಉತ್ತರವಾಗಿ ಈ ಪುಸ್ತಕ ವಿಚಾರದ ಮಡುವಿನಲ್ಲಿ ದೂಡುತ್ತದೆ.

ಯಂತ್ರ ನಾಗರಿಕತೆಯ ಏಕಸ್ವಾಮ್ಯದ ಯಜಮಾನಿಕೆಗೆ ಹಾಗೂ ಇದರಿಂದ ಅನುಭವಿಸುತ್ತಿರುವ ವರ್ಗ ಸಂಘರ್ಷದ ಸಾಮಾಜಿಕ ಬಿಕ್ಕಟ್ಟಿಗೆ ಸಹಕಾರಿ ತತ್ವದ ಸಣ್ಣ ಪುಟ್ಟ ಉದ್ದಿಮೆಗಳು ಮಾತ್ರವೇ ಪರಿಹಾರವನ್ನು ತರಬಲ್ಲವು, ಇದರಿಂದ ಪ್ರಕೃತಿಯ ಮೇಲಿನ ಒತ್ತಡವನ್ನು ಕಡಿಮೆಗೊಳಿಸಬಹುದು. "ಸಮಗ್ರ ಗ್ರಾಮೋದ್ಯೋಗ ಆಂದೋಲನವು ಸುಲಭ ಜೀವಿಗಳು ಹಾಗೂ ಶ್ರಮಜೀವಿಗಳನ್ನು ರಚನಾತ್ಮಕ ಕಾರ್ಯಕ್ರಮವೊಂದರ ಅಡಿಯಲ್ಲಿ ಬಿಗಿದು ನಿಲ್ಲಿಸುತ್ತದೆ. ಆ ಮೂಲಕ ಶ್ರೇಷ್ಠತೆಯ ವ್ಯಸನ ಹಾಗೂ ಶ್ರಮ ಜೀವನದ ಕೀಳರಿಮೆ ಎರಡನ್ನೂ ಕಳೆಯುವ ಕೆಲಸ ಮಾಡುತ್ತದೆ" ಎನ್ನುವ ಅವರ ಮಾತುಗಳಲ್ಲಿ ದೂರದರ್ಶಿತ್ವ ಮತ್ತು ನೈಜ ಕಾಳಜಿ ವ್ಯಕ್ತವಾಗಿದೆ.

ಸುಲಭ ಜೀವಿಗಳಾಗುವುದೊಂದೇ ಪರಮ ಗುರಿ ಎಂದುಕೊಂಡಿರುವ ನಮಗೆ ಇದು ಛಾಟಿ ಏಟಿನಂತಿದೆ. ಮನೆ ತುಂಬ ಯಂತ್ರೋಪಕರಣಗಳನ್ನು ಪೇರಿಸಿಕೊಂಡು ಜೀವಿತಾವಧಿಯ ದುಡಿಮೆಯನ್ನೆಲ್ಲಾ ಅದಕ್ಕೇ ಸುರಿಯುತ್ತಿದ್ದೇವೆ. ಪ್ರತಿಷ್ಠೆಯೇ ಮುಖ್ಯವಾಗಿದೆ. ಪ್ರಸನ್ನರವರು ಇದರ ಹೊರತಾದ ಸರಳ ಬದುಕಿಗೆ ನಮ್ಮನ್ನು ಆಹ್ವಾನಿಸುತ್ತಿದ್ದಾರೆ. ಶ್ರೇಷ್ಠತೆಯೇ ವ್ಯಸನವಾಗಿರುವ ಪರಿಯನ್ನು ವಿಮರ್ಶಿಸಲು ವಿಭಿನ್ನ ದಾರಿಯಲ್ಲಿ ಕೈ ಹಿಡಿದು ಸಹಚಾರಿಯಾಗುತ್ತಾರೆ.

ಬ್ರಾಹ್ಮಣದ ಅನುಕರಣೆಯಲ್ಲಿ ನಾಮುಂದು ತಾಮುಂದು ಎಂದು ವ್ರತಾಚರಣೆಯಲ್ಲಿ ಮುಳುಗಿ ಹೋದ ನಮ್ಮನ್ನು "ಶೂದ್ರರಾಗೋಣ ಬನ್ನಿ" ಸರಳ ಬದುಕಿನಲ್ಲಿ ಸಹಜತನವಿದೆ. ಶ್ರಮದ ತಿಳುವಳಿಕೆಯ ಪಾಠಕ್ಕೆ ಶೂದ್ರತನಕ್ಕೆ ಮರಳದೆ ಅನ್ಯತಾ ಮಾರ್ಗವಿಲ್ಲ. ಪ್ರಾಣಿ ಸಂಕುಲದ ಖುಷಿ ಅಡಗಿರುವುದು ನಿಸರ್ಗದ ಮಡಿಲಲ್ಲಿ ಮಾತ್ರ. ಇರುವುದೊಂದೇ ಭೂಮಿ, ಇದು ಅಮ್ಮನ ಮಡಿಲು. ನೀವೂ ವಿರಮಿಸಿ, ಸಹಜೀವಿಗಳನ್ನೂ ವಿರಮಿಸಲು ಬಿಡಿ. ಇದೇ ನಿಜವಾದ ಆಸ್ತಿ. ಮಾನವ ಮತ್ತು ನಿಸರ್ಗದ ನಡುವಿನ ಸುಮಧುರವಾದ ಸಂಬಂಧವನ್ನು ಹೇಗೆಲ್ಲಾ ಹಾಳುಗೆಡವಿದೆವು ಎಂಬುದರ ಬಗ್ಗೆ ಆತ್ಮವಿಮರ್ಶೆಗೆ ಒಡ್ಡುತ್ತದೆ. ಶಿಶುತತ್ವದಿಂದ ಬಹುದೂರ ನಡೆದುಬಿಟ್ಟಿದ್ದೇವೆ. ಇದರ ಪರಿಣಾಮ ಈಗಾಗಲೇ ಗೋಚರಿಸಲು ಆರಂಭವಾಗಿದೆ. "ಅರಿವಿನಿಂದ ಕೂಡಿದ ಶೂದ್ರತ್ವ ಸ್ವೀಕರಿಸುವುದು ಮನುಕುಲದ ಉಳಿವಿಗೆ ಅನಿವಾರ್ಯವಾಗಿದೆ" ಎಂಬ ಅವರ ಮಾತನ್ನು ಧಿಕ್ಕರಿಸುವುದು ಸಾಧ್ಯವೇ ಇಲ್ಲ.

ಎಂದು ಕರೆಯುತ್ತಾ ಎಲ್ಲರೂ ಬ್ರಾಹ್ಮಣರಾಗಲು ಸಾಧ್ಯವಿಲ್ಲ. ಆದರೆ ಎಲ್ಲರೂ ಶೂದ್ರರಾಗುವುದು ಸಾಧ್ಯವಿದೆ. ಹಾಗಾದಾಗ ಶೂದ್ರತ್ವಕ್ಕೆ ಅಂಟಿಕೊಂಡ ಕೀಳರಿಮೆ ತಂತಾನೆ ಕಳಚಿಬಿದ್ದು ಕೀಳರಿಮೆಯು ಸುಲಭ ಜೀವನಕ್ಕೆ ಅಂಟಿಕೊಳ್ಳುತ್ತದೆ ಎಂಬ ಹೊಸ 'ಸಾಮಾಜಿಕ ತತ್ವ'ವನ್ನು ಮುಂದಿಟ್ಟು ತರ್ಕಕ್ಕೆ ಎಳೆಯುತ್ತಾರೆ. "ಉನ್ನತ ಮನುಷ್ಯ ನಿರ್ಮಾಣಗೊಳ್ಳುವುದು ಶ್ರಮಸಹಿತ ವಿರಾಮದ ಸಮರ್ಥ ವಾತಾವರಣದಲ್ಲಿ ಶ್ರಮವಿರದ ವಿರಾಮ ಅಥವಾ ವಿರಾಕ್ರಮದ ಶ್ರಮ ಎರಡೂ ಅಸಹ್ಯ ಜಾಡ್ಯಗಳೇ ಸರಿ" ಎಂದು ಘಂಟಾಘೋಷವಾಗಿ ಸಾರಿ ವಿಮರ್ಶೆಯ ಮಡುವಿಗೆ ಕೆಡವುತ್ತಾರೆ.

ಶ್ರಮ ಅಸಹ್ಯವಲ್ಲ, ಸುಲಭತೆ ಅಸಹ್ಯವಾದದ್ದು ಎನ್ನುವ ಚಿಂತನೆಗೆ ಕೆಸರಲ್ಲಿ ಆಟವಾಡುತ್ತಿದ್ದ ಮಗುವನ್ನು ಧರಧರನೆ ಎಳೆದು ಪೆಟ್ಟು ಕೊಟ್ಟಾಗಿನ ನೆನಪು ಮರುಕಳಿಸಿದರೆ ಆಶ್ಚರ್ಯವಿಲ್ಲ. ಬೀದಿ ಮಕ್ಕಳೊಂದಿಗೆ ಆಡಲು ಬಿಡದೆ ಕೋಣೆಯೊಳಗೆ ಕಟ್ಟಿಹಾಕಿದ ಮಗನ ಪೆಚ್ಚುಮೋರೆಯನ್ನು ನೆನಪಿಸಬಹುದು. ಕಲಾವಿಭಾಗಕ್ಕೆ ಸೇರಲು ಇಚ್ಛಿಸಿದ ಮಕ್ಕಳನ್ನು ಬಲವಂತವಾಗಿ ಎಂಜಿನಿಯರಿಂಗ್ ಸೇರಿಸಿದ್ದನ್ನೂ ಲೆಕ್ಕಮಾಡದೆ ಚಿತ್ರ ಬರೆಯುತ್ತಿದ್ದನೆಂಬ ಕಾರಣಕ್ಕೆ ದಂಡಿಸಿದ್ದೂ ಇರಬಹುದು. ದೂರದರ್ಶನ ವೀಕ್ಷಿಸಲೂ ಪುರುಸೊತ್ತಿಲ್ಲವೆಂದು ದುಃಖಿಸಿದ ಸಂಗತಿಯೂ ಸೇರಿಕೊಂಡು ಏನೆಲ್ಲಾ ಅನುಕೂಲತೆಗಳ ನಡುವೆಯೂ ಇಲ್ಲದ್ದನ್ನು ಹೆಕ್ಕಿ ರಗಳೆ ತೆಗೆಯುವ ಎಲ್ಲಾ ಸಣ್ಣ ವಿಷಯಗಳು ನಮಗೆ ಘಳಿಗೆಗೂ ಬೃಹದಾಕಾರವಾಗಿ ಕಾಡಿತ್ತಲ್ಲಾ? ದಡ್ಡರು ಮಾತ್ರವೇ ಶ್ರಮದ ಕೆಲಸಕ್ಕೆ ಅರ್ಹರು ಎಂಬ ದೃಷ್ಟಿಕೋನ ನುಚ್ಚುನೂರಾಗುತ್ತದೆ. ವಿರಾಮದ ಸದುಪಯೋಗಕ್ಕೆ ಕರೆ ನೀಡುತ್ತದೆ. ಸಾಫ್ಟ್‌ವೇರ್ ಎಂಜಿನಿಯರ್‌ಗಳೂ ಕೃಷಿಯತ್ತ ಮರಳುವ ಅಚ್ಚರಿಗೆ ಶ್ರಮದಲ್ಲಿನ ಸೌಂದರ್ಯ ತತ್ವ ರಹಸ್ಯಕ್ಕೆ ಬೆರಗುಗೊಳ್ಳುತ್ತದೆ. ಇಲ್ಲೊಂದು ಅಪರೂಪವಾದ ಅಧ್ಯಾತ್ಮದ ಸಮಾಧಿಸ್ಥಿತಿಯನ್ನು ಶ್ರಮದ ಮೂಲಕವೇ ಕಟ್ಟಿಕೊಂಡ ಮಹನೀಯರನ್ನು ಹೀಗೆ ಸ್ಮರಿಸುತ್ತಾರೆ.

"ಶೂದ್ರ ಸಂತರು ಉಪಯುಕ್ತ ಉಪಕರಣ ಗಳನ್ನೇ ಧ್ಯಾನದ ಸಾಧನಗಳನ್ನಾಗಿ ಬಳಸಿಕೊಂಡರು. ಸಂತ ರವಿದಾಸ ಚಮ್ಮಾರಿಕೆಯ ಕಾಯಕವನ್ನು ಧ್ಯಾನದ ಸಾಧನವಾಗಿ ಮಾಡಿ ಕೊಂಡ. ಸಂತ ಕಬೀರ ಮಗ್ಗವನ್ನು ಧ್ಯಾನದ ಸಾಧನವಾಗಿ ಮಾಡಿಕೊಂಡ, ಗಾಂಧೀಜಿ ನೂಲುವ ಚರಕವನ್ನು ಧ್ಯಾನದ ಸಾಧನವಾಗಿ ಮಾಡಿಕೊಂಡರು. ಟಾಲ್‌ಸ್ಟಾಯ್ ಚಪ್ಪಲಿ ಹೊಲಿಯುವ ಮೂಲಕ ತನ್ನ ನಂಬಿಕೆಯನ್ನು ಹಿಂದಕ್ಕೆ ಪಡೆದ" – ಇಂತಹ ಅದ್ಭುತವಾದ ಸಹಸಂಬಂಧವನ್ನು ನೀಡಿ ಕರ್ಮ ಯೋಗಿಗಳ ಸಾಧನೆಯೊಂದಿಗೆ ಸಮೀಕರಿಸಿದ್ದಾರೆ. ಕಾಯಕವೊಂದು ಸಾಧನೆಯ ಮೆಟ್ಟಿಲುಗಳಾದ ಪರಿಯನ್ನು ಅರ್ಥೈಸಿಕೊಳ್ಳುವುದರೊಂದಿಗೆ ಶ್ರಮಿಕರನ್ನು ಗೌರವಿಸುವ ಪಾಠ ಹೇಳುತ್ತಾರೆ. ಶ್ರಮ ಸಂಸ್ಕೃತಿಯ ಉಳಿವೇ ಮನುಕುಲದ ಉಳಿವು ಎಂದು ಸಾರಿದ್ದಾರೆ. ಇಲ್ಲಿ ತಾಯ್ತನವಿದೆ, ಸಮೂಹ ತತ್ವವಿದೆ, ನಿಸರ್ಗದ ಸಖ್ಯವಿದೆ. ಇದರೊಂದಿಗೆ ಮಾತ್ರ ಸಭ್ಯ ಬದುಕು ಸಾಕಾರಗೊಳ್ಳುವುದು. ಇದು ಮನುಷ್ಯತನದ ಬಾಧ್ಯತೆಯೂ ಹೌದು.

ಸರಳ ಬದುಕಿನಲ್ಲಿ ಸಹಜತನವಿದೆ. ಶ್ರಮದ ತಿಳುವಳಿಕೆಯ ಪಾಠಕ್ಕೆ ಶೂದ್ರತನಕ್ಕೆ ಮರಳದೆ ಅನ್ಯ ಮಾರ್ಗವಿಲ್ಲ. ಪ್ರಾಣಿ ಸಂಕುಲದ ಖುಷಿ ಅಡಗಿರುವುದು ನಿಸರ್ಗದ ಮಡಿಲಲ್ಲಿ ಮಾತ್ರ. ಇರುವುದೊಂದೇ ಭೂಮಿ, ಇದು ಅಮ್ಮನ ಮಡಿಲು. ನೀವೂ ವಿರಮಿಸಿ, ಸಹಜೀವಿಗಳನ್ನೂ ವಿರಮಿಸಲು ಬಿಡಿ. ಇದೇ ನಿಜವಾದ ಆಸ್ತಿ. ಮಾನವ ಮತ್ತು ನಿಸರ್ಗದ ನಡುವಿನ ಸುಮಧುರವಾದ ಸಂಬಂಧವನ್ನು ಹೇಗೆಲ್ಲಾ ಹಾಳುಗೆಡವಿದೆವು ಎಂಬುದರ ಬಗ್ಗೆ ಆತ್ಮ ವಿಮರ್ಶೆಗೆ ಒಡ್ಡುತ್ತದೆ. ಶಿಶುತತ್ವದಿಂದ ಬಹುದೂರ ನಡೆದು ಬಿಟ್ಟಿದ್ದೇವೆ. ಇದರ ಪರಿಣಾಮ ಈಗಾಗಲೇ ಗೋಚರಿಸಲು ಆರಂಭವಾಗಿದೆ. "ಅರಿವಿನಿಂದ ಕೂಡಿದ ಶೂದ್ರತ್ವ ಸ್ವೀಕರಿಸುವುದು ಮನುಕುಲದ ಉಳಿವಿಗೆ ಅನಿವಾರ್ಯವಾಗಿದೆ" ಎಂಬ ಅವರ ಮಾತನ್ನು ಧಿಕ್ಕರಿಸುವುದು ಸಾಧ್ಯವೇ ಇಲ್ಲ.

ಬೇಕರಿಯಲ್ಲಿ ತಯಾರಾದ ಸಿಹಿಯಾದ ಪೇಡೆಯನ್ನು ಚಪ್ಪರಿಸುವ ನಮಗೆ ಕೊಟ್ಟಿಗೆಯಲ್ಲಿ ಹಸುವೊಂದನ್ನು ಕಟ್ಟಿ ಸಾಕಿದ ಅರಿವಿಲ್ಲ. ಹಸುವಿನ ಒಡನಾಟದ ಪ್ರೀತಿಯನ್ನು ಸವಿಯಲು ಸಾಧ್ಯವೂ ಇಲ್ಲ. ಹೀಗೊಂದು ದೂರವನ್ನು ನಿರ್ಮಿಸಿ ಕೊಂಡಿದ್ದೇವೆ. ಅಂಗಳದಲ್ಲಿ ಹಸೆ ಬರೆದು ಖುಷಿಪಡುತ್ತಿದ್ದ ದಿನಗಳು ಮತ್ತೆ ಬರುವುವೆ? ಜೀವನ ಶೈಲಿಯು ಯಾಂತ್ರಿಕತೆಯಿಂದ ಸೊರಗಿದೆ. ಯಂತ್ರಗಳಿಂದ ಕೆಲಸ ಮಾಡಿಸಬಹುದೇ ಹೊರತು ಸಮಾನತೆಯ ಆಶಯವನ್ನು ಜಾರಿಗೊಳಿಸುವುದು ಸಾಧ್ಯವಾಗದು. ಸ್ವಾರ್ಥವಷ್ಟೇ ಮುಖ್ಯವಾಗಿ ಸಾಮಾಜಿಕ ಕಾಳಜಿ ಅಪರೂಪವಾಗುತ್ತಿದೆ. ಸಮಷ್ಟಿ ಬದುಕಿನ ಅನಿವಾರ್ಯತೆಯನ್ನು ಈ ಕೆಳಗಿನ ಪ್ರಸನ್ನರ ಮಾತಿನಲ್ಲಿ ಕಾಣಬಹುದು:

"ಪ್ರತಿಯೊಂದು ವ್ಯಕ್ತಿ ಸಮಷ್ಟಿಯೊಟ್ಟಿಗೆ ಹಾಗೂ ಸಮಾಜದೊಟ್ಟಿಗೆ ಇರುವ ಸಂಬಂಧದ ಅರಿವೇ ಬಾಧ್ಯಸ್ಥಿಕೆ. ಮನುಷ್ಯ ತನಗಾಗಿ ಮಾತ್ರವೇ ಬದುಕುತ್ತಿಲ್ಲ. ಬದುಕಬಾರದು ಎಂಬ ಅರಿವದು. ಮನುಷ್ಯ ಇತರರಿಗಾಗಿ ಬದುಕಬೇಕು. ಸಮಾಜಮುಖಿಯಾಗಬೇಕು ಎಂಬ ಅರಿವಿದು. ಬಾಧ್ಯತೆಯಿಲ್ಲದ ಹಕ್ಕುಗಳ ಅರಿವಿಲ್ಲ ಅನೈತಿಕತೆಗೆ." ಇಲ್ಲಿ ಹಕ್ಕು ಮತ್ತು ಕರ್ತವ್ಯಕ್ಕೆ ಮನದ ಸಂವಿಧಾನದಲ್ಲಿ ನೈತಿಕತೆಯ ಭಾಷ್ಯ ಬರೆದಿರಲೇ ಬೇಕು ಎಂಬ ಹಕ್ಕೊತ್ತಾಯವಿದೆ. ವೈಯಕ್ತಿಕ ರಾಗದ್ವೇಷಗಳಲ್ಲಿ ಮುಳುಗಿರುವ ನಮ್ಮನ್ನು ಸಮಷ್ಟಿಯೆಂಬ ಮಹಾಸಾಗರಕ್ಕೆ ಕರೆದೊಯ್ಯುತ್ತಾರೆ. ಇಲ್ಲಿ ಕುವೆಂಪುರವರ ವಿಶ್ವಮಾನವ ತತ್ವದೆಡೆಗೆ ಪಯಣ ಆರಂಭಿಸುವ ಸೂಚನೆಯಿದೆ. ಕಾಂಕ್ರೀಟ್ ಕೋಟೆಯಲ್ಲಿ ಮರೆಯುತ್ತಿರುವ ನಮ್ಮನ್ನು ಪುನಃ ತವರು ಮನೆಯಾದ ನಿಸರ್ಗಕ್ಕೆ ಕರೆದೊಯ್ಯುವ, ದಾರಿಯನ್ನು ಬದಲಿಸುವ ಅನಿವಾರ್ಯತೆಗೆ ಸ್ಪಷ್ಟೀಕರಣವಿದೆ.

ಪರಿಸ್ಥಿತಿ ವಿಕೋಪಕ್ಕೆ ತಿರುಗುವ ಮುನ್ನ ಶ್ರಮ ಬದುಕಿಗೆ, ಸಮಷ್ಟಿಯೆಡೆಗೆ ನಡೆಯಲಿ. ಇದೇ ನಮ್ಮೆಲ್ಲರ ಜಾಣ ನಡೆ. ಯಂತ್ರಗಳನ್ನು ತೊರೆಯಿರಿ, ಆಗ ಮಾತ್ರ ಬಡವರ ಬೆಂಬಲ ದೊರೆಯುತ್ತದೆ. "ಶ್ರಮವನ್ನು ಸಹಿಸುವುದು, ಶ್ರಮವನ್ನು ಸುಖಿಸುವುದು, ಶ್ರಮದ ಮೂಲಕವೇ ಧ್ಯಾನಿಸುವುದು – ಇದೇ ನಿಜವಾದ ಆಧ್ಯಾತ್ಮಿಕತೆ. ಏಣಿಯ ಮೇಲಿರುವವರು ಧರಿಸಬೇಕಾಗಿರುವ ದೈಹಿಕ ಶ್ರಮವೆಂಬ ಜಪಮಣಿ ಮಾಲೆ ಆಧ್ಯಾತ್ಮಿಕತೆ" – ಎಂಬುದಾಗಿಯೇ ಸ್ವಾಮಿ ವಿವೇಕಾನಂದರ ನಂಬುಗೆಯಾಗಿತ್ತು ಎಂಬುದನ್ನು ನೆನಪಿಸುತ್ತಾರೆ. ಸರ್ವರೀತಿಯಲ್ಲೂ ಪರಿಸರವನ್ನು ಅವ್ಯಾಹತವಾಗಿ ದೋಚಿ ಬೀಗುತ್ತಿರುವ ನಮ್ಮ ನಡೆ ಕಡುಮೂರ್ಖತನದ್ದು ಎಂದು ಎಚ್ಚರಿಸುತ್ತಾರೆ. ಪರಸ್ಪರ ಸಹಕರಿಸಿ ಬಾಳುವುದು, ಕಷ್ಟ ಸುಖ ಹೇಳಿಕೊಳ್ಳುವುದು, ಹಾಡು ಮಾಡಿ ಹಾಡುವುದು, ಕತೆ ಮಾಡುವುದು, ನಾಟಕ ಮಾಡುವುದು, ಮನ ತಣಿಸುತ್ತವೆ. ಜೀವಕ್ಕೆ ಧೈರ್ಯ ತಂದು ಕೊಡುತ್ತವೆ ಎಂದು ತಿಳಿದಿದೆಯೆ? – ಎಂದು ಪ್ರಶ್ನಿಸುತ್ತಾ "ನಿಜಖುಷಿಯ ವಾರಸುದಾರರಾಗಿ! ಇದೇ ನಮ್ಮ ಆಸ್ತಿ, ಹೊಸ ಪೀಳಿಗೆಗೂ ಇದನ್ನು ಉಳಿಸಿ ವರ್ಗಾಯಿಸಿರಿ" ಎಂದಿರುವುದನ್ನು ಗಂಭೀರವಾಗಿ ಪರಿಗಣಿಸಬೇಕಾಗಿದೆ. ಪ್ರಸನ್ನರವರ ಬದುಕಿನ ರೀತಿ ಹಾಗೂ ಆ ದಾಖಲೆ ಕಾಣ್ಕೆಯಾಗಿ ಪ್ರಸಕ್ತರೂಪದಲ್ಲಿ ನಮ್ಮ ಮುಂದಿದೆ.

**ನಾಗಜ್ಯೋತಿ ತರೀಕೆರೆ**
ಹಂಪಿ ವಿಶ್ವವಿದ್ಯಾಲಯ, ಸಾಹಿತ್ಯ ಅಧ್ಯಯನ ವಿಭಾಗ
ಸಂಶೋಧನಾ ವಿದ್ಯಾರ್ಥಿನಿ
ಕುವೆಂಪು ಅಧ್ಯಯನ ಕೇಂದ್ರ, ಕುಪ್ಪಳಿ

## ಕನಸು

ಮಂಜು ಹನಿಯ
ಸೊಗಸಿನಂತೆ
ಕಂಗೊಳಿಸುವುದು
ಕನಸು.
ಹೂ–ದಳದಳ ಉದುರಿ
ನೋವಿನಿಂದ
ಚೀರಿಟ್ಟಂತೆ ನನಸು!

**ಶೋಭಾ ಪ್ರಮೋದ್**
ಮಹಾರಾಷ್ಟ್ರ

ತತ್ವಪದಗಳು ಒಬ್ಬನೇ ಏಕಾಂತದಲ್ಲಿ ಏಕತಾರಿ ಸಹಾಯದಿಂದ ಹಾಡುವ ಹಾಡುಗಳಾಗಿವೆ. ಮಾತ್ರವಲ್ಲ, ಅವು ಭಜನೆಯಂಥ ಸಂದರ್ಭದಲ್ಲಿ ಸಾಮೂಹಿಕವಾಗಿಯೂ ಹಾಡುವುದಕ್ಕೆ ಬರುತ್ತವೆ. ಇವುಗಳನ್ನು ಹೆಚ್ಚಾಗಿ ರಾತ್ರಿ ಹೊತ್ತಿನಲ್ಲಿ ಊಟವಾದ ಮೇಲೆ ಊರ ಹೊರಗಿನ ಹಣಮಂತ, ಮಹಾದೇವ ಅಥವಾ ಮತ್ತ್ಯಾವುದೋ ದೇವಸ್ಥಾನದಲ್ಲಿ ಹುಣ್ಣಿಮೆ, ಅಮಾವಾಸ್ಯೆಯಂಥ ವಿಶೇಷ ಸಂದರ್ಭಗಳಲ್ಲಿ ಮೇಲೆ ಉಲ್ಲೇಖಿಸಿದ ವಿವಿಧ ಸಂಗೀತದ ಪರಿಕರಗಳೊಂದಿಗೆ ಎಂಟ್ಹತ್ತು ಜನ ಯಾವುದೇ ಜಾತಿ-ಮತ ಭೇದವಿಲ್ಲದೆ ದುಂಡಾಗಿ ಕುಳಿತು ಕಿಂಚಿತ್ತೂ ಬೇಸರವಿಲ್ಲದೆ ಮೈಮರೆತು ಆನಂದದ ತಂದ್ರಿಯಲ್ಲಿ ಚೇತೋಹಾರಿಗಳಾಗಿ ಹಾಡುತ್ತಾರೆ. ಈ ಭಜನೆ ಕಾರ್ಯಕ್ರಮ ಹಿರಿಯರ ಪುಣ್ಯತಿಥಿಯಂಥ ಸಂದರ್ಭಗಳಲ್ಲೂ ನಡೆಯುತ್ತದೆ. ರಾತ್ರಿ ಹತ್ತರಿಂದ ಹನ್ನೊಂದು ಗಂಟೆಯ ಸುಮಾರಿಗೆ ಪ್ರಾರಂಭವಾಗುವ ಈ ಭಜನೆ ಕಾರ್ಯಕ್ರಮ ಬೆಳಗಿನ ಜಾವದವರೆಗೆ ಎಡೆಬಿಡದೆ ನಿರಂತರವಾಗಿ ನಡೆಯುತ್ತದೆ.

# ಕನ್ನಡ ತತ್ವಪದ ಪರಂಪರೆ



## ಅರ್ಥ-ವ್ಯಾಖ್ಯೆ

ತತ್ವಪದ ಎಂಬುದು ಒಂದು ಸಂಯುಕ್ತ ಪದ. ತತ್ವ ಮತ್ತು ಪದ ಎಂಬ ಎರಡು ಪದಗಳು ಅದರಲ್ಲಿವೆ. ಇಲ್ಲಿ ತತ್ವ ಎಂದರೆ ಪೂರ್ಣಸತ್ಯ, ಪರಮಾತ್ಮ, ಪರಮಾತ್ಮನ ಸ್ವರೂಪವೇ ಆಗಿರುವ ಆತ್ಮನ ಸ್ವರೂಪ, ಜ್ಞಾನದ ಆತ್ಯಂತಿಕ ಸ್ಥಿತಿ, ತಿರುಳು, ಸಿದ್ಧಾಂತ, ನಿಯಮ, ನಿಜಸ್ಥಿತಿ ಎಂದರ್ಥ. ಪದ ಎಂಬುದು ಹಾಡು, ಗೀತೆ, ಹದಗೊಂಡ ಶಬ್ದ, ನಿಲುವು, ಸರಿಯಾದ ಸ್ಥಿತಿ, ಸರಿಯಾಗಿ ಬೆಂದಿರುವ ಸ್ಥಿತಿ, ಅವಸ್ಥೆ ಎಂಬ ಅರ್ಥಗಳನ್ನು ಕೊಡುತ್ತದೆ. ಈ ಹಿನ್ನೆಲೆಯಲ್ಲಿ, ದೇವರು ಅಥವಾ ಪರಮಾತ್ಮನಿಗೆ ಸಂಬಂಧಿಸಿದ ಹದಗೊಂಡ ಸಿದ್ಧಾಂತವನ್ನು ಸುಂದರವಾದ ಹಾಡಿನ ಮೂಲಕ ಅಭಿವ್ಯಕ್ತಿಸುವ ಕ್ರಿಯೆಗೆ ತತ್ವಪದ ಎಂದು ಕರೆಯಲಾಗುತ್ತದೆ.

ತತ್ವಪದದಲ್ಲಿರುವ ಪೂರ್ವದ ತತ್ವ ಎಂಬುದು ಸತ್ಯದ ಸಂಗತಿ ಅಥವಾ ಆತ್ಮ-ಪರಮಾತ್ಮನ ನಿಜಸ್ಥಿತಿಯನ್ನು ನಿರ್ದೇಶಿಸಿದರೆ, ಉತ್ತರದ ಪದ ಎಂಬುದು ಅಭಿವ್ಯಕ್ತಿ ಅಥವಾ ಗಾನಕ್ರಿಯೆಯನ್ನು ನಿರ್ದೇಶಿಸುತ್ತದೆ. ಈ ಹಿನ್ನೆಲೆಯಲ್ಲಿ, ತತ್ವ ಎಂಬುದು ವಸ್ತುವಾದರೆ, ಪದ ಎಂಬುದು ಅಭಿವ್ಯಕ್ತಿ ಮಾಧ್ಯಮ. ವಸ್ತು ಮತ್ತು ಅಭಿವ್ಯಕ್ತಿ ಇವೆರಡನ್ನೂ ಸುಂದರವಾಗಿ ಸಮನ್ವಯಗೊಳಿಸಿಕೊಂಡಿರುವ 'ತತ್ವಪದ' ವಚನ ಹಾಗೂ ಕೀರ್ತನೆಗಳಂತೆ ಕನ್ನಡ ಸಾಹಿತ್ಯ ಹಾಗೂ ಸಂಸ್ಕೃತಿಯಲ್ಲಿ ಒಂದು ವಿಶಿಷ್ಟ ಪ್ರಕಾರವಾಗಿ ಕಂಗೊಳಿಸಿದೆ. ಭಕ್ತಿ, ಅನುಭಾವ, ಜ್ಞಾನ, ಧ್ಯಾನ, ವೈರಾಗ್ಯ, ನೀತಿ, ಯೋಗ, ಅಧ್ಯಾತ್ಮ, ಸಮಾಜ ವಿಮರ್ಶೆಯಂಥ ವಿಷಯಗಳನ್ನು ಒಳಗೊಂಡು, ಆಯಾ ಕಾಲದ ಸಂದರ್ಭ ಹಾಗೂ ಆಯಾ ಕಾಲದ ಕವಿಗಳ ಮನೋಧರ್ಮ ಮತ್ತು ಅನುಭಾವಿಕ ನಿಲುವನ್ನು ಹಿನ್ನೆಲೆಯಾಗಿಟ್ಟುಕೊಂಡು ರಚನೆಯಾದ ಈ ಸಾಹಿತ್ಯಪ್ರಕಾರ ಸ್ವರವಚನ, ಕೈವಲ್ಯಪದ ಎಂಬ ಹೆಸರುಗಳಿಂದ ಕನ್ನಡದಲ್ಲಿ ಪ್ರಸಿದ್ಧವಾಗಿದೆ (ಪ್ರಾಚೀನ ಕಾಲದಿಂದಲೂ ಬೆಳೆದುಬಂದಿದೆ).

ತತ್ವಪದ ತುಂಬ ಜನಪ್ರಿಯವಾದ ಸಾಹಿತ್ಯಪ್ರಕಾರ. ಅದು ಸ್ವರವಚನ, ಕೈವಲ್ಯಪದ ಎಂದಲ್ಲದೆ ಅನುಭಾವ ಪದ, ಭಜನೆಯ ಪದ, ಧ್ಯಾಯದ ಪದ ಎಂಬ ಪರ್ಯಾಯ ನಾಮಗಳಿಂದಲೂ ಕರೆಸಿಕೊಂಡಿದೆ. ಪರಮಾತ್ಮನ ನಿಜಸ್ಥಿತಿಯನ್ನು ಅರಿಯುವ, ಅರಿತು ಅವನನ್ನು ಕಾಣುವ, ಕಂಡು ಅವನಲ್ಲಿ ಒಂದಾಗುವ ಅನುಭಾವದ ಈ ವಿವಿಧ ಹಂತ ಅರಿವು (ಶೋಧನ), ಸಾಕ್ಷಾತ್ಕಾರ (ದರ್ಶನ), ಸಮರಸ (ಸಂಗಮ)ಗಳನ್ನು ಇವು ಒಳಗೊಳ್ಳುವುದರಿಂದ ಇವುಗಳಿಗೆ ಅನುಭಾವ ಪದಗಳೆಂದು ಕರೆದರೆ, 'ಏಕತಾರಿಯಂಥ ವಾದ್ಯದೊಂದಿಗೆ ಸ್ವರವೆತ್ತಿ ಹಾಡುವುದಕ್ಕೆ ಬರುವುದರಿಂದ ಇವಕ್ಕೆ ಸ್ವರವಚನ ಎಂದು ಕರೆಯಲಾಗುತ್ತದೆ. ಇನ್ನೂ ಇವು ಅಂತರಂಗದ ಅರಿವಿನ ಮೂಲಭೂತ ತತ್ವಗಳನ್ನು ಮತ್ತು ಆಧ್ಯಾತ್ಮಿಕ ಸಿದ್ಧಾಂತಗಳನ್ನು ಒಳಗೊಳ್ಳುವುದರಿಂದ ಇವುಗಳಿಗೆ ತತ್ವಪದಗಳೆಂದು ಕರೆದರೆ, ಇವುಗಳನ್ನು ಸಾಮಾನ್ಯ ಜನರು ಭಜನೆಯ ಸಂದರ್ಭದಲ್ಲಿ ಹಾಡುವುದರಿಂದ

**ಡಾ॥ ಗುರುಲಿಂಗಪ್ಪ ಧಬಾಲೆ**

ಇವು ಭಜನೆಯ ಪದಗಳೆಂದು ಕರೆಸಿಕೊಳ್ಳುತ್ತವೆ, ಅದೇ ರೀತಿ ಭಕ್ತನ ದೇಹತತ್ವವನ್ನು ಕುರಿತು ಇವು ಮಾರ್ಮಿಕವಾಗಿ ಬಣ್ಣಿಸುವುದರಿಂದ ಇವುಗಳಿಗೆ ಧ್ಯಾಯದ ಪದಗಳೆಂದು ಕರೆದರೆ, 'ಭಕ್ತನ ಆತ್ಮಾನುಭವಕ್ಕೆ ಇವು ಸಂಬಂಧಿಸಿರುವುದರಿಂದ ಇವುಗಳಿಗೆ ಕೈವಲ್ಯ ಪದಗಳೆಂದು' ಕರೆಯುವ ವಾಡಿಕೆ ಬಳಕೆಯಲ್ಲಿದೆ.

ತತ್ವಪದ ಗೇಯ ಜಾಯಮಾನಕ್ಕೆ ಸೇರಿದ ಸಾಹಿತ್ಯಪ್ರಕಾರವಾಗಿದೆ. ಏಕತಾರಿ ಇದರ ಪ್ರಧಾನ ವಾದ್ಯವಾಗಿದೆ. ದಮ್ಮಡಿ, ತಾಳ, ಕಿನ್ನರಿ, ದಂಡಿಗೆಗಳಂಥ ಸಂಗೀತ ಪರಿಕರಗಳು ಕೂಡ ಇದಕ್ಕೆ ಬಳಕೆಯಾಗುತ್ತವೆ. ಇತ್ತೀಚೆಗೆ ಆಧುನಿಕ ಸಂಗೀತ ಪರಿಕರಗಳಾದ ಪೇಟಿ, ತಬಲಾಗಳನ್ನು ಸಹ ಇದಕ್ಕೆ ಬಳಸಲಾಗುತ್ತದೆ.

ತತ್ವಪದಗಳು ಒಬ್ಬನೇ ಏಕಾಂತದಲ್ಲಿ ಏಕತಾರಿ ಸಹಾಯದಿಂದ ಹಾಡುವಂಥ ಹಾಡುಗಳು. ಮಾತ್ರವಲ್ಲ, ಅವು ಭಜನೆಯಂಥ ಸಂದರ್ಭದಲ್ಲಿ ಸಾಮೂಹಿಕವಾಗಿಯೂ ಹಾಡುವುದಕ್ಕೆ ಬರುತ್ತವೆ. ಇವುಗಳನ್ನು ಹೆಚ್ಚಾಗಿ ರಾತ್ರಿ ಹೊತ್ತಿನಲ್ಲಿ ಊಟವಾದ ಮೇಲೆ ಊರ ಹೊರಗಿನ ಹಣಮಂತ, ಮಹಾದೇವ ಅಥವಾ ಮತ್ತ್ಯಾವುದೋ ದೇವಸ್ಥಾನದಲ್ಲಿ ಹುಣ್ಣಿಮೆ, ಅಮಾವಾಸ್ಯೆಯಂಥ ವಿಶೇಷ ಸಂದರ್ಭಗಳಲ್ಲಿ ಮೇಲೆ ಉಲ್ಲೇಖಿಸಿದ ವಿವಿಧ ಸಂಗೀತದ ಪರಿಕರಗಳೊಂದಿಗೆ ಎಂಟ್ಹತ್ತು ಜನ ಯಾವುದೇ ಜಾತಿ – ಮತ ಭೇದವಿಲ್ಲದೆ ದುಂಡಾಗಿ ಕುಳಿತು ಕಿಂಚಿತ್ತೂ ಬೇಸರವಿಲ್ಲದೆ ಮೈಮರೆತು ಆನಂದದ ತಂದ್ರಿಯಲ್ಲಿ ಚೇತೋಹಾರಿಗಳಾಗಿ ಹಾಡುತ್ತಾರೆ. ಈ ಭಜನೆ ಕಾರ್ಯಕ್ರಮ ಹಿರಿಯರ ಪುಣ್ಯತಿಥಿಯಂಥ ಸಂದರ್ಭಗಳಲ್ಲೂ ನಡೆಯುತ್ತದೆ. ರಾತ್ರಿ ಹತ್ತರಿಂದ ಹನ್ನೊಂದು ಗಂಟೆಯ ಸುಮಾರಿಗೆ ಪ್ರಾರಂಭವಾಗುವ ಈ ಭಜನೆ ಕಾರ್ಯಕ್ರಮ ಬೆಳಗಿನ ಜಾವದವರೆಗೆ ಎಡೆಬಿಡದೆ ನಿರಂತರವಾಗಿ ನಡೆಯುತ್ತದೆ. ಭಜನೆಯಲ್ಲಿ ಎರಡು – ಮೂರು ತಂಡದ ಭಜನೆಕಾರರು ಪಾಲ್ಗೊಳ್ಳುವುದನ್ನು ನೋಡುತ್ತೇವೆ. ಈ ಭಜನೆ ತಂಡಗಳ ಮಧ್ಯೆ ನಡುನಡುವೆ ಚರ್ಚೆ, ವಾದ – ಸಂವಾದ, ಸ್ಪರ್ಧೆಗಳು ಕೂಡ ನಡೆಯುತ್ತವೆ.



**ತಿರುಪ್ಪಣಾಳ್ವರರು ೧೨ ಆಳ್ವರುಗಳಲ್ಲಿ ಅಂತ್ಯಜರಾಗಿದ್ದಾರೆ**

**ಉಗಮ : ಪ್ರೇರಣೆ – ಪ್ರಭಾವ**

ತತ್ವಪದ ದೇಶೀ ನೆಲೆಯ ಕಂಠಸ್ಥ ಸಂಪ್ರದಾಯಕ್ಕೆ ಸೇರಿದ ಹಾಡುಗಬ್ಬ ಸಾಹಿತ್ಯವಾಗಿದೆ. ಇಂಥ ಹಾಡುಗಬ್ಬ ಸಾಹಿತ್ಯಕ್ಕೆ ಕನ್ನಡದಲ್ಲಿ ತುಂಬ ಪ್ರಾಚೀನವಾದ ಹಿನ್ನೆಲೆಯಿದೆ. 'ಕನ್ನಡ ಸಾಹಿತ್ಯ ಇನ್ನೂ ಗ್ರಂಥಸ್ಥ ರೂಪ ತಾಳುವುದಕ್ಕೆ ಪೂರ್ವದಲ್ಲಿಯೇ ಅದು ಜನಪದದಲ್ಲಿ ಹುಟ್ಟಿ ಮೌಖಿಕವಾಗಿ ಬೆಳೆದುಬಂದಿದೆ. ಒಂದು ಅರ್ಥದಲ್ಲಿ ನಮ್ಮ ಜನಪದರ ಹುಟ್ಟಿನೊಂದಿಗೆ ಅದು ಹುಟ್ಟು ಪಡೆಯಿತೆಂದು ಸ್ಥೂಲವಾಗಿ ಹೇಳಬಹುದು. ಪ್ರಾಚೀನ ಕನ್ನಡ ಕಾವ್ಯ ಶಾಸ್ತ್ರಗ್ರಂಥಗಳಲ್ಲಿ ಹಾಡು, ಪಾಡುಗಬ್ಬ, ಓವನಿಗೆ, ಒನಕೆವಾಡು, ಪಾಡುಗವಿತೆ, ಬೀದಿವಾಡು – ಎಂಬ ಗೀತಪ್ರಕಾರಗಳು ಉಲ್ಲೇಖಗೊಂಡಿವೆ. ಕನ್ನಡದ ಪ್ರಸಿದ್ಧ ಲಾಕ್ಷಣಿಕ ಗ್ರಂಥ 'ಕವಿರಾಜ ಮಾರ್ಗ'ದಲ್ಲಿ ಬೆದಂಡೆ ಎಂಬ ಹಾಡುಗಬ್ಬ ಉಕ್ತವಾಗಿದೆ. ಇದನ್ನೆಲ್ಲ ಗಮನಿಸಿದಾಗ ಕವಿರಾಜಮಾರ್ಗಕ್ಕೂ ಹಿಂದೆ ಕನ್ನಡದಲ್ಲಿ ಹಾಡುಗಬ್ಬಗಳು ರಚನೆಯಾಗುತ್ತಿದ್ದವು ಎಂಬುದು ಗಮನಕ್ಕೆ ಬರುತ್ತದೆ.

ನಮ್ಮಲ್ಲಿ ಈ ತತ್ವಪದಗಳು ಹುಟ್ಟುವ ಪೂರ್ವದಲ್ಲಿ ಬಹು ಹಿಂದೆಯೇ ಇವುಗಳಂಥ ಅನೇಕ ಪ್ರಕಾರದ ಹಾಡುಗಬ್ಬಗಳು ತಮಿಳಿನಲ್ಲಿ ಹುಟ್ಟಿ ಕೊಂಡಿರುವುದನ್ನು ಕಾಣುತ್ತೇವೆ. ಸುಮಾರು ೧೬೦೦ ವರ್ಷಗಳ ಹಿಂದೆ ಇಲ್ಲಿ ನಾಯನ್ಮಾರರು ಮತ್ತು ಆಳ್ವಾರರು ಎಂಬ ಭಕ್ತ ಕವಿಗಳು ಆಗಿಹೋಗಿದ್ದಾರೆ. ಇವರಲ್ಲಿ ನಾಯನ್ಮಾರರು ಶಿವಭಕ್ತರಾದರೆ, ಆಳ್ವಾರರು ವಿಷ್ಣುಭಕ್ತರು. ಇವರು ಭಕ್ತಿನೆಲೆಯ ಅಸಂಖ್ಯಾತ ಹಾಡುಗಳನ್ನು ರಚಿಸಿದ್ದಾರೆ. ನಾಯನ್ಮಾರರಲ್ಲಿ ಪ್ರಮುಖ ಭಕ್ತಕವಿಗಳೆಂದರೆ ತಿರುಜ್ಞಾನ ಸಂಬಂಧರ್, ತಿರುಮೂಲರ್, ಕಾರಿಕಾಲಮ್ಮೆಯಾರ್ ಮತ್ತು ಸುಂದರಮೂರ್ತಿ. ಕ್ರಿ. ಶ. ೭ನೇ ಶತಮಾನಕ್ಕೆ ಸೇರಿದ ಇವರು ತೇವಾರಂ ಎಂಬ ಅನೇಕ ಶೈವಗೀತೆಗಳನ್ನು ರಚಿಸಿ ಶಿವಪಾರಮ್ಯವನ್ನು ಸಾರಿದ್ದಾರೆ.

ಆಳ್ವಾರರಲ್ಲಿ ಪೊಯ್‌ಗೈ ಆಳ್ವಾರ್, ಭೂತತ್ತಾಳ್ವಾರ್, ಪೇರಿಯಾರ್ ಆಳ್ವಾರ ಮೊದಲಾದ ೧೨ ಜನ ಆಳ್ವಾರರು ಮೊದಲಿಗರಾಗಿದ್ದಾರೆ. ಇಲ್ಲಿ ಈ ಆಳ್ವಾರರನ್ನು ಕುರಿತು ಇನ್ನೊಂದು ಮಾತನ್ನು ಗಮನಿಸಬೇಕು. ಈ ಎಲ್ಲ ಆಳ್ವಾರರು ಒಂದೇ ಜಾತಿಗೆ ಸೇರಿದವರೇನಲ್ಲ. ಅವರೆಲ್ಲರೂ ಬೇರೆ ಬೇರೆ ಜಾತಿಸ್ತರಗಳಿಂದ ಬಂದವರು. ಅವರಲ್ಲಿ ತಿರುಪ್ಪಣಾಳ್ವರರು ಅಂತ್ಯಜರಾಗಿದ್ದರೆ, ತಿರುಮಂಗೈಯಾಳ್ವಾರ್ ಕಳ್ಳರ ಕುಲಕ್ಕೆ ಸೇರಿದವರು. ಇನ್ನು ನಮ್ಮಾಳ್ವಾರರು ರೈತಕುಲದವರು. ಈ ಎಲ್ಲ ಆಳ್ವಾರರು ವಿಷ್ಣುಪರವಾದ ಅನೇಕ ಹಾಡುಗಳನ್ನು ರಚಿಸಿ ಅತಿ ಮಧುರವಾಗಿ ಹಾಡಿದ್ದಾರೆ. ಆ ಮೂಲಕ ವೈಷ್ಣವ ಮತದ ಪ್ರಚಾರ ಮಾಡಲು ಪ್ರಯತ್ನಿಸಿದ್ದಾರೆ.

ಕ್ರಿ. ಶ. ೫ನೇ ಶತಮಾನದ ಸುಮಾರಿಗೆ ತಮಿಳಿನಲ್ಲಿ ದಲಿತ ಜನಾಂಗಕ್ಕೆ ಸೇರಿದ ಕವಿಗಳೂ ಆಗಿಹೋಗಿದ್ದಾರೆ. ಅವರಲ್ಲಿ ತಿರುಮೂಲ ಎಂಬ ಅನುಭಾವಿ ಕವಿ ತುಂಬ ಪ್ರಮುಖನಾಗಿದ್ದಾನೆ. ಈತನ 'ತಿರುಮಂದರಂ' ಎಂಬ ಕೃತಿ ತುಂಬ ಪ್ರಸಿದ್ಧವಾಗಿದೆ. ಇದರಲ್ಲಿ ೩೦೦೦ ಪದ್ಯಗಳು ಸಂಕಲನಗೊಂಡಿವೆ. ಈ ಪದಗಳಲ್ಲಿ ಈತ ದೇಹವು ಸಾಧನ ಯೋಗ್ಯವೆಂದೂ, ದೇಹವೇ ದೇಗುಲವೆಂದೂ, ದೇಹದ ಮೂಲಕ ಮುಕ್ತಿ ಸಾಧ್ಯವೆಂದೂ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾನೆ. ಕ್ರಿ. ಶ. ೯೫೦ರ ಕಾಲದ ಇಲ್ಲಿನ ಶೇಂದನಾರ್ ಎಂಬ ಕವಿಯ 'ಪಲ್ಲಾಂಡು' ಎಂಬ ಕೃತಿ ಕೂಡ ಇದೇ ತತ್ವಗಳನ್ನು ಪ್ರತಿಪಾದಿಸುತ್ತದೆ. ಕ್ರಿ. ಶ. ೯ನೇ ಶತಮಾನದಲ್ಲಿ ಇಲ್ಲಿ ಕಾಣಿಸಿಕೊಂಡ ಇನ್ನೊಬ್ಬ ಪ್ರಮುಖ ಸಂತ ಕವಿ ಮಾಣಿಕ್ಯ ವಾಚಕ. ಈತ ತನ್ನ ಕೃತಿ 'ತರುವಾಚಕಂ'ದಲ್ಲಿ ಭಕ್ತ ಮತ್ತು ಭಗವಂತನ ಆತ್ಮೀಯ ಸಂಬಂಧ, ಶಿವಸಾಕ್ಷಾತ್ಕಾರದ ತುಡಿತ, ಜೀವ–ಶಿವ ಸಮರಸದಂಥ ಅನುಭಾವಿಕ ವಿಷಯಗಳನ್ನು ಕುರಿತು ಬಿತ್ತರಿಸಿದ್ದಾನೆ.

ತಮಿಳಿನಲ್ಲಿ ಬಂದ ಇನ್ನೊಂದು ಧಾರೆ ಬೈರಾಗಿಗಳದ್ದು. ಈ ಬೈರಾಗಿಗಳು ಪಾಣರ್ ಎಂಬ ವಿಶಿಷ್ಟ ಜನಾಂಗಕ್ಕೆ ಸೇರಿದವರು. ಪಾಣರ್ ಎಂದರೆ ಅಲೆಮಾರಿ ಎಂದರ್ಥ. ಉತ್ತಮ ಹಾಡುಗಾರರೂ ಆದ ಇವರು ತತ್ವಪದಗಳಂಥ ಹಾಡುಗಳನ್ನು ಹಾಡುತ್ತ ಊರೂರು ಸಂಚರಿಸುತ್ತಿದ್ದರು. ತಮಿಳುನಾಡಿನ ಈ ಎಲ್ಲ ಧಾರೆಗಳ ಹಾಗೂ ಮೇಲೆ ಉಲ್ಲೇಖಿಸಿದ ಕನ್ನಡದ ದೇಶಿ ನೆಲೆಯ ಮೌಖಿಕ ಪರಂಪರೆಯ ಒನಕೆವಾಡು, ಬೆದಂಡೆಯಂಥ ಹಾಡುಗಬ್ಬಗಳ ಪ್ರಭಾವ–ಪ್ರೇರಣೆಯಿಂದ ಕನ್ನಡದಲ್ಲಿ ತತ್ವಪದ ಸಾಹಿತ್ಯ ಹುಟ್ಟಿಕೊಂಡಿರಬಹುದು.

ಕನ್ನಡದಲ್ಲಿ ತತ್ವಪದ ಸಾಹಿತ್ಯವನ್ನು ಮೊಟ್ಟಮೊದಲಿಗೆ ರಚಿಸಿದ ಶ್ರೇಯಸ್ಸು ೧೨ನೇ ಶತಮಾನದ ಶರಣರಿಗೆ ಸಲ್ಲುತ್ತದೆ. ಶರಣರು ಅಪ್ಪಟ ದೇಶಿ ನೆಲೆಗಳಿಂದ ಬಂದವರು. ಸಾಹಿತ್ಯ, ಸಮಾಜ, ರಾಜಕೀಯ, ಆರ್ಥಿಕ – ಹೀಗೆ ಜೀವನದ ಈ ವಿವಿಧ ಕ್ಷೇತ್ರಗಳಂತೆ ಅವರು ಸಂಗೀತ ಕ್ಷೇತ್ರದಲ್ಲೂ ವಿಶೇಷ ಜ್ಞಾನವನ್ನು ಹೊಂದಿದ್ದರು. ಮಾತ್ರವಲ್ಲ, ಅವರು ಸ್ವತಃ ಉತ್ತಮ ಹಾಡುಗಾರರೂ ಆಗಿದ್ದರು. ನಮ್ಮ ಈ ಮಾತಿಗೆ ಅವರ ವಚನಗಳನ್ನು ಗಮನಿಸಬಹುದು.

*ತಾಳಮಾನ ಸರಿಸವನರಿಯೆ*
*ಓಜೆ ಬಜಾವಣೆ ಲೆಕ್ಕವನರಿಯೆ*
*ನಿನಗೆ ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ*

*ಎನ್ನ ಕಾಯವ ದಂಡಿಗೆಯ ಮಾಡಯ್ಯ*
*ಎನ್ನ ಶಿರವ ಸೋರೆಯ ಮಾಡಯ್ಯ*
*ಎನ್ನ ನರವ ತಂತಿಯ ಮಾಡಯ್ಯ*
*ಬತ್ತೀಸ ರಾಗವ ಹಾಡಯ್ಯ*

– ಇವು ಬಸವಣ್ಣನವರ ವಚನಗಳೆರಡರ ಸಾಲುಗಳು. ಅದೇ ರೀತಿ ಅಲ್ಲಮ ಪ್ರಭುಗಳು ತಮ್ಮದೊಂದು ವಚನದಲ್ಲಿ,

*ಎರಡೆಂಬತ್ತು ಕೋಟಿ ವಚನಂಗಳ ಹಾಡಿ*
*ಹಲವ ಹಂಬಲಿಸತೆನ್ನ ಮನವು*

– ಎಂದು ಹೇಳಿದರೆ

*ಶಿವಯೋಗಿ ಸಿದ್ದರಾಮರು ತಮ್ಮ ಒಂದು ವಚನದಲ್ಲಿ,*
*ಅರುವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ*
*ಸೋತಿತೆನ್ನ ಮನ ನೋಡಯ್ಯ*

– ಎಂದು ಹೇಳಿದ್ದಾರೆ

ಇನ್ನೂ ಶರಣ ಸಕಲೇಶ ಮಾದರಸ ವೀಣಾಗಾನ ವಿಶಾರದನಾಗಿದ್ದರೆ, ಕಿನ್ನರಿ ಬ್ರಹ್ಮಯ್ಯ ಕಿನ್ನರಿ ಕಲಾವಿದನಾಗಿದ್ದನು. ಈ ಎಲ್ಲ ಸಂಗತಿಗಳು ಶರಣರು ಸಂಗೀತ ಜ್ಞಾನವನ್ನು ಬಲ್ಲವರಾಗಿದ್ದರು ಎಂಬ ಮಾತನ್ನು ಸ್ಪಷ್ಟಪಡಿಸುತ್ತವೆ. ಹೀಗೆ ಉತ್ತಮ ಸಂಗೀತ ಜ್ಞಾನವನ್ನು ಹೊಂದಿದ ಶರಣರು ಮೇಲೆ ಉಲ್ಲೇಖಿಸಿದ ನಮ್ಮ ಮೊದಲ ಘಟ್ಟದ ಕನ್ನಡ ಸಾಹಿತ್ಯದ ರಚನೆಗಳಾದ ದೇಶಿ ಹಾಡುಗಬ್ಬಗಳ ಮತ್ತು ತಮಿಳಿನ ತೇವಾರಂ ಇವೇ ಮೊದಲಾದ ಸಂಗೀತ ಧಾರೆಗಳ ಪ್ರಭಾವ ಪ್ರೇರಣೆಯಿಂದ ಕನ್ನಡ ಸಾಹಿತ್ಯದಲ್ಲಿ ಪ್ರಪ್ರಥಮವಾಗಿ ವಚನಗಳ ಜೊತೆಗೆ ಹಾಡಲೆಂದೇ ಉದ್ದೇಶಿಸಿ ತತ್ವಪದಗಳನ್ನು ರಚಿಸಲು ಪ್ರಾರಂಭಿಸಿದರು ಎಂದು ಹೇಳಬಹುದು.

**ತತ್ವಪದ–ಸ್ವರವಚನ : ಅರ್ಥಸಾಮ್ಯತೆ**

ಶರಣರ ತತ್ವಪದಗಳು 'ಸ್ವರವಚನ' ಎಂಬ ಹೆಸರಿನಿಂದ ಕರೆಸಿಕೊಂಡಿವೆ. ಸ್ವರವಚನ ಮತ್ತು ತತ್ವಪದ ಎಂಬ ಈ ಎರಡು ಪದಗಳಲ್ಲಿ ಅಂತಹ ಹೆಚ್ಚಿನ ಅರ್ಥಭಿನ್ನತೆಯನ್ನೇನೂ ನಾವು ಕಾಣುವುದಿಲ್ಲ. ಇವೆರಡು ಪದಗಳೂ ಪರಸ್ಪರ ಅರ್ಥಸಾಮ್ಯತೆಯಿಂದ ಕೂಡಿರುವುದನ್ನು ಕಾಣಬಹುದು. ತತ್ವಪದ ಹೇಗೋ ಹಾಗೆಯೇ ಸ್ವರವಚನ ಕೂಡ ಒಂದು ಸಂಯುಕ್ತ ಪದ. ಅಲ್ಲಿ ತತ್ವ ಮತ್ತು ಪದ ಎಂಬ ಎರಡು ಪದಗಳು ಸಮಾವೇಶವಾಗಿದ್ದರೆ, ಇಲ್ಲಿ ಸ್ವರ ಹಾಗೂ ವಚನ ಎಂಬ ಎರಡು ಪದಗಳು ಸಮಾವೇಶಗೊಂಡಿವೆ. ತತ್ವ ಎಂಬುದಕ್ಕಿರುವ ಅರ್ಥಗಳನ್ನು ಮೇಲೆ ಕೊಟ್ಟಿದೆ. ಸ್ವರ ಎಂಬುದಕ್ಕೂ ಹೆಚ್ಚು ಕಡಿಮೆ ಇದೇ ಅರ್ಥಗಳಿವೆ. ನಮ್ಮ ಈ ಮಾತಿಗೆ ಅಲ್ಲಮ ಪ್ರಭುಗಳ 'ಸ್ವರ ಎಂಬುದು ಪರತತ್ವ' ಎಂಬ ಮಾತನ್ನು ಇಲ್ಲಿ ಗಮನಿಸಬಹುದು. ಈ ಅರ್ಥದೊಂದಿಗೆ ಇದು ರಾಗ, ಧ್ವನಿ, ಸಂಗೀತಗಳೆಂಬ ಅರ್ಥಗಳನ್ನೂ ಹೊಂದಿದೆ. ಇನ್ನು ಪದ ಎಂಬುದಕ್ಕೆ ಹಾಡು, ಗೀತೆ ಎಂಬ ಅರ್ಥಗಳೊಂದಿಗೆ ಹದಗೊಂಡ ಶಬ್ದ, ಸರಿಯಾಗಿ ಬೆಂದಿರುವ ಸ್ಥಿತಿ ಎಂಬ ಅರ್ಥಗಳಿವೆ ಎಂದು ಮೇಲೆಯೇ ಹೇಳಿದೆ. ವಚನ ಎಂಬುದರ ಸಾಮಾನ್ಯವಾದ ಅರ್ಥ 'ಮಾತು' ಎಂದೇನೋ ಇದೆ. ಆದರೆ ಶರಣರ ಮಾತುಗಳು ನಮ್ಮ – ನಿಮ್ಮಂತೆ ಸಾಮಾನ್ಯವಾದ, ಸಾಧಾರಣವಾದ, ಮಾತುಗಳಲ್ಲ. ಅವು ಚೆನ್ನಾಗಿ ಹದಗೊಂಡ ಹುಸಿ ಹೊದ್ದಿಲ್ಲದ ಮಾತುಗಳು, ಸರಿಯಾಗಿ ಬೆಂದಿರುವ, ಪಕ್ವಗೊಂಡಿರುವ ಮಾತುಗಳು, ವ್ಯವಸ್ಥಿತವಾಗಿ ತತ್ವ–ಸಿದ್ಧಾಂತಗಳನ್ನು ಪ್ರತಿಪಾದಿಸುವಂಥ ಮಾತುಗಳು. ಅಂತೆಯೇ ಅವರ ಸ್ವರವಚನಗಳಂತೆ ವಚನಗಳು ಕೂಡ ರಾಗಬದ್ಧವಾಗಿ ಹಾಡಲು ಬರುತ್ತವೆ. ಈ ಹಿನ್ನೆಲೆಯಲ್ಲಿ ಜನಪದ ಪರಿಭಾಷೆಯಲ್ಲಿ ತತ್ವಪದಗಳೆಂದು ಕರೆಯಲಾದ ತತ್ವಪದಗಳನ್ನು ವಚನ ಪರಿಭಾಷೆಯಲ್ಲಿ ಸ್ವರವಚನಗಳೆಂದು ಕರೆದಿರುವುದು ಸಮಂಜಸವಾಗಿದೆ.

**ಪರಂಪರೆ**

ಶರಣರಲ್ಲಿ ಸ್ವರವಚನಗಳನ್ನು ಅರ್ಥಾತ್ ತತ್ವಪದಗಳನ್ನು ಮೊಟ್ಟಮೊದಲಿಗೆ ಯಾರು ಬರೆದರು ಎಂಬ ವಿಚಾರವಾಗಿ ವಿದ್ವಾಂಸರಲ್ಲಿ ಇಂದಿಗೂ ಜಿಜ್ಞಾಸೆ ಇದೆ. ಕೆಲವರು ವಚನಗಳನ್ನು ಹೇಗೋ ಹಾಗೇ ಸ್ವರವಚನಗಳನ್ನು ಸಹ ಜೇಡರ ದಾಸಿಮಯ್ಯನೇ ಮೊಟ್ಟಮೊದಲು ಬರೆದನು ಎಂದು ಹೇಳಿದರೆ, ಇನ್ನು ಕೆಲವರು ಮೊಟ್ಟಮೊದಲು ಸ್ವರವಚನ ಬರೆದವನು ಸಕಲೇಶ ಮಾದರಸ ಎಂದು ಹೇಳುತ್ತಾರೆ. ನಮ್ಮ ಅಭಿಪ್ರಾಯವು ಕೂಡ ಸಕಲೇಶ ಮಾದರಸನೇ ಪ್ರಪ್ರಥಮ ಸ್ವರವಚನಕಾರ ಎಂಬುದಾಗಿದೆ. ಹೇಗೆಂದರೆ, ಈಗ ದೊರೆತಿರುವ ಸ್ವರವಚನಗಳಲ್ಲಿ ಸಕಲೇಶ ಮಾದರಸನ ಸ್ವರವಚನವೇ ಅತ್ಯಂತ ಪ್ರಾಚೀನವಾದುದು. ನಿದರ್ಶನಕ್ಕೆ ಆ ಸ್ವರವಚನದ ಒಂದೆರಡು ಸಾಲುಗಳನ್ನು ಇಲ್ಲಿ ಕೊಟ್ಟಿದೆ :

ತಂಗಾಳಿಯಲಿಹ ಮರನೆ ಎನ್ನಂಗದೊಳಗಿಪ್ಪ ಶಿವಲಿಂಗದ ಮರನೆ

– ಇದಲ್ಲದೆ ಸಕಲೇಶ ಮಾದರಸ ಸಂಗೀತ ತಜ್ಞನಾಗಿದ್ದನೆಂದೂ ವೀಣಾ ವಿಶಾರದನಾಗಿದ್ದನೆಂದೂ ತಿಳಿದುಬರುತ್ತದೆ. ಮಾತ್ರವಲ್ಲದೆ, ಪಾಲ್ಕುರಿಕೆ ಸೋಮನಾಥನು ತನ್ನ 'ಬಸವ ಪುರಾಣ'ದಲ್ಲಿ ಸಕಲೇಶ ಮಾದರಸ ವೀಣೆಯನ್ನು ನುಡಿಸುತ್ತ ಭಕ್ತಿಗೀತೆಗಳನ್ನು ಹಾಡುತ್ತ ಶಿವಾರಾಧನಪರನಾಗುತ್ತಿದ್ದನು ಎಂದು ಹೇಳಲಾಗಿದೆ. ಹೀಗಾಗಿ ಸಕಲೇಶ ಮಾದರಸನೇ ಕನ್ನಡ ತತ್ವಪದ ಪರಂಪರೆಯ ಮೂಲಪುರುಷ ಎಂಬ ಮಾತು ಸತ್ಯಾಂಶದಿಂದ ಕೂಡಿದೆ ಎಂದು ಹೇಳಬಹುದಾಗಿದೆ.

ಹೀಗೆ ೧೨ನೇ ಶತಮಾನದಲ್ಲಿ ಸಕಲೇಶ ಮಾದರಸನಿಂದ ಪ್ರಾರಂಭವಾಗುವ ಕನ್ನಡ ತತ್ವಪದ ಪರಂಪರೆ ಮುಂದೆ ನೂರೊಂದು ವಿರಕ್ತರ ಕಾಲದಲ್ಲಿ ಹೆದ್ದೊರೆಯಾಗಿ, ನಿಜಗುಣ ಶಿವಯೋಗಿಗಳ ಕಾಲದಲ್ಲಿ ಮಹಾಪೂರವಾಗಿ ಮುಂದುವರಿದು ಇದುವರೆಗೂ ಬೆಳೆದು ಬಂದಿದೆ. ಅದು ಬೆಳೆದುಬಂದ ಬಗೆಯನ್ನು ವಿದ್ವಾಂಸರು ತಮಗೆ ಹೊಳೆದಂತೆ ಹೀಗೆ ವಿಭಜಿಸಿಕೊಂಡಿದ್ದಾರೆ :

೧. ಬಸವಯುಗ
೨. ನೂರೊಂದು ವಿರಕ್ತರ ಯುಗ
೩. ತೋಂಟದ ಸಿದ್ಧಲಿಂಗರ ಯುಗ
೪. ಆಧುನಿಕ ಯುಗ

– ಇದು ಡಾ॥ ವೀರಣ್ಣ ರಾಜೂರು ಅವರು ಮಾಡಿದ ವಿಭಜನೆ. ಡಾ॥ ಎಲ್. ಬಸವರಾಜು ಅದನ್ನು ಮೂರು ರೀತಿಯಲ್ಲಿ ಹೀಗೆ ವಿಭಜಿಸಿರುವರು :

೧. ಬಸವಪೂರ್ವದ ಹಾಡುಗಳು
೨. ಬಸವ ಸಮಕಾಲೀನರ ಹಾಡುಗಳು
೩. ವಾಗ್ಗೇಯಕಾರರ ಹಾಡುಗಳು

ಡಾ॥ ಎಸ್. ವಿದ್ಯಾಶಂಕರ ಅವರು ನಾಲ್ಕು ಬಗೆಯಾಗಿ ವಿಭಜಿಸಿರುವರು. ಅವೆಂದರೆ :

೧. ಮೊದಲನೆಯ ಘಟ್ಟ – ಬಸವಾದಿ ಶಿವಶರಣರ ಕಾಲ
೨. ಎರಡನೆಯ ಘಟ್ಟ – ವೀರಶೈವ ಪುನರುಜ್ಜೀವನ ಕಾಲ
೩. ಮೂರನೆಯ ಘಟ್ಟ – ಜಿಗುನಿ ಮರುಳಾರಾಧ್ಯ ಮೊದಲಾದವರ ಕಾಲ
೪. ನಾಲ್ಕನೆಯ ಘಟ್ಟ – ಚಿದಾನಂದ ಅವಧೂತ ಮೊದಲಾದವರ ಕಾಲ

ಡಾ॥ ಎಮ್. ಎಸ್. ಲಠ್ಠೆ ಅವರು ವಿಭಜಿಸಿದ ರೀತಿ ಹೀಗಿದೆ :

೧. ಬಸವಪೂರ್ವ ಯುಗದ ಸ್ವರವಚನಗಳು
೨. ಬಸವಾದಿ ಶಿವಶರಣರ ಸ್ವರವಚನಗಳು
೩. ನಿಜಗುಣಾದಿ ಶಿವಯೋಗಿಗಳ ಸ್ವರವಚನಗಳು
೪. ಆಧುನಿಕ ಸ್ವರವಚನಗಳು

ನಮಗೆ ಕಾಲ ಕಾಲಕ್ಕೆ ಕರೆಸಿಕೊಂಡ ಹೆಸರಿನಿಂದ ಅವುಗಳನ್ನು ಹೀಗೆ ವಿಭಜಿಸಿ ಅಭ್ಯಸಿಸಬಹುದೆಂದು ತೋರುತ್ತದೆ :

೧. ಸ್ವರವಚನದ ಪ್ರಾರಂಭ ಯುಗ
೨. ಸ್ವರವಚನಗಳ ಪುನರುಜ್ಜೀವನ ಯುಗ
೩. ಕೈವಲ್ಯ ಪದಗಳ ಯುಗ
೪. ತತ್ವಪದಗಳ ಯುಗ

**೧. ಸ್ವರವಚನದ ಪ್ರಾರಂಭ ಯುಗ**

ಸ್ವರವಚನ ಯುಗಕ್ಕೆ ವಿದ್ವಾಂಸರು ಬಸವಯುಗ ಎಂದು ಕರೆದಿದ್ದಾರೆ. ಈ ಯುಗದಲ್ಲಿ ರಚನೆಯಾದ ತತ್ವಪದಗಳು ಸ್ವರವಚನ ಎಂಬ ಹೆಸರಿನಿಂದ ಕರೆಸಿಕೊಂಡಿವೆ ಎಂದು ಮೇಲೆಯೇ ಹೇಳಿದೆ. ಈ ಯುಗದ ಸಕಲೇಶ ಮಾದರಸ ಮೊಟ್ಟಮೊದಲಿಗೆ ತತ್ವಪದಗಳನ್ನು ಬರೆದು ತತ್ವಪದಗಳ ಆದ್ಯಪ್ರವರ್ತಕನೆನಿಸಿದನು. ಅವನ ತರುವಾಯ ಅವನು ಪ್ರಾರಂಭಿಸಿದ ಈ ತತ್ವಪದ ಪರಂಪರೆಯನ್ನು ಈ ಯುಗದಲ್ಲಿ ಬಸವಾದಿ ಶರಣರು ಮುಂದುವರಿಸಿದರು. ಜೇಡರ ದಾಸಿಮಯ್ಯ,

ಬಸವಣ್ಣ, ಚೆನ್ನಬಸವಣ್ಣ, ಅಲ್ಲಮಪ್ರಭುದೇವ, ಅಕ್ಕಮಹಾದೇವಿ, ಅಂಬಿಗರ ಚೌಡಯ್ಯ, ಸೊಡ್ಡಳ ಬಾಚರಸ, ಹಾವಿನಹಾಳ ಕಲ್ಲಯ್ಯ, ಸಿದ್ಧರಾಮ, ನೀಲಮ್ಮ, ಅಕ್ಕನಾಗಮ್ಮ, ಅಮುಗಿದೇವಯ್ಯ, ಮಡಿವಾಳ ಮಾಚಯ್ಯ, ಹಡಪದ ಅಪ್ಪಣ್ಣ, ಹಡಪದ ಲಿಂಗಮ್ಮ, ಅಗ್ಘವಣಿ ಹೊನ್ನಯ್ಯ, ನಿಜಗುಣಯೋಗಿ, ಆದಯ್ಯ, ಉಳಿಯುಮೇಶ್ವರ ಚಿಕ್ಕಣ್ಣ, ನಿಜಲಿಂಗ ಚಿಕ್ಕಯ್ಯ, ಗುರುಪುರದ ಮಲ್ಲಯ್ಯ, ಅಗ್ಘವಣಿ ಹಂಪಯ್ಯ, ಜೋದರ ಮಾಯಣ್ಣ, ಪುಷ್ಪದ ಸೋಮಯ್ಯ, ಬಹುರೂಪಿ ಚೌಡಯ್ಯ ಮೊದಲಾದ ಇಪ್ಪತ್ತೈದಕ್ಕೂ ಹೆಚ್ಚು ಜನ ಶರಣರು ಈ ಯುಗದಲ್ಲಿ ವಚನಗಳ ಜೊತೆಗೆ ರಾಗ – ತಾಳ – ಲಯಬದ್ಧವಾದ ೨೫೦ಕ್ಕೂ ಅಧಿಕ ಸಂಖ್ಯೆಯ ತತ್ವಪದಗಳನ್ನು ರಚಿಸಿದ್ದಾರೆ.

ಬಸವಾದಿ ಶರಣರು ತತ್ವಪದಗಳನ್ನೇನೋ ಬರೆದರು. ಆದರೆ ಅವರ ವಚನಗಳಂತೆ ತತ್ವಪದಗಳು ಜನಜೀವನದಲ್ಲಿ ಬೆರೆಯಲಿಲ್ಲ. ಏಕೆಂದರೆ ಅವುಗಳಲ್ಲಿ ಪ್ರತಿಪಾದಿತವಾದ, ತತ್ವ–ಸಿದ್ಧಾಂತಗಳು ತುಂಬ ಗಹನವಾಗಿವೆ. ಮೇಲಾಗಿ, ಅವುಗಳದು ಬೆಡಗಿನ ಭಾಷೆ. ಅಧಿಕ ಸಂಕೇತಗಳ ಬಳಕೆ. ಹೀಗಾಗಿ ಅವು ಜನಸಾಮಾನ್ಯರಿಗೆ ಅಷ್ಟೊಂದು ಸುಲಭವಾಗಿ ತಿಳಿಯುವಂತಿರಲಿಲ್ಲ. ಅದೇನೇ ಇದ್ದರೂ ಕನ್ನಡದಲ್ಲಿ ಮೊಟ್ಟಮೊದಲು ತತ್ವಪದಗಳನ್ನು ರಚಿಸುವುದರ ಮೂಲಕ ಕನ್ನಡ ತತ್ವಪದ ಪರಂಪರೆಗೆ ಒಂದು ಭದ್ರವಾದ ಬುನಾದಿಯನ್ನು ಹಾಕಿದ ಶ್ರೇಯಸ್ಸು ಈ ಶಿವಶರಣರಿಗೆ ಸಲ್ಲುತ್ತದೆ.

ಕ್ರಿ. ಶ. ೧೧೬೭ರಲ್ಲಿ ಕಲ್ಯಾಣಕ್ರಾಂತಿ ಸಂಭವಿಸಿತು. ಶರಣರೆಲ್ಲರೂ ಕಲ್ಯಾಣದಿಂದ ಚದುರಿಹೋದರು. ಅವರ ವಚನ–ಸ್ವರವಚನಗಳು ಚೆಲ್ಲಾಪಿಲ್ಲಿಯಾಗಿ ಹೋದವು. ಆನಂತರ ಬಂದ ಹರಿಹರ, ರಾಘವಾಂಕ, ಪದ್ಮಣಾಂಕನನ್ನು ಬಿಟ್ಟರೆ ಹೇಳಿಕೊಳ್ಳುವಂಥ ಕವಿಗಳಾರೂ ಸಾಹಿತ್ಯ ಕೃಷಿ ಮಾಡಲಿಲ್ಲ. ಹೀಗಾಗಿ ಈ ಅವಧಿಯಲ್ಲಿ ಸ್ವರವಚನ ಸಾಹಿತ್ಯ ರಚನಾ ಕಾರ್ಯವು ಸ್ಥಗಿತಗೊಂಡಿತು.

ಈ ಅವಧಿಯಲ್ಲಿ ಸ್ವರವಚನದ ಸೃಷ್ಟಿಕಾರ್ಯವೇನೋ ಸ್ಥಗಿತಗೊಂಡಿತು. ಆದರೆ ಅವುಗಳನ್ನು ಹಾಡುವ ಕ್ರಿಯೆ ಜಾರಿಯಲ್ಲಿತ್ತು. ಇದಕ್ಕೆ ರಾಘವಾಂಕನ ಸಿದ್ಧರಾಮನ ಚಾರಿತ್ರ್ಯದಲ್ಲಿ ಉಕ್ತವಾದ ಪದ್ಯವೊಂದು ನಿದರ್ಶನವಾಗಿ ನಿಲ್ಲುತ್ತದೆ.

*ಇತ್ತಲಾ ಪುರದ ಮಹಾಮನೆಯ ಬಾಗಿಲೊಳು ಮೊಳಗಿತ್ತು*
*ಪ್ರಹಾರ ಭೇರಿಯ ಶಂಕನಾದ ಪೊಣ್ಮಿತ್ತು ಪ್ರಾತಃಕಾಲ ಪೂಜೆ*
*ವಚನಾದ್ವಯ ಸ್ತೋತ್ರ ಪಠನಂಗಳಿಂದ ಬಿತ್ತರಂಬಡೆದ ಶರಣಾವಳಿ ಹಾಡುತ್ತ ನೆನೆವ ಹೊತ್ತು*

**೨. ಸ್ವರವಚನಗಳ ಪುನರುಜ್ಜೀವನ ಯುಗ : ೧೪, ೧೫ನೇ ಶತಮಾನ**

ಈ ಯುಗವನ್ನು ನೂರೊಂದು ವಿರಕ್ತರ ಯುಗ ಎಂದು ಕರೆದಿದ್ದಾರೆ. ಈ ಕಾಲ ಸ್ವರವಚನಗಳ ಪುನರುಜ್ಜೀವನ ಕಾಲ. ಈ ಕಾಲದಲ್ಲಿ ತತ್ವಪದಗಳಿಗೆ ಮತ್ತೆ ಜೀವ ಬಂದಿತು. ವಿಜಯನಗರದ ಅರಸ ಪ್ರೌಢದೇವರಾಯನ ಕಾಲದ ನೂರೊಂದು ವಿರಕ್ತರು ಕಲ್ಯಾಣ ಕ್ರಾಂತಿಯಿಂದಾಗಿ ಚದುರಿಹೋಗಿದ್ದ ವಚನ ಸ್ವರವಚನಗಳನ್ನು ಒಂದೆಡೆ ಕಲೆಹಾಕುವ, ಸಂಗ್ರಹ, ಸಂಕಲನ ಸಂಪಾದನೆ ರೂಪದಲ್ಲಿ ಸಂಯೋಜಿಸುವ ಕೆಲಸ ಮಾಡಿದರು. ಈ ಕಾರ್ಯ ತುಂಬ ವ್ಯಾಪಕವಾಗಿ ನಡೆಯಿತು. ಮಾತ್ರವಲ್ಲ ಅವರು ತಾವೂ ಸ್ವತಃ ವಚನ ಸ್ವರವಚನ ಬರೆಯುವ ಕಾರ್ಯ ಮಾಡಿದರು. ಕರಸ್ಥಲದ ನಾಗಿದೇವ, ಬತ್ತಲೇಶ್ವರ, ನಿರ್ವಾಣಿ ಬೋಳೇಶ, ಮಗ್ಗೆಯ ಮಾಯಿದೇವ, ವೀರಣ್ಣದೇವ, ಕವಿಲಿಂಗ, ಶಂಕರದೇವ – ಈ ಮೊದಲಾದ ನೂರೊಂದು ವಿರಕ್ತರು ೫೦೦ಕ್ಕೂ ಹೆಚ್ಚು ತತ್ವಪದಗಳನ್ನು ಬರೆದು ಈ ಪ್ರಕಾರದ ವಿಪುಲತೆಗೆ ಕಾರಣರಾದರು. ಲಿಂಗವಂತ ತತ್ವ, ನೀತಿ ಸ್ತುತಿ, ಸಮಾಜ ವಿಮರ್ಶೆ, ನೂತನ ಬಂಧಗಳ ಬಳಕೆ ಈ ಯುಗದ ತತ್ವಪದಗಳ ವೈಶಿಷ್ಟ್ಯ. ಇವರ ಕಾಲದಲ್ಲೂ ೧೨ನೇ ಶತಮಾನದ ಶರಣರ ಮಾರ್ಗವೇ ಮುಂದುವರಿಯಿತು. ಹೀಗಾಗಿ ಅವರ ತತ್ವಪದಗಳಂತೆ ಇವರ ತತ್ವಪದಗಳು ಕೂಡ ಜನಸಾಮಾನ್ಯರಿಂದ ದೂರ ಉಳಿದವು.

ಲಿಂಗವಂತ ಸಾಹಿತ್ಯ ಪರಂಪರೆಯಲ್ಲಿ ತೋಂಟದ ಸಿದ್ಧಲಿಂಗರದು ಬಹು ದೊಡ್ಡ ಹೆಸರು. ೧೫ನೇ ಶತಮಾನದ ಏಳುನೂರೊಂದು ವಿರಕ್ತರೆಂದು ಕರೆಸಿಕೊಳ್ಳುವ ಅವರ ಶಿಷ್ಯ ಪ್ರಶಿಷ್ಯರು ಈ ಯುಗದಲ್ಲಿ ಸ್ವರವಚನಗಳ ಪರಂಪರೆಯನ್ನು ಮುಂದುವರಿಸಿದರು. ಅದಕ್ಕೆ ಹೆಚ್ಚಿನ ವ್ಯಾಪ್ತಿ–ವೇಗಗಳನ್ನು ತಂದುಕೊಟ್ಟರು. ಜಿಗುನಿ ಮರುಳದೇವ, ಕಂಬಾಳ ಶಾಂತಮಲ್ಲೇಶ, ಕವಿ ಹೊನ್ನ ಸಿದ್ಧಲಿಂಗ, ಮೊದಲಾದವರು ಸ್ವರವಚನಗಳನ್ನು ಬರೆದರು. ಕಂಬಾಳ ಶಾಂತಮಲ್ಲೇಶರು ಸ್ವರವಚನಗಳನ್ನು, ಶಿವಯೋಗ ಪ್ರದೀಪಿಕೆ, ಗಣವಚನ ರತ್ನಾವಳಿ ಎಂಬ ಕೃತಿಗಳನ್ನು ಹೊರತಂದರು. ಇವು ಸ್ವರವಚನ ಸಾಹಿತ್ಯಕ್ಕೆ ಈ ಯುಗ ನೀಡಿದ ಬಹುದೊಡ್ಡ ಕೊಡುಗೆ. ಈ ಯುಗದಲ್ಲಿ ೭೦೦ಕ್ಕೂ ಹೆಚ್ಚು ತತ್ವಪದಗಳು ರಚನೆಯಾದವು, ತತ್ವಪದ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದವು.

**೩. ಕೈವಲ್ಯ ಪದಗಳ ಯುಗ**

ಈ ಯುಗಕ್ಕೆ ನಿಜಗುಣ ಶಿವಯೋಗಿಗಳ ಯುಗ ಎಂದೂ ಕರೆಯಲಾಗುತ್ತದೆ. ನಿಜಗುಣ ಶಿವಯೋಗಿಗಳು ಶಿವಶರಣರಂತೆ ಮತ್ತು ಹರಿದಾಸರಂತೆ ಅನುಭಾವ ಸಾಧನೆಯಲ್ಲಿ ಗುರುವಿಗೆ ಹೆಚ್ಚಿನ ಮಹತ್ವ ನೀಡಿದರು. ಅವರು ತಮ್ಮ ಕೈವಲ್ಯ ಪದ್ಧತಿಯನ್ನು ಗುರುವಾಣಿಯಿಂದಲೇ ಪ್ರಾರಂಭಿಸಿದರಲ್ಲದೆ ಅದರ ಕೊನೆಯಲ್ಲೂ ಗುರುವನ್ನು ಕುರಿತಾಗಿ ಉತ್ತಮ ಗೀತೆಗಳನ್ನು ರಚಿಸಿದ್ದಾರೆ. ತಮ್ಮ ಕೈವಲ್ಯ ಪದ್ಧತಿಯ (೧೭೪ ಪದಗಳ ಸಂಕಲನ) ಮೂಲಕ ಅವರು ಇಹಲೋಕವನ್ನು ತಿರಸ್ಕರಿಸಿದ, ವೈರಾಗ್ಯದಿಂದ ಕೂಡಿ ಪ್ರವೃತ್ತಿಮುಖವಾದ, ಆದರೂ ನಿರ್ಲಿಪ್ತ ನಿಲುವಿನ ಒಂದು ವಿಶಿಷ್ಟ ಮಾರ್ಗವನ್ನು ರೂಪಿಸಿದರು. ಗಹನವಾದ ಆಧ್ಯಾತ್ಮಿಕ ತತ್ವಗಳನ್ನು ಭಾವಪೂರ್ಣವಾದ ಸಾಹಿತ್ಯ ರೂಪದಲ್ಲಿ ಹದವಾದ ನಾದವಿನ್ಯಾಸದ ಹಿನ್ನೆಲೆಯಲ್ಲಿ ತಂದು ಒಂದು ಹೊಸ ಪರಂಪರೆಯನ್ನು ಹುಟ್ಟುಹಾಕಿದರು. ಅವರು ಹಾಕಿಕೊಟ್ಟ ಈ ಪರಂಪರೆಯನ್ನು ಸರ್ಪಭೂಷಣ ಶಿವಯೋಗಿ (ಕೈವಲ್ಯ ಕಲ್ಪವಲ್ಲರಿ), ಬಾಲಲೀಲಾ ಮಹಂತ ಶಿವಯೋಗಿ (ಕೈವಲ್ಯ ದರ್ಪಣ) ಮುಪ್ಪಿನ ಷಡಕ್ಷರಿ, (ಸುಬೋಧಸಾರ) ಸೋಮೇ ಕಟ್ಟೇ ಕರಿಬಸವಾರ್ಯ (ಕೈವಲ್ಯ ಪದಗಳು) ಗುರುಬಸವಾರ್ಯ (ಕೈವಲ್ಯ ಪದ್ಧತಿ) ಘನಮಠದಾರ್ಯ, (ಭಕ್ತಿ ಸುಧಾಸಾರ) ಮೈಲಾರ ಬಸವಲಿಂಗ ಶರಣ (ಶಿವಾನುಭವ ದರ್ಪಣ) ಮೊದಲಾದವರು ಮುಂದುವರಿಸಿದರು.

ಅದ್ವೈತ ತತ್ವಬೋಧೆ, ಲೋಕನೀತಿ, ಭಕ್ತಿ, ಜ್ಞಾನ, ವೈರಾಗ್ಯ ಪ್ರತಿಪಾದನೆ, ಸರಳ ನೇರ ಭಾಷೆ ಈ ಪದಗಳ ಪ್ರಮುಖ ವೈಶಿಷ್ಟ್ಯ

**೪. ತತ್ವಪದಗಳ ಯುಗ**

ಕ್ರಿ. ಶ. ೧೭, ೧೮, ೧೯ ಮತ್ತು ೨೦ನೇ ಶತಮಾನದ ಮೊದಲೆರಡು ದಶಕದ ಕಾಲವನ್ನು ನಾವು ತತ್ವಪದಗಳ ಸುವರ್ಣಯುಗ ಎಂದು ಕರೆಯಬೇಕು. ಈ ಕಾಲದ ಹಾಡುಗಳು ತತ್ವಪದಗಳು ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿವೆ. ಈ ಕಾಲದಲ್ಲಿ ಕರಾವಳಿ ಮತ್ತು ಪಶ್ಚಿಮ ಘಟ್ಟವನ್ನು ಬಿಟ್ಟರೆ ಉಳಿದಂತೆ ಕರ್ನಾಟಕದ ಎಲ್ಲ ಭಾಗಗಳಲ್ಲಿ ತತ್ವಪದಗಳು ರಚನೆಯಾದವು. ಶಿಷ್ಟ ಭಾಷೆಯಲ್ಲಿ ರಚನೆಯಾಗುತ್ತಿದ್ದ ತತ್ವಪದಗಳು ಈ ಯುಗದಲ್ಲಿ ಜನಪದ ಭಾಷೆಯಲ್ಲಿ ರಚನೆಯಾಗಲು ಪ್ರಾರಂಭಿಸಿದವು. ರಾಮಪುರದ ಬಕ್ಕಪ್ಪ, ಶಿಶುನಾಳ ಶರೀಫ, ಅವನ ಶಿಷ್ಯರು, ಮದ್ದೀರ ಸ್ವಾಮಿ, ಘನಮಠದ ನಾಗಭೂಷಣ, ಕೂಡಲೂರು ಬಸವಲಿಂಗ ಶರಣರು, ನೀರಲಕೇರಿ ಬಸವಲಿಂಗ, ಸಾರವಾಡದ ಚಿಕ್ಕಪ್ಪಯ್ಯ, ಶಿರಗಾಪುರದ ಬಂಡೆಪ್ಪ, ಕೊಳ್ಳೂರು ಹುಸನಾ, ಚಿದಾನಂದಾವಧೂತರು, ಏನೂಲಿ ಕರಿಬಸವಾರ್ಯ, ನಿಡವಂಚಿ ಭದ್ರೇಶ್ವರ, ಮರಕುಂದಿ ಬಸವಣ್ಣಪ್ಪ, ಧುಮ್ಮನಸೂರು ಸಿದ್ಧಪ್ರಭು, ಮುಡಬಿ ಮಸ್ತ ಅಲಿಶಾ ಖಾದರಿ, ಗುರು ಖಾದರಿ ಪೀರ– ಹೀಗೆ ಅಸಂಖ್ಯಾತ ತತ್ವಪದಕಾರರು ಅಂದು ಅನೇಕ ತತ್ವಪದಗಳನ್ನು ರಚಿಸಿದರು. ಅವರಲ್ಲಿ ಕೆಲವರು ಬುಲಾಯಿ, ಮೊಹರಂ, ಆರತಿ, ಗೀಗೀಯಂಥ ಜಾನಪದ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಪದಗಳನ್ನು ರಚಿಸಿದರು, ನಾಟಕಗಳನ್ನು ಬರೆದರು.

ಇವರು ಆರೂಢ ಪಂಥದ ಜಾಡಿನಲ್ಲಿ ನಡೆದು ಸಂಸಾರದ ಅಸಾರತೆಯನ್ನು ಸಾರುತ್ತ ಗುರುವೇ ಪರದೈವ ಎಂದು ನಂಬಿದರು. ಭಕ್ತಿಜ್ಞಾನ ವೈರಾಗ್ಯಕ್ಕೆ ಹೆಚ್ಚು ಮಹತ್ವ ಕೊಟ್ಟರು. ಜೀವನದ ಅನಿತ್ಯತೆ, ಸಂಸಾರ ಕ್ಷಣಿಕ, ಮುಕ್ತಿಯ ಹಂಬಲ, ಅಧ್ಯಾತ್ಮ, ನೀತಿ, ಯೋಗ ವಿಚಾರ, ಸಮಾಜ ವಿಡಂಬನೆ, ಅನುಭಾವ, ಮತೀಯ ಸಹಿಷ್ಣುತೆ, ಆತ್ಮ ಶೋಧನೆ, ಸತಿ–ಪತಿಭಾವ, ವಸಾಹತುಶಾಹಿ ಖಂಡನೆ, ಧಾರ್ಮಿಕ ವಿಡಂಬನೆ ಮೊದಲಾದ ಅಂಶಗಳು ಇವರ ತತ್ವಪದಗಳಲ್ಲಿ ಕಂಡುಬರುತ್ತವೆ. ಇಲ್ಲಿ ಪ್ರಾಣಿ ರೂಪಕಗಳು, ದೈಹಿಕ ಪ್ರತಿಮೆಗಳು, ಲೈಂಗಿಕ ಪರಿಕಲ್ಪನೆಗಳು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ಮೂಡಿಬಂದಿವೆ.

ಹೀಗೆ ಶರಣರಿಂದ ಪ್ರಾರಂಭವಾದ ತತ್ವಪದ ಸಾಹಿತ್ಯ ನೂರೊಂದು, ಏಳನೂರೊಂದು ವಿರಕ್ತ ಹಾಗೂ ನಿಜಗುಣ ಶಿವಯೋಗಾದಿಗಳ ಮೂಲಕ ಜಾನಪದ ತತ್ವಪದಕಾರರವರೆಗೆ ಬೆಳೆದುಬಂದಿದೆ.

**ಡಾ॥ ಗುರುಲಿಂಗಪ್ಪ ಧಬಾಲೆ**
ನಂ. ೫/೧, ಶ್ಯಾನುಭೋಗ ನಂಜುಂಡಪ್ಪ ಗಲ್ಲಿ
ಚಿಕ್ಕಮಾವಳ್ಳಿ ಅಂಚೆ, ಬೆಂಗಳೂರು – ೫೬೦ ೦೦೪







# ಸೃಜನಶೀಲ ಕಲಾ ಶಿಕ್ಷಕ ಲೋಹಾರ್

ಧಾರವಾಡದಲ್ಲಿ ನೆಲೆಸಿರುವ ಕಲಾವಿದ, ಶಿಕ್ಷಕ ಶ್ರೀ ಶಶಿಧರ ಎಂ. ಲೋಹಾರ್ ಅವರದ್ದು ಚಿತ್ರಕಲೆಯಲ್ಲಿ ನುರಿತ ಕೈ. ಪ್ರಸ್ತುತ ಧಾರವಾಡದ ಜೆ.ಎಸ್.ಎಸ್. ಕಲಾ ಶಾಲೆಯಲ್ಲಿ ಪ್ರಾಧ್ಯಾಪಕರಾಗಿ ಕಲಾ ಸೇವೆಯಲ್ಲಿ ನಿರತರಾಗಿದ್ದಾರೆ. ಕರ್ನಾಟಕ ಲಲಿತಕಲಾ ಅಕಾಡೆಮಿಯ ಮಾಜಿ ಸದಸ್ಯರಾದ ಲೋಹಾರ್ ಅವರು ಬೆಂಗಳೂರಿನ ಕೆನ್ ಕಲಾ ಶಾಲೆಯಲ್ಲಿ ಡಿಪ್ಲೊಮಾ ಪದವಿ ಮುಗಿಸಿದ ನಂತರ ಧಾರವಾಡದ ಹಾಲಭಾವಿ ಕಲಾ ಶಾಲೆಯಲ್ಲಿ ಆರ್ಟ್ ಮಾಸ್ಟರ್ ಪದವಿಯನ್ನು ಪಡೆದಿದ್ದಾರೆ. ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿರುವ ಇವರು ಭಾರತದ ಪ್ರಮುಖ ಸ್ಥಳಗಳಲ್ಲಿ ಚಿತ್ರಕಲಾ ಪ್ರದರ್ಶನಗಳನ್ನು ಕೊಟ್ಟಿದ್ದಾರೆ. ನೂರಾರು ವಿದ್ಯಾರ್ಥಿಗಳಿಗೆ ಚಿತ್ರಕಲೆಯ ಮಾರ್ಗದರ್ಶಕರಾಗಿದ್ದಾರೆ. ■








Printed & published by Dr. Siddanagouda Patil on behalf of Navakarnataka Publications (P) Ltd., Embassy Centre, Crescent Road, Bengaluru-1 and printed at Sri Vinayaka Printers, No. 738/10, 60th Cross, 5th Block, Rajajinagar, Bengaluru-560 010. Published at Bengaluru.
Editor : Dr. Siddanagouda Patil. 

